# ಜಯಕಾಂತನ್ ಅವರ ಕಥೆಗಳು

[ಪ್ರಖ್ಯಾತ ತಮಿಳು ಲೇಖಕರಾದ ಜಯಕಾಂತನ್ ಅವರ
ಆಯ್ದ ಸಣ್ಣ ಕಥೆಗಳ ಕನ್ನಡ ರೂಪಾಂತರ]

ಸಂಪಾದಕ :
ಡಿ. ಜಯಕಾಂತನ್

ಅನುವಾದಕ :
ಹೆಚ್. ಎ. ನಾರಾಯಣ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹೊಸ ದೆಹಲಿ

First Edition 1977 (*Saka* 1899)
Reprinted 1985 (*Saka* 1907)



**Original Title:** Jayakanthan Sirukathaigal (Tamil)
**Kannada Title:** JAYAKANTHAN AVARA KATHEGALU

ರೂ. 15.00

ಅಧಿಕೃತ ಮಾರಾಟಗಾರರು:
**ಗೀತಾ ಬುಕ್ ಹೌಸ್**
ನ್ಯೂ ಸ್ಟ್ಯಾಚು ಸರ್ಕಲ್, ಮೈಸೂರು 570001

Published by the Director, National Book Trust, India, A-5 Green Park, New Delhi-110016 and printed at Jupiter Offset Press, B-10/3 Jhilmil Industrial Area. Shahdara, Delhi-110032

# ಮುನ್ನುಡಿ

ಈ ಕಥಾಸಂಗ್ರಹದಲ್ಲಿರುವ ಈ ಕಥೆಗಳು 1956ರಿಂದ 1972ರ ಅವಧಿಯಲ್ಲಿ ತಮಿಳು ನಾಡಿನ ಹಲವಾರು ಪತ್ರಿಕೆಗಳಲ್ಲಿ ಆಗಾಗ ನಾನು ಬರೆದಂತಹವು. 1950–60ರ ಅವಧಿಯಲ್ಲಿ ಲಕ್ಷ ಸಂಖ್ಯೆಯ ಅಧಿಕ ಪ್ರಸಾರವುಳ್ಳ ಪತ್ರಿಕೆಗಳಲ್ಲಿ ಸಾಹಿತ್ಯಿಕ ಯೋಗ್ಯತೆಯ ಕಥೆಗಳು ಇಲ್ಲವೆಂಬ ನಿಂದನೆ ನನ್ನಿಂದ ಪರಿಹಾರವಾಯಿತು. ಒಳ್ಳೆಯ ಕಥೆಗಳಿಗಾಗಿ ತಮಿಳು ಪತ್ರಿಕೆಗಳನ್ನು ಓದೋಣವೆಂಬ ಪರಿಸ್ಥಿತಿ ಆ ಕಾಲದಲ್ಲಿ ರೂಪುಗೊಂಡಿತು. ಅದಕ್ಕಾಗಿ ನ್ಯಾಯವಾದ ಕೃತಜ್ಞತೆಯನ್ನು ವಾಚಕರೂ ಪತ್ರಿಕೆಗಳವರೂ ನನಗೆ ಸಲ್ಲಿಸಿದರು.

ತಮಿಳು ಸಣ್ಣ ಕಥಾಪ್ರಪಂಚದಲ್ಲಿ ಈ ಅರ್ಧ ಶತಕ ಕಾಲದಲ್ಲಿ ಜಾಗತಿಕ ಮಟ್ಟಕ್ಕೆ ನಿಲ್ಲುವ ಅರ್ಹತೆಯುಳ್ಳ ಕಥೆಗಳನ್ನು ಬರೆದು ತಮಿಳು ಭಾಷೆಯನ್ನೂ ತಮ್ಮನ್ನೂ ಉನ್ನತ ಸ್ಥಿತಿಗೇರಿಸಿಕೊಂಡ ಕೆಲವು ಸಾಹಿತಿಗಳಿದ್ದಾರೆ. ಅವರಲ್ಲಿ ನಾನೂ ಒಬ್ಬ. ಈ ಸತ್ಯಾಂಶವನ್ನು ಯಾರೇ ಹೇಳಲಿ, ಅದು ಕೇವಲ ಹೊಗಳಿಕೆಯಾಗುವುದಿಲ್ಲ. ಇದನ್ನು ನಾನೇ ಹೇಳುವುದರಿಂದ ಸ್ವಪ್ರತಿಷ್ಠೆಯಾಗಬಾರದು. ಈ ಮುನ್ನುಡಿಯಲ್ಲಿ ಇದರ ವಿಚಾರವಾಗಿ ಬೇರೆ ಭಾಷೆಗಳವರೂ ಅರಿಯಲೆಂದು ಇದನ್ನೊಂದು ಸುದ್ದಿಯನ್ನಾಗಿಯೇ ನಾನು ಹೇಳುತ್ತೇನೆ.

ತಮಿಳರಿಗೂ ತಮಿಳು ಭಾಷೆಗೂ ಜಗತ್ತಿನಲ್ಲಿ ಬೇರೆ ಯಾರಿಗೂ ಇಲ್ಲದ ವೈಶಿಷ್ಟ್ಯಗಳುಂಟು. ಅದರಂತೆ ಬೇರೆ ಯಾರಿಗೂ ಇಲ್ಲದ ಕೆಲವು ದೌರ್ಭಾಗ್ಯಗಳೂ ಉಂಟು. ಮನುಷ್ಯರನ್ನೂ ಜೀವನವನ್ನೂ ಸ್ನೇಹವಾಗಿ ಕಾಣುವುದೇ ನನ್ನ ಸಿದ್ಧಾಂತ. ಮನುಷ್ಯರನ್ನೂ ಜೀವನವನ್ನೂ ಹೊಂದಿಕೊಂಡಿರುವುದೇ ಒಂದು ಭಾಷೆಯ ಮೊದಲ ವೈಶಿಷ್ಟ್ಯ. ಒಂದು ಭಾಷೆಯಲ್ಲಿ ಪ್ರಕಟವಾಗುವಂತಹ ಸೃಷ್ಟಿ ಆ ಭಾಷೆಗೆ ಮಾತ್ರವೇ ಸೇರಿದುದು ಎಂಬುದೊಂದು ವೈಶಿಷ್ಟ್ಯವಲ್ಲ. ಮನುಷ್ಯರ ಬಗ್ಗೆ ಮನುಷ್ಯನ ಚಿಂತನೆ ಭಾಷೆ, ದೇಶ ಎಂಬ ಎಲ್ಲೆಗಳನ್ನು ದಾಟಿ ಸಂಬಂಧ ಕೊಂಡಾಡುವುದು ನಾಗರೀಕವಾದ ಬೆಳವಣಿಗೆ. ಸಾಹಿತ್ಯ ನಾಗರೀಕತೆಯ ಒರೆಗಲ್ಲು. ಈ ಕತೆಗಳ ಬಗ್ಗೆ ಕಟುವಾದ ವಿಮರ್ಶೆಗಳೂ, ಎಲ್ಲೆ ಮೀರಿದ ಮೆಚ್ಚುಗೆಯ ಮಾತುಗಳೂ, ಅವು ಪ್ರಕಟವಾದ ಕಾಲದಲ್ಲಿ ಮೂಡಿದುವು. ನನ್ನ ಬೆಳವಣಿಗೆಗೆ ತಕ್ಕ ಈ ವಿಮರ್ಶೆ ವಿವಾದಗಳಲ್ಲಿ ನಾನೂ ಸೇರಿ ಉತ್ತರ ಕೊಟ್ಟದ್ದೂ ಉಂಟು; ಪಕ್ಕ ನಿಂತು ಮೌನ ಸಾಧಿಸಿದುದೂ ಉಂಟು. ಆದರೆ ಕೆಲಸ ಮಾಡದೆ ಒಂದು ಹೊತ್ತೂ ಇದ್ದುದಿಲ್ಲ.

ನಾನು ಪತ್ರಿಕೆಗಳ ಮೂಲಕವೇ ಜನಗಳಿಗೆ ಪರಿಚಯವಾದವನು. ತಮಿಳುನಾಡಿನ ಪರಿಸ್ಥಿತಿಯೇ ಹಾಗೆ. ಒಂದು 'ಕದಂಬ ರಚನೆ'ಯನ್ನು 'ಸಾಹಿತ್ಯಕ ರಚನೆ'ಯಾಗಿ ತಮಿಳು ಜನತೆ ಗುರುತಿಸಿದೆ ಎಂಬುದು ಸಾಹಿತ್ಯವನ್ನೋದಿದ ಯಾರೇ ಆಗಲಿ ಬಹುವಾಗಿ ತಲೆ ಕೆಡಿಸಿಕೊಳ್ಳಬೇಕಾದ ವಿಚಾರವಲ್ಲ. ಯಾಕೆಂದರೆ ಸೃಷ್ಟಿಸುವ ಒಬ್ಬೊಬ್ಬರಲ್ಲಿಯೂ ಏನಾದರೂ 'ಕದಂಬ ರಚಿಸಿಕೊಡಿ' ಎಂದು ಅವರು ಕೇಳುವುದಿಲ್ಲ. ಹಾಗೆ ಎಣಿಸಿ – ಅವರನ್ನು ವಶೀಕರಣ ಮಾಡಿಕೊಳ್ಳಬೇಕೆಂಬ ಭಾವದಿಂದ – ತಾನರಿತ 'ವಶೀಕರಣ ವಿದ್ಯೆ'ಗಳನ್ನೆಲ್ಲಾ ತೋರಿ, ಆ ಪ್ರಯತ್ನದ ಪದ್ಧತಿಯಾದ ಹೀನಾಯತನ ಹೊಂದಿದವರು, ಅದಕ್ಕಾಗಿ ಜನತೆಯ ಅಭಿರುಚಿಯ ಬಗ್ಗೆ ಪ್ರಲಾಪಿಸುವುದು ಇಲ್ಲಿ ಸಾಹಿತ್ಯ ವಿಮರ್ಶೆಯಾಯಿತು.

ನನಗೆ ಒದಗಿದ ಸಂದರ್ಭಗಳನ್ನು ನಾನು ಸದುಪಯೋಗಪಡಿಸಿಕೊಳ್ಳಲು ಪ್ರಯತ್ನಿಸಿದ್ದೇನೆ. ನನ್ನ ಕಥೆಗಳನ್ನು ಹೆಚ್ಚಾಗಿ ಪ್ರಚುರಿಸಿದ ತಮಿಳುನಾಡಿನ ಪತ್ರಿಕೆಗಳೆಲ್ಲಾ 'ಸಾಹಿತ್ಯದ ಉದ್ಧಾರ ಮಾಡುತ್ತವೆಯೋ ಇಲ್ಲವೇ?' ಎಂಬುದು ಬೇರೆ ವಿಚಾರ. ಇವರು ಸಾಹಿತ್ಯವನ್ನು ಬೆಳೆಸಬೇಕು ಎಂದು ವಾದಿಸಲು ನನಗೆ ಅಧಿಕಾರವಿಲ್ಲ. ನಾನು ಅವರ ಸೇವಕನೋ, ಪಾಲುದಾರನೋ ಅಲ್ಲ. ಅವರು ಪತ್ರಿಕಾ ವೃತ್ತಿಯನ್ನು ಮಾಡುತ್ತಾರೆ. ಬರಬರುತ್ತಾ ಬಹಳ ವಂಚನೆಯಿಂದ ಕೂಡಿದ ವ್ಯಾಪಾರ ವೃತ್ತಿಗಳಲ್ಲಿ ಅವರು ಕೈಹಾಕತೊಡಗಿದರು. ಒಂದು ಸಮಾಜದ ಪ್ರಜೆ ಎಂಬ ಹಕ್ಕಿನಿಂದ ಇದರ ಬಗ್ಗೆ ನನ್ನ ಖಂಡನೆ ಮತ್ತು ವಿಮರ್ಶೆ ಕೂಡ ಉಂಟು. ಸೌಜನ್ಯವಾದ ಸಂದರ್ಭಗಳಲ್ಲಿ ಆ ಪತ್ರಿಕೆಗಳಲ್ಲಿಯೇ ನನ್ನ ಈ ಅಭಿಪ್ರಾಯವನ್ನು ತಿಳಿಸಿದ್ದೇನೆ. ಓರ್ವ ಲೇಖಕನೆಂಬ ಆಧಾರದಿಂದ ನನ್ನ ಹಕ್ಕುಗಳನ್ನು ಮುಂದಿಟ್ಟು ಹೋರಾಡಲು ನನಗೆ ನಾಚಿಕೆಯೆನಿಸುತ್ತದೆ. ಯಾಕೆಂದರೆ ಈ ಜಗತ್ತಿನಲ್ಲಿ ನಿಜವಾದ ಬಂಧುಗಳು ಯಾವ ವಿಧವಾದ ಹಕ್ಕುಗಳೂ ಇಲ್ಲದೆ ಹೋರಾಟಗಳ ಹೆಸರಿನಲ್ಲಿ ಸೋಲು ಅನುಭವಿಸುವುದನ್ನು ನಾನು ಅರಿತಿದ್ದೇನೆ. ಹಕ್ಕುಗಳು ಸೌಕರ್ಯಗಳು ಎಲ್ಲಾ ಮನುಷ್ಯರಿಗೂ ಒದಗಿದಾಗಲೇ – ಎರಡನೆಯ ಪಕ್ಷವಾಗಿಯೇ, ಕಡೆಯಲ್ಲಿ ತಿಳುವಳಿಕೆಯುಳ್ಳವರಿಗೆ ಸಮರ್ಪಿತವಾಗಬೇಕು. ಹಾಗಿಲ್ಲದೆ ದೊರೆಯುವ ಹಕ್ಕುಗಳು ಸೌಕರ್ಯಗಳು ಒಳಗಿಂದೊಳಗೇ ಅವನ ಆತ್ಮದಲ್ಲಿ ಯಾವ ವಿಧವಾದ ತುಂಬು ತೃಪ್ತಿಯನ್ನೂ ಉಂಟುಮಾಡಲಾರದು. ಬದಲಾಗಿ ಅದು ಅವನ ಅಂತರಾತ್ಮದಲ್ಲಿ ತಪ್ಪು ಎಸಗಿದ ಭಾವವನ್ನು ಮೂಡಿಸುವುದು.

"ಅಗ್ನಿಪ್ರವೇಶಂ" – (ಅಗ್ನಿಪ್ರವೇಶ) 1966ರಲ್ಲಿ 'ಆನಂದ ವಿಕಟನ್' ಪತ್ರಿಕೆಗೆ ಬರೆದುದು. ಈ ಕಥೆಯಲ್ಲಿ 'ಥೀಮ್' ಎಲ್ಲರೂ ಹೇಳುವಂತೆ ಅಂತಹ ಕ್ರಾಂತಿಕಾರಕವಾದುದೇನೂ ಅಲ್ಲ. ಆದರೆ 'ಹೀಗೊಂದು ಕಥೆ ಕ್ರಾಂತಿಕಾರಕವಾದುದು' ಎಂದು ತೋರುವ ಮಟ್ಟಕ್ಕೆ ಬಹು ಮೇಲ್ನೋಟದ ಅಭಿರುಚಿಯುಳ್ಳವರ ಮಧ್ಯೆ ಇದು ಮಹತ್ತರ ಚಲನೆಯನ್ನೇ ಉಂಟುಮಾಡಿತು.

ನನ್ನ ಕಥೆಯ ಕೊನೆಯನ್ನು ಮಾರ್ಪಡಿಸಿ ಆ ಕಥಾಪಾತ್ರವನ್ನು ಕೊಂದು ಅದೇ ಶೀರ್ಷಿಕೆಯಲ್ಲಿ ಕಥೆ ಬರೆದು ತಮಿಳುನಾಡಿನ ಹಿರಿಯ ಪತ್ರಿಕೆಗಳಲ್ಲಿ ಅವುಗಳಿಗೆ ಪ್ರೋತ್ಸಾಹ ವಿತ್ತು, ನಡೆದ ಅತಿಕ್ರಮಣವನ್ನೆಲ್ಲಾ ಬಹು ಸಹನೆಯಿಂದ ನಾನು ಸಹಿಸಿಕೊಂಡಿದ್ದೇನೆ. ಲೇಖಕ ವೃತ್ತಿಗೆ ಸಹನೆ ಬಹು ಅವಶ್ಯಕವಾದುದು. ಅದರ ನಂತರ ಅದರ ಅಂತ್ಯವನ್ನು ಬದಲಾಯಿಸಿ – ನಾನು ಹೇಳಬೇಕೆಂದಿದ್ದ ಅಭಿಪ್ರಾಯವನ್ನು ಬದಲಾಯಿಸದೆ – ನಾನು ಒಂದು ಕಾದಂಬರಿಯನ್ನೇ ಬರೆಯುವುದಕ್ಕೆ ಆ 'ಅತಿಕ್ರಮಣ' ನನ್ನ "ಅಗ್ನಿಪ್ರವೇಶ"ಕ್ಕೆ ಕಾರಣವಾದುದರಿಂದ ಅವರಿಗೆ ಕೂಡ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

"ನಂದನವನತ್ತಿಲ್ ಒರ್ ಆಂಡಿ" – ನಂದನವನದಲ್ಲಿ ಒಬ್ಬ ಆಂಡಿ – 1956 ಪ್ರಾರಂಭಕಾಲದ ಕತೆಗಳಲ್ಲಿ ಒಂದು. ನಾನು ಸ್ವತಂತ್ರವಾಗಿ ಬರೆಯುವುದಕ್ಕೆ ಮೊದಲು ಒಂದು ಅಸ್ತಿಭಾರವನ್ನು ಒದಗಿಸಿಕೊಟ್ಟ, ಮಾರ್ಕ್ಸ್‌ವಾದದಲ್ಲಿ ನಂಬಿಕೆಯುಳ್ಳ ಮಿತ್ರರ ಸಾಹಿತ್ಯ ವೇದಿಕೆಗಳ ಮೇಲೆ ಒಂದಾಗಿ ಆ ಕಾಲದಲ್ಲಿ ಬೆಳಗಿದ 'ಸರಸ್ವತಿ' ಪತ್ರಿಕೆಯಲ್ಲಿ ಅದು ಪ್ರಕಟವಾಯಿತು.

"ಅಂತರಂಗಂ ಪುನಿತಮಾನದು" – ಅಂತರಂಗ ಪುನೀತ (1967 ಆನಂದ ವಿಕಟನ್).

"ಇರುಳೈ ತೇಡಿ" – ಕತ್ತಲನ್ನು ಹುಡುಕಿ – (1964 ಆನಂದ ವಿಕಟನ್) ನಾನು ಬ್ರಾಹ್ಮಣರ ಹೆಣ್ಣುಗಳನ್ನು ತಾತ್ಸಾರ ಮಾಡುತ್ತೇನೆ ಎಂದು ವದಂತಿಯುಂಟುಮಾಡಿ ಒಂದು ವಿಮರ್ಶೆಗೆ ಗುರಿಯಾದ ಕತೆಗಳಲ್ಲಿ ಇದೂ ಒಂದು.

"ಗುರುಪೀಠಂ" – ಗುರುಪೀಠ (1970 – ಆನಂದ ವಿಕಟನ್ ದೀಪಾವಳಿ ವಿಶೇಷ ಸಂಚಿಕೆ).

"ನಾನಿರುಕ್ಕಿರೇನ್" – ನಾನಿದ್ದೇನೆ (1962 – ಆನಂದ ವಿಕಟನ್). ಎಲ್ಲಾ ಬಗೆಯವ ರಿಂದಲೂ ಏಕಭಾವದಿಂದ ಮೆಚ್ಚುಗೆ ಗಳಿಸಿದ ನನ್ನ ಪ್ರಾರಂಭ ಕಾಲದ ಕಥೆಗಳಲ್ಲಿ ಒಂದು.

"ಶುಯದರ್ಶನಂ" – ನನ್ನನ್ನು ನಾನೇ ಕಂಡೆ – (1965 – ಆನಂದ ವಿಕಟನ್) ನನ್ನ ಕಥೆಗಳನ್ನು ಓದುವ ವಾಚಕರಲ್ಲಿ ನನ್ನನ್ನೇ ಒಬ್ಬ ಬ್ರಾಹ್ಮಣನಾಗಿ ಭಾವಿಸುವಂತೆ ಮಾಡಿದ ಕಥೆಯಿದು. ಬ್ರಾಹ್ಮಣರ ಮಧ್ಯೆ ಇದ್ದು ಈ ಕಥೆಗೆ ಅಪಾರ ಪ್ರತಿಭಟನೆ ಉಂಟಾಗುವು ದೆಂದು ನಿರೀಕ್ಷಿಸಿದ್ದೆ. ಆದರೆ ಹಾಗೇನೂ ಆಗಲಿಲ್ಲ. ತಮಿಳುನಾಡು ಬ್ರಾಹ್ಮಣರಲ್ಲಿ ಒಂದು ಹೊಸ ನಂಬಿಕೆ ಉಂಟಾಯಿತು.

"ತವರುಗಳ್ ಕುಟ್ರಂಗಳಲ್ಲ" – ತಪ್ಪುಗಳು ಅಪರಾಧವಲ್ಲ – (1966 – ಆನಂದ ವಿಕಟನ್) "ಅಗ್ರಹಾರತ್ತು ಪೂನೈ" – ಅಗ್ರಹಾರದ ಬೆಕ್ಕು –(1968 – ಆನಂದ ವಿಕಟನ್ ದೀಪಾವಳಿ ವಿಶೇಷ ಸಂಚಿಕೆ)

"ಒಂದು ಪಗಲ್‌ನೇರ ಪ್ಯಾಸೆಂಜರ್ ವಂಡಿಯಿಲೇ..." – ಪ್ಯಾಸೆಂಜರ್ ಗಾಡಿಯಲ್ಲಿ ಒಂದು ಹಗಲು (1964 – ಆನಂದ ವಿಕಟನ್) ಒಂದು ದೊಡ್ಡ ಕಾದಂಬರಿಗೆ ಹಾಕಿದ್ದ

ಯೋಜನೆಯಿಂದ ಎತ್ತಿಕೊಂಡ ಒಂದು ಸಣ್ಣ ಕಥೆ. ನಂತರ "ಪ್ರಳಯಂ" ಪ್ರಳಯ (1965 – ಆನಂದ ವಿಕಟನ್) ಎಂಬ ಶೀರ್ಷಿಕೆಯಲ್ಲಿ ನೀಳ್ಗತೆಗೆ ಆಧಾರವಾಯಿತು ಈ ಕತೆ. "ಪ್ರಳಯಂ" – ಪ್ರಳಯ – ಸಣ್ಣ ಕಾದಂಬರಿಯೆಂದು ಕರೆಯಲ್ಪಟ್ಟಿತು.

"ಒಂದು ವೀಡು ಪೂಟ್ಟಿ ಕಿಡಕ್ಕಿರದು" – ಬೀಗ ಹಾಕಲ್ಪಟ್ಟ ಒಂದು ಮನೆ – (1969 ಆನಂದ ವಿಕಟನ್) ನನಗೆ ಕವಿತೆಗಳಂತೆ, ನಾಟಕಗಳಂತೆ, ಲೇಖನದಂತೆ ಸಣ್ಣ ಕತೆ ಬರೆಯ ಬೇಕೆಂಬ ಕೋರಿಕೆ ಬರುವುದುಂಟು – ಎಂದರೆ ಅವುಗಳ ಛಾಯೆ ಬಹಳವಾಗಿದ್ದೂ ಸಣ್ಣ ಕಥೆಯ ಶೈಲಿ ಕೆಡದೆ ನಾನು ಕೆಲವು ಕಥೆಗಳನ್ನು ಬರೆದಿರುವುದನ್ನು ನಂತರ ಕಂಡುಕೊಂಡೆ. ಈ ಕತೆ ನನ್ನ ಮನಸ್ಸಿನಲ್ಲಿ ನಡೆದ ಏಕಾಂಕ ನಾಟಕದ ಒಂದು ವರದಿ.

"ಶಿಲುಪ್ಪೈ" – ಶಿಲುಬೆ – (1958) – ಕಮ್ಯೂನಿಸ್ಟ್ ಪಕ್ಷದ ಸಾಹಿತ್ಯ ಪತ್ರಿಕೆಯಾದ 'ತಾಮರೆ'ಯಲ್ಲಿ ಪ್ರಕಟವಾಯಿತು.

"ನಾನೆನ್ನ ಶೈಯ್ಯಟ್ಟುಂ ಶೊಲ್ಲುಂಗೋ..." – ನಾನೇನು ಮಾಡಲಿ ಹೇಳಿ – (1968 –ಆನಂದ ವಿಕಟನ್) ತಮಿಳುನಾಡಿನ ಪ್ರಜೆಗಳ ಸಾಮಾಜಿಕ ಜೀವನದಲ್ಲಿ ಒಂದು ಸಾಂಕ್ರಾಮಿಕ ರೋಗದಂತೆ ಹರಡಿ ಅವರನ್ನು ಸೂರೆ ಮಾಡಿದ ರಾಜ್ಯಾಂಗದ ಜೂಜಾಟ ವಾದ ಲಾಟರಿ ಟಿಕೆಟ್ ಮೋಹವನ್ನು ಕಂಡು ಉಂಟಾದ ಭೀತಿಯಿಂದ ಮೂಡಿದ ಕಲ್ಪನೆ ಅದು.

"ಪುದು ಶೆರುಪ್ಪು ಕಡಿಕ್ಕುಂ" – ಹೊಸ ಚಪ್ಪಲಿ ಕಚ್ಚುತ್ತದೆ (1971 – ಆನಂದ ವಿಕಟನ್)

"ನಿಕ್ಕಿ" – ನಿಕ್ಕಿ – (1969 – 'ಕಲೈಮಗಳ್' ದೀಪಾವಳಿ ವಿಶೇಷ ಸಂಚಿಕೆ). ನಾನು ಮನೆಯಲ್ಲಿ ಸಾಕುವ ಪ್ರಾಣಿಗಳನ್ನು ಕುರಿತು ಹಲವಾರು ಕಥೆಗಳನ್ನು ಬರೆದಿದ್ದೇನೆ. ನನಗೆ ಪ್ರಾಣಿಗಳೊಂದಿಗೆ ಸಂಬಂಧ ಹಿಡಿಸುವುದಿಲ್ಲ. ಆದರೂ ನಾನು ಎಷ್ಟು ರಹಸ್ಯವಾಗಿ ಅವುಗಳಲ್ಲಿ ಪ್ರೀತಿಯಿಟ್ಟಿದ್ದೇನೆ, ಅದರಲ್ಲಿ ಎಷ್ಟು ರಸಿಕತನವಿದೆ ಎಂದೆಲ್ಲಾ ನನಗೆ ತಿಳಿಸಿ ಕೊಟ್ಟ ಕಥೆ ಇದು.

ಈ ಕಥೆಗಳ ಸಾಹಿತ್ಯ ಮಟ್ಟವನ್ನು ಕುರಿತು ಹೇಳುವುದು ನನ್ನ ಕೆಲಸವಲ್ಲ. ಈ ಕಥೆ ಗಳಲ್ಲಿ ಒಂದೊಂದರ ಹಿನ್ನೆಲೆಯಲ್ಲೂ ಇದನ್ನು ಬರೆದವನಿಗೂ ಸಮಾಜಕ್ಕೂ ಇರುವ ಸಂಬಂಧದ ಬಗ್ಗೆ ಇನ್ನೊಂದು ಕಥೆಯುಂಟು. ಅದನ್ನು ಕುರಿತು ಹೇಳುವುದು ಈ ಮುನ್ನುಡಿಯ ಗುರಿಯಲ್ಲ. ಇಲ್ಲಿ ನಾನು ಹೇಳಿರುವುದು ಕೇವಲ ವಿವರಗಳನ್ನು ಮಾತ್ರ. ಪ್ರತ್ಯೇಕವಾದ ನನ್ನ ಹೆಸರನ್ನೂ, ದೊಡ್ಡತನ ಸಣ್ಣತನಗಳಿಲ್ಲದೆ ಈ ಕಾಲದಲ್ಲಿ ಬಾಳುವ ಭಾರತದ ಸಮಾಜಕ್ಕೆ ಸೇರಿದ ಸಾಧಾರಣ ಮನುಷ್ಯರ ಮೆಚ್ಚ ತಕ್ಕ ಗುಣಗಳನ್ನು ಹಲವು ಭಾಷೆಗಳಲ್ಲಿ ಹೋಗಿ ಇವು ಮಾತನಾಡಿದರೆ ನನಗೆ ಅದರಲ್ಲಿ ಆನಂದವುಂಟು.

ಇವನ್ನು, ನಾನು ಅರಿಯದ ಭಾಷೆಗಳಲ್ಲಿ ತಿಳಿಸುವ ಮೇಲ್ಪಟ್ಟದ ಜವಾಬ್ದಾರಿಯನ್ನು ಹೊತ್ತು, ನನ್ನನ್ನೂ ನನ್ನ ಭಾಷೆಯನ್ನೂ ಗೌರವಿಸುವ ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ – ಸಂಸ್ಥೆಯವರಿಗೆ ನಾನು ನಿರಂತರವಾಗಿ ಮನಃಪೂರ್ವಕ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಮದರಾಸು – 31
12–2–1973

– ತ. ಜಯಕಾಂತನ್

# ಪರಿವಿಡಿ

ಆ ಗುಂಪಿನಲ್ಲಿ ಅರ್ಧವನ್ನು ನುಂಗಿ ನೀರು ಕುಡಿದು ತೇಗುತ್ತಾ ಬಸ್ ಹೊರಟಿತು.

ಬಸ್ ನಿಲ್ದಾಣದಲ್ಲಿ ಇನ್ನು ಹತ್ತು ಹನ್ನೆರಡು ವಿದ್ಯಾರ್ಥಿನಿಯರು ಮಾತ್ರವೇ ನಿಂತಿದ್ದರು.

ಮಳೆಗಾಲವಾದ್ದರಿಂದ ಬಹಳ ಬೇಗನೆ ಕತ್ತಲಾಗುತ್ತಿತ್ತು.

ಮಳೆಗೆ ಕೋಟನ್ನು ಹೊದ್ದ ಸೈಕಲ್ ರಿಕ್ಷಾದವನೊಬ್ಬ ಅಡ್ಡವಾಗಿ ನಿಂತಿದ್ದ ಅನಾಥ ಪಶುವನ್ನು ಕುರಿತು ಶಬ್ದ ಕುಂದಿಹೋದ ಬೆಲ್ ಹೊಡೆಯುತ್ತಾ ಬೇಗ ಬಂದ. ಅಷ್ಟಾದರೂ ಆ ಪಶು ಪಕ್ಕಕ್ಕೆ ಸರಿಯಲಿಲ್ಲ. ಅಲ್ಲಿ ವಿದ್ಯಾರ್ಥಿನಿಯರು ನಿಂತಿದ್ದುದನ್ನೂ ಲಕ್ಷಿಸದೆ ಅವನು ಅಸಹ್ಯವಾಗಿ ನಿಂದಿಸಿಕೊಂಡು ಸಾಗಿದ. ಬಹುದೂರ ಹೋದಮೇಲೆ ಅವನ ನಿಂದನಾಪದಪುಂಜ ಆ ವಿದ್ಯಾರ್ಥಿನಿಯರ ನಸಪಿಗ ಮತ್ತೆ ಮತ್ತೆ ಬಂದು ಅವರು ನಗುವಿನ ಹೊಳೆಯಲ್ಲಿ ತೇಲಿಹೋದರು.

ಇಷ್ಟಾದಮೇಲೆ ಆ ರಸ್ತೆಯಲ್ಲಿ ಏನೂ ಸ್ವಾರಸ್ಯ ಘಟನೆಯಿರಲಿಲ್ಲ. ಜಿಗುಪ್ಸೆಯು ಆ ಮೌನ ಸನ್ನಿವೇಶದಲ್ಲಿ ಬೇಸರ ತರುವ ತೀವದಿಂದ ವಿದ್ಯಾರ್ಥಿನಿಯರ ಕಾಲುಗಳು ಸೆಟೆದುವು.

ಬಸ್ ಬರಲೇ ಇಲ್ಲ.

ಆ ಅನಾಥ ಪಶು ಮಾತ್ರ ಇನ್ನೂ ರಸ್ತೆಯ ಮಧ್ಯೆಯೇ ನಿಂತಿತ್ತು. ಅದು ಬೀದಿ ಬಸವ. ವೃದ್ಧಾಪ್ಯದಲ್ಲಿತ್ತು. ಕೊಂಬುಗಳ ಪೈಕಿ ಒಂದು ಅದರ ಹಣೆಯ ಮೇಲೆ ನೇತಾಡುತ್ತಿತ್ತು. ಮಳೆಯ ನೀರು ಅದರ ಬೆನ್ನಿನ ಮೇಲೆ ಬಿದ್ದು ಮುತ್ತು ಮುತ್ತಾಗಿ ಚೆಲ್ಲಿ ಮಾಸಲು ಬಣ್ಣದ ಅದರ ಹೊಟ್ಟೆಯ ಎರಡು ಕಡೆಗಳಲ್ಲೂ ಕಪ್ಪು ಗೆರೆಗಳಾಗಿ ಹರಿಯುತ್ತಿತ್ತು. ಆಗಾಗ ಅದರ ಶರೀರದ ಯಾವುದಾದರೊಂದು ಭಾಗ – ಪ್ರಮುಖವಾಗಿ ಬಲ ತೊಡೆಯ ಮೇಲ್ಭಾಗ – ಚಳಿಯಿಂದ ಬಲವಾಗಿ ನಡುಗುತ್ತಿತ್ತು.

ಎಷ್ಟು ಹೊತ್ತೆಂದು ಈ ಮುದಿ ಪಶುವನ್ನು ನೋಡಿ ಸಂತಸಪಡಬೇಕು? ಆ ಗುಂಪಿನಲ್ಲಿ ಸಕಲ ರೀತಿಯಲ್ಲೂ ಪ್ರತ್ಯೇಕತೆಯಿಂದಿದ್ದ ಹುಡುಗಿ ನಿಟ್ಟುಸಿರುಬಿಟ್ಟು ತಲೆಯೆತ್ತಿ ನೋಡಿದಳು.

—ರಸ್ತೆಯ ಮೂಲೆಯಿಂದ ಬಸ್ ಬರುವ ಶಬ್ದ ಕೇಳಿಸತೊಡಗಿತು.

ಬಸ್ ಬಂದು ನಿಲ್ಲಲು ಸ್ಥಳ ಬಿಟ್ಟುಕೊಟ್ಟು ಆ ಪಶು ರಸ್ತೆಯ ಮಧ್ಯದಿಂದ ನಿಧಾನವಾಗಿ ಹೆಜ್ಜೆ ಹಾಕಿ ಆ ವಿದ್ಯಾರ್ಥಿನಿಯರಿದ್ದ ಪ್ಲಾಟ್ ಫಾರಂನಲ್ಲಿ ತನಗೂ ಸ್ವಲ್ಪ ಸ್ಥಳ ಕೇಳುವಂತೆ ದೈನ್ಯವಾಗಿ ನಿಂತಿತು.

"ಹೇ, ಇಟ್ ಈಸ್ ಮೈ ಬಸ್"—ಆ ಗುಂಪಿನಲ್ಲೆ ಹಿರಿಯವಳಾದವಳೊಬ್ಬಳು ಚಿಕ್ಕ ಮಗುವಿನಂತೆ ಸಂತಸದಿಂದ ಕುಣಿದಳು.

" ಬೈ—ಬೈ "

" ಟಾ—ಟಾ "

ವಿದ್ಯಾರ್ಥಿನಿಯರನ್ನು ಆ ಬಸ್ ಕರೆದೊಯ್ದ ಮೇಲೆ ಆ ಪ್ಲಾಟ್‌ಫಾರಂನಲ್ಲಿ ಇಬ್ಬರು ವಿದ್ಯಾರ್ಥಿನಿಯರು ಮಾತ್ರ ಉಳಿದರು. ಅವರಲ್ಲಿ ಒಬ್ಬಳು ಆ ಹುಡುಗಿ. ಮತ್ತೊಬ್ಬಳು ದೊಡ್ಡವಳು—ಇಂದಿನ ಸರಾಸರಿ ಕಾಲೇಜು ವಿದ್ಯಾರ್ಥಿನಿಯ ಮಾದರಿ. ಅವಳಲ್ಲಿ ಮಾತ್ರ ಕೊಡೆ ಇತ್ತು. ಅವಳ ಕರುಣಾಶ್ರಯದಲ್ಲಿ ಆ ಹುಡುಗಿ ಅಡಗಿ ನಿಂತಿದ್ದಳು. ಆ ಹುಡುಗಿಯನ್ನು ನೋಡಿದರೆ ಕಾಲೇಜಿನಲ್ಲಿ ಓದುವವಳಂತೆ ಕಾಣಿಸುತ್ತಿರಲಿಲ್ಲ. ಹೈಸ್ಕೂಲ್ ವಿದ್ಯಾರ್ಥಿನಿಯೆನ್ನುವಂತಿದ್ದಳು. ಅವಳನ್ನು ನೋಡಿದೊಡನೆ ಇವಳು ಅನುಕೂಲಸ್ಥರ ಮನೆಯ ಹುಡುಗಿಯಲ್ಲ ಎಂದು ಹೇಳಬಹುದಾಗಿತ್ತು. ಒಂದು ಹಸಿರು ವರ್ಣದ ಲಂಗ, ವರ್ಣ ಹೊಂದಾಣಿಕೆಯೇ ಇಲ್ಲದ—ಬಹುಶಃ ತಾಯಿಯ ಸೀರೆಯಿಂದ ಹರಿದ ಇಂತಹ ವರ್ಣವೆಂದೇ ಹೇಳಲಾಗದಂತಹ ಬಣ್ಣ ಕಳೆದ ಒಂದು ವಿಧವಾದ ಕೆಂಪು ದಾವಣಿ. ಕೊರಳಲ್ಲಿ ನೂಲಿನಿಂದ ಪೋಣಿಸಿ ಪ್ರೆಸ್‌ಬಟನ್ ಹೊತ್ತ ಕರಿಮಣಿಯ ಸರ, ಕಿವಿಯಲ್ಲಿ ಕಳಾವರ್ ಆಕಾರದ, ಎಣ್ಣೆ ಇಳಿಯಲೆಂದೇ ಇಟ್ಟಂತಹ—ಅದರಲ್ಲೂ ಒಂದು ಕಲ್ಲು ಇಲ್ಲದ—ಓಲೆ ... 'ಈ ಮುಖಕ್ಕೆ ಆಭರಣಗಳ ಆವಶ್ಯಕತೆಯಿಲ್ಲ' ಎನ್ನುವಂತೆ ಮೂಡಿ ಅರಳಿ ಹೊಳೆಯುವ ಕಳಂಕರಹಿತ ಮುಗ್ಧ ನಯನಗಳು...

ಅವಳನ್ನು ನೋಡಿದ ಯಾರಿಗಾದರೂ ಜಗತ್ತಿನಲ್ಲೇ ಅತ್ಯುನ್ನತ ಮೌಲ್ಯದ ಯಾವುದೇ ವಸ್ತುವಿಗಿಲ್ಲದ ಪ್ರಕಾಶಮಾನವಾದ, ಆಗತಾನೆ ಅರಳಿನಿಂತ ಪುಷ್ಪದ ನೆನಪೇ ಬಂದೀತು. ಅದೂ ಈಗತಾನೇ ಮಳೆಯಲ್ಲಿ ತೊಯ್ದ ತೇವದಲ್ಲಿ ನಿಂತು ನಿಂತ ದಂತ ವರ್ಣದ ಪಾದಗಳು ನೀಲಿಗಟ್ಟಿದ್ದುವು. ಹಳೆಯ ದಾವಣಿ ಮತ್ತು ರವಿಕೆ ದೇಹಕ್ಕೆ ಅಂಟಿಕೊಂಡಿದ್ದುವು. ಸಣ್ಣ ಆಕಾರದಲ್ಲಿ ದೇವಿಯ ಶಿಲಾ ವಿಗ್ರಹದಂತೆ ನಿಂತ ಅವಳನ್ನು ಹಾಗೆಯೇ ಕೈಗಳಲ್ಲಿ ಎತ್ತಿಕೊಂಡು ಹೋಗಿಬಿಡೋಣವೆಂಬ ಭಾವ ಕೂಡ ಮೂಡುತ್ತಿತ್ತು.

"ಬಸ್ ಬರಲಿಲ್ಲವಲ್ಲ...ಗಂಟೆ ಎಷ್ಟಾಯಿತು ?" ಎಂದು ಕೊಡ ಹಿಡಿದಾಕೆಯನ್ನು ಕೊರಳೆತ್ತಿ ಮೇಲೆ ನೋಡಿ ಕೇಳಿದಳು ಹುಡುಗಿ.

"ಸಿಕ್ಸ್ ಆಗುತ್ತಾ ಬಂತಲ್ಲಮ್ಮ" ಎಂದು ಕೈ ಗಡಿಯಾರವನ್ನು ನೋಡಿ ಬೇಸರದಿಂದ ಹೇಳುವ ವೇಳೆಗೆ "ಅದೋ ಬಸ್ ಬರುತ್ತಿದೆ. ಅದು ನನ್ನ ಬಸ್ಸಾದರೆ ನಾನು ಹೊರಟೆ" ಎಂದು ಆ ಹಿರಿಯಾಕೆ ಕೊಡೆಯನ್ನು ಮಡಿಸಿದಳು.

"ಓ ಯಸ್ ಮಳೆಯೂ ನಿಂತಿದೆ. ನನ್ನ ಬಸ್ಸೂ ಬಂದುಬಿಡುತ್ತದೆ. ಐದೂ ಮುಕ್ಕಾಲು ಗಂಟೆಗೆ ಟರ್ಮಿನಸ್‌ನಿಂದ ಒಂದು ಬಸ್ ಹೊರಡುತ್ತದೆ. ಬರುವ ಬಸ್ಸು ನನ್ನದಾದರೆ ನಾನೂ ಹೊರಟುಬಿಡುತ್ತೇನೆ. ಎಂದಳು ಹುಡುಗಿ, ಒಪ್ಪಂದಕ್ಕೆ ಬಂದಂತೆ. ಕಂಠದ ಮಾಧುರ್ಯ, ನುಡಿಯ ಮುದ್ದುತನದಿಂದ ಅವಳು ಸಣ್ಣ ಮಗುವಿನಂತೆ ಆ ಹಿರಿಯಳಿಗೆ ತೋರಿತು. ಅವಳಿಗೇನೆನಿಸಿತೋ ಆ ಹುಡುಗಿಯ ಕೆನ್ನೆಯನ್ನು ಹಿಡಿದು ಮೃದುವಾಗಿ ಚಿವುಟಿ...

" —ಜಾಣೆಯಾಗಿ ಜಾಗರೂಕತೆಯಿಂದ ಮನೆಗೆ ಹೋಗು " ಎಂದು ತನ್ನ ಬೆರಳು ಗಳನ್ನು ಮುತ್ತಿಟ್ಟುಕೊಂಡಳು.

ಬಸ್ ಬರುತ್ತಿದೆ...ಒಂದರ ಹಿಂದೆ ಒಂದು ಎರಡು ಬಸ್‌ಗಳು ಬಂದುವು. ಮೊದಲು ಬಂದ ಆ ಬಸ್ಸಿನಲ್ಲಿ ಹಿರಿಯವಳು ಹತ್ತಿದಳು.

"ಬೈ...ಬೈ"

"ಥ್ಯಾಂಕ್ಯೂ ನನ್ನ ಬಸ್ಸೂ ಬಂದಿತು " ಎಂದು ಹೇಳಿ ಹಿರಿಯವಳನ್ನು ಬೀಳ್ಕೊಂಡ ಹುಡುಗಿ ಹಿಂದೆ ಬಂದ ಬಸ್ಸಿನ ನಂಬರು ನೋಡಿ ನಿರಾಶೆಗೊಂಡಳು. ಅವಳ ಮುಖ ಭಾವವನ್ನು ನೋಡಿಯೇ ಅವಳು ನಿರೀಕ್ಷಿಸುತ್ತಿರುವುದು ಆ ಬಸ್ಸನ್ನಲ್ಲ ಎಂಬುದನ್ನು ಚಾಲಕ ಅರ್ಥಮಾಡಿಕೊಂಡ. ಬಸ್ ನಿಲ್ದಾಣದಲ್ಲಿ ಬೇರೆ ಯಾರೂ ಇರಲಿಲ್ಲವಾದುದರಿಂದ ಬಸ್ಸನ್ನು ನಿಲ್ಲಿಸದೆಯೇ ಮುಂದೆ ಸಾಗಿದ.

ಆ ವಿಶಾಲವಾದ ಆದರೆ ಜನಸಂದಣಿಯೇ ಇಲ್ಲದ ಪ್ರದೇಶದಲ್ಲಿ ಆ ಹುಡುಗಿ ಏಕಾಕಿ ಯಾಗಿ ನಿಂತಿದ್ದಳು. ಅವಳಿಗೆ ಜೊತೆಯಾಗಿ ಆ ವೃದ್ಧ ಪಶುವೂ ನಿಂತಿತ್ತು. ದೂರದಲ್ಲಿ ಎದುರುಗಡೆ ಕಾಲೇಜಿನ ಹೊರಾಂಗಣದಲ್ಲಿ ಆಗೀಗ ಯಾರಾದರೊಬ್ಬರು ನಡೆದಾಡು ವುದು ಮಾತ್ರ ಕಾಣಿಸುತ್ತಿತ್ತು. ಥಟ್ಟನೆ ತೆರೆಯಿಳಿದಂತೆ ಕತ್ತಲು ಕವಿಯಿತು. ಅದರ ಹಿಂದೆಯೇ ಬಿರುಗಾಳಿಯು ಬೀಸಿ ಅಲ್ಲಿನ ಮರ ಗಿಡಗಳ ಎಲೆಗಳ ಮೇಲಿಂದ ನೀರು ಹನಿ ಗಳು ಫಟಪಟನೆ ಉದುರಿದುವು. ಅವಳು ಮರಕ್ಕೆ ಒರಗಿ ನಿಂತಳು. ಸ್ವಲ್ಪ ನಿಂತಿದ್ದ ಆ ಮಳೆ ಇದ್ದಕ್ಕಿದ್ದಂತೆ ಹೆಚ್ಚಿತು. ಅಡ್ಡವಾಗಿ ದಾರಿಯಾಚೆ ಇದ್ದ ಕಾಲೇಜಿನೊಳಕ್ಕೇ ಪುನಃ ಹೋಗಲೆಂದು ಅವಳು ರಸ್ತೆಯ ಎರಡು ಕಡೆಯೂ ನೋಡಿದಳು. ದೊಡ್ಡ ಕಾರೊಂದು ಅವಳ ದಾರಿಗಡ್ಡಲಾಗಿ ಬಂದು ಅವಳ ಮುಂದೆ ಥಟ್ಟನೆ ನಿಂತಿತು. ಅದು ನಿಂತ ವೇಗಕ್ಕೆ ಹಿಂದುಮುಂದು ಸುಂದರವಾಗಿ ಅಲುಗಾಡಿತು.

ಅವಳು ಆ ಸುಂದರವಾದ ಕಾರನ್ನು ಕೊನೆಯಿಂದ ಡ್ರೈವರ್ ವರೆಗೆ ಅಚ್ಚರಿಯಿಂದ ನೋಡಿದಳು.

ಆ ಕಾರನ್ನು ಡ್ರೈವ್ ಮಾಡಿಕೊಂಡು ಬಂದ ತರುಣ ಆಕರ್ಷಕ ನಸುನಗೆಯಿಂದ ತನ್ನ ಎಡಗಡೆಗೆ ಬಾಗಿ ಹಿಂದಿನ ಸೀಟಿನ ಬಾಗಿಲನ್ನು ತೆರೆದ.

" ಪ್ಲೀಸ್ ಗೆಟ್ ಇನ್...ಐ ಕೆನ್ ಡ್ರಾಪ್ ಯು ಅಟ್ ಯುವರ್ ಪ್ಲೇಸ್ " ಎಂದು ಕರೆದ. ಆ ಹುಡುಗಿ ಕಣ್ಣಾಲೆಗಳನ್ನು ಅರಳಿಸಿ ಅದೆಷ್ಟು ಆಶ್ಚರ್ಯದಿಂದ ಆ ಕಾರನ್ನು ನೋಡುತ್ತಿದ್ದಳೋ ಅಂತೆಯೇ ಅವನೂ ಅವಳನ್ನು ದೃಷ್ಟಿಸಿದ.

ಅವನ ಮುಖವನ್ನು ಕಂಡ ಆ ಹುಡುಗಿಯ ಕಿವಿ ಮೂಗುಗಳಂಚಲ್ಲಿ ಕೆಂಪೇರಿತು : "ನೋ...ಥ್ಯಾಂಕ್ಸ್ ಸ್ವಲ್ಪ ಹೊತ್ತಿನಲ್ಲಿ ಮಳೆ ನಿಲ್ಲಬಹುದು. ನಂತರ ನಾನು ಬಸ್ಸಿನಲ್ಲೇ ಹೋಗುತ್ತೇನೆ... "

"ಓಹ್ ಇಟ್ ಈಸ್ ಆಲ್‌ರೈಟ್... ಗೆಟ್ ಇನ್" ಎಂದು ಅವನು ಆತುರಪಡಿಸಿದ. ವರ್ಷಧಾರೆಯ ನಡುವೆ ಕೃಶವಾಗಿ ನಿಂತಿದ್ದ ಆ ಹುಡುಗಿಯ ಕರಗಳನ್ನು ಹಿಡಿದೆಳೆಯ ದಿದ್ದುದೇ ಹೆಚ್ಚು...

ಅವಳೊಂದು ಬಾರಿ ಹಿಂತಿರುಗಿ ನೋಡಿದಳು. ಮಳೆಗೆ ಆಶ್ರಯವಾಗಿದ್ದ ಆ ವೃಕ್ಷದ ಆವರಣವನ್ನು ವೃದ್ಧ ಪಶುವು ಆಕ್ರಮಿಸಿಕೊಂಡಿತ್ತು.

ಅವಳ ಮುಂದೆ ಕಾರಿನ ಬಾಗಿಲು ಇನ್ನೂ ತೆರೆದೇ ಇತ್ತು. ತನಗಾಗಿ ತೆರೆದಿದ್ದ ಆ ಬಾಗಿಲಿನಿಂದ ಕಾರಿನೊಳಕ್ಕೆ ಮಳೆಯ ಹನಿಗಳು ಬೀಳುವುದನ್ನು ಕಂಡ ಆ ಹುಡುಗಿ ಅದನ್ನು ಮುಚ್ಚಲು ಹೋದಾಗ, ಅವಳ ಕರದ ಮೇಲೆ ಅವನು ಕರವಿಟ್ಟು ಒತ್ತಲು ಅವಳು ಕಂಪಿಸಿ ಕರವನ್ನು ಹಿಂದಕ್ಕೆ ಎಳೆದುಕೊಂಡಳು. ಅವನ ಮುಖವನ್ನು ನೆಟ್ಟ ದೃಷ್ಟಿಯಿಂದ ನೋಡಿದಳು. ಅವನ ಮಂದಹಾಸ ಎಷ್ಟು ಸುಂದರ.

ಈಗ ಅವನೂ ಕಾರಿನಿಂದ ಕೆಳಗಿಳಿದು ಅವಳೊಂದಿಗೆ ಮಳೆಯಲ್ಲಿ ನೆನೆಯುತ್ತ ನಿಂತ...

"ಹುಂ...ಗೆಟ್ ಇನ್."

ಈಗ ಅವನ ಕರೆಯನ್ನು ನಿರಾಕರಿಸಲಾಗಲಿಲ್ಲ...ಅವಳು ಒಳಕ್ಕೆ ಹತ್ತಿ ಕುಳಿತನಂತರ ಅವನ ಕೈ ಅವಳನ್ನು ಬಂಧಿಸಿದಂತೆ ಕಾರಿನ ಬಾಗಿಲನ್ನು ರಭಸದಿಂದ ಮುಚ್ಚಿದ. ಅಲೆಗಳ ಮೇಲೆ ತೇಲುವಂತೆ ಆ ಕಾರು ಆ ತೇವದ ರಸ್ತೆಯಲ್ಲಿ ಸರಾಗವಾಗಿ ಹೊರಟಿತು.

ಅವಳ ನಯನಗಳು ಕಾರಿನೊಳಗೆಲ್ಲಾ ನೋಡಿದುವು. ತಂಪಾದ ನೀಲಿ ವರ್ಣ ಅವಳನ್ನು ಕನಸಿನಂತೆ ಮೈಮರೆಸಿತು. ಇಷ್ಟು ಹೊತ್ತು ಮಳೆಯ ಚಳಿಯಲ್ಲಿ ನಿಂತಿದ್ದ ಆ ದೇಹಕ್ಕೆ ಕಾರಿನೊಳಗಿನ ಬೆಚ್ಚನೆಯ ವಾತಾವರಣ ಹಿತಕರವಾಗಿತ್ತು. ಈ ಕಾರು ನೆಲದ ಮೇಲೆ ಸರಿಯುವಂತೆ ಅನ್ನಿಸಲಿಲ್ಲ. ಭೂಮಿಯಿಂದ ಒಂದಡಿ ಎತ್ತರದಲ್ಲಿ ಈಜಾಡಿ ಹೋಗು ತ್ತಿದ್ದಂತೆ ಭಾಸವಾಗುತ್ತಿತ್ತು.

"ಸೀಟೆಲ್ಲಾ ಎಷ್ಟು ಅಗಲವಾಗಿದೆ! ಧಾರಾಳವಾಗಿ ಒಬ್ಬರು ಮಲಗಬಹುದು" ಎಂಬ ಭಾವನೆ ಬಂದೊಡನೆ ಸೀಟಿನ ಒಂದು ಕಡೆಗೆ ಪುಸ್ತಕಗಳನ್ನು ಎದೆಗವಚಿಕೊಂಡು ಕುಳಿತುಕೊಂಡಿದ್ದುದು ಅವಳಿಗೆ ಅದು ತುಂಬಾ ಅನಾಗರೀಕತನವೆನಿಸಿತು. ಪುಸ್ತಕ ಗಳನ್ನೂ ಚಿಕ್ಕ ಎವರ್ ಸಿಲ್ವರ್ ಟಿಫಿನ್ ಬಾಕ್ಸನ್ನೂ ಪಕ್ಕದಲ್ಲಿಟ್ಟು ಆರಾಮವಾಗಿ ಗಂಭೀರ ವಾಗಿ ಕುಳಿತಳು.

'ಈ ಕಾರೇ ಒಂದು ಮನೆಯಂತಿದೆ. ಇಂತಹ ಒಂದು ಕಾರು ಇದ್ದರೆ ಮನೆಯೇ ಬೇಡ —ಇವನಿಗೂ...ಅಯ್ಯೊ—ಇವರಿಗೂ ಒಂದು ಮನೆಯಿರಬಹುದು; ಇಲ್ಲವೆ?...ಕಾರೇ ಹೀಗಿದ್ದರೆ ಈ ಕಾರಿನ ಮಾಲೀಕರ ಮನೆ ಇನ್ನು ಹೇಗಿರಬಹುದು? ದೊಡ್ಡದಾಗಿಯೇ ಇರಬಹುದು! ಅರಮನೆಯಂತೆ ಇದ್ದೀತು...ಅಲ್ಲಿ ಯಾರಾರೋ ಇರುತ್ತಾರೆ...ಇವರು ಯಾರು ಎಂಬುದೇ ನನಗೆ ತಿಳಿಯದಲ್ಲ...ಹೇ ಇದೇನು ಮಧ್ಯೆ?...ಎರಡು ಸೀಟುಗಳ ಮಧ್ಯೆ ಎಳೆದರೆ ಮೇಜಿನಂತೆ ಆಯಿತು. ಅದರ ಮೇಲೆ ಪುಸ್ತಕಗಳನ್ನು ಇಟ್ಟುಕೊಂಡು

ಓದಬಹುದು, ಬರೆಯಬಹುದು...ಇಲ್ಲದಿದ್ದರೆ ಈ ಕಡೆ ಒಬ್ಬರು ಆ ಕಡೆ ಒಬ್ಬರು ತಲೆಯಿಟ್ಟು ಸುಖವಾಗಿ ಮಲಗಬಹುದು. ಈ ಸಣ್ಣ ಲೈಟು ಎಷ್ಟು ಸುಂದರವಾಗಿದೆ, ತಾವರೆ ಹೂ ಮೊಗ್ಗಿನಂತಿದೆ, ಉಹುಂ, ಶ್ವೇತತಾವರೆ ಪುಷ್ಪದಂತಿದೆ. ಇದನ್ನು ಹತ್ತಿಸಿ ನೋಡಲೆ...ಛೀ ಇವರು ಕೋಪಿಸಿಕೊಂಡರೆ ? "

—" ಅದರ ಕೆಳಗೆಯೇ ಇದೆ ನೋಡು...ಸ್ವಿಚ್ " ಎಂದು ಅವನು ಕಾರನ್ನು ಓಡಿಸುತ್ತಿದ್ದಂತೆಯೇ ಮುಂದುಗಡೆಯಿದ್ದ ಸಣ್ಣ ಕನ್ನಡಿಯಲ್ಲಿ ಅವಳನ್ನು ನೋಡಿ ಮಂದಹಾಸದಿಂದ ಹೇಳಿದ.

ಅವಳು ಆ ಸ್ವಿಚ್ ಹಾಕಿ ಲೈಟು ಪ್ರಕಾಶಿಸುವ ಸೌಂದರ್ಯದ ಅನುಭವ ಪಡೆದಳು. ನಂತರ 'ಪವರ್ ವೇಸ್ಟ್ ಮಾಡಬಾರದು' ಎಂದು ಮಿತವ್ಯಯ ವಿಚಾರದೊಂದಿಗೆ ಅದನ್ನು ಆರಿಸಿದಳು.

ನಂತರ ತನ್ನನ್ನು ಒಮ್ಮೆ ನೋಡಿಕೊಂಡು ಶಿರದಿಂದ ಧಾರೆಯಿಡುತ್ತಿದ್ದ ನೀರನ್ನು ತನ್ನ ಕರಗಳಿಂದ ಒತ್ತಿ ಒರೆಸಿಕೊಂಡಳು.

'ಹುಂ ಇವತ್ತೇ ಈ ದರಿದ್ರ ದಾವಣಿಯನ್ನು ಹೊದ್ದು ಬಂದೆನಲ್ಲಾ' ಎಂದು ಮನಸ್ಸಿನಲ್ಲಿ ಬೇಸರಗೊಂಡೇ ಅದರ ಸೆರಗನ್ನು ಹಿಂಡುತ್ತಿರುವಾಗ—ಅವನು ಸ್ಟೇರಿಂಗಿನ ಎಡಭಾಗದಲ್ಲಿದ್ದ ಸಣ್ಣ ಪೆಟ್ಟಿಗೆಯನ್ನು ತೆಗೆದು 'ಟಪ್' ಎಂದು ಶಬ್ದವಾಗಲು ಅವಳು ತಲೆ ಎತ್ತಿ ನೋಡಿದಳು. ಅರೆ, ಅರೆಯನ್ನು ತೆಗೆದೊಡನೆ ಕೆಂಪು ಬಲ್ಬ್ ಹತ್ತಿತಲ್ಲ'—ಅವನು ಒಂದು ಚಿಕ್ಕ ಟರ್ಕಿ ಟವಲನ್ನು ತೆಗೆದು ಅವಳಿಗೆ ನೀಡಿದ.

'ಥ್ಯಾಂಕ್ಸ್'—ಆ ಟವಲಿನಿಂದ ತಲೆ ಮೊಳಕೈ ಮತ್ತು ಮುಖ ಒರಸಿಕೊಳ್ಳುತ್ತಾ 'ಅಬ್ಬಾ ಏನು ಸುಗಂಧ'—ಎಂದುಕೊಂಡು ಅದನ್ನು ಮುಖಕ್ಕೆ ಆರಾಮವಾಗಿ ಒತ್ತಿಕೊಂಡಳು.

ಒಂದು ಕ್ರಾಸ್‌ನಲ್ಲಿ ಆ ಕಾರು ತಿರುಗಲಾಗಿ ಅವಳು ಒಂದು ಪಕ್ಕಕ್ಕೆ ಉರುಳಿ 'ಅಮ್ಮಾ' ಎಂದು ಕೂಗಿಕೊಂಡಳು. ಸೀಟಿನ ಮೇಲಿಟ್ಟಿದ್ದ ಪುಸ್ತಕಗಳು ಮತ್ತು ಆ ಚಿಕ್ಕ ಎವರ್ ಸಿಲ್ವರ್ ಟಿಫಿನ್ ಬಾಕ್ಸ್ ಸಹ ಮತ್ತೊಂದು ಪಕ್ಕಕ್ಕೆ ಸರಿದುವು.

"ಸಾರಿ" ಎಂದು ನಕ್ಕು ಅವಳನ್ನೊಮ್ಮೆ ತಿರುಗಿ ನೋಡಿ ಕಾರನ್ನು ನಿಧಾನವಾಗಿ ಓಡಿಸತೊಡಗಿದ. ತಾನು ಭಯಪಟ್ಟು ಕೂಗಿಕೊಂಡುದಕ್ಕಾಗಿ ನಾಚಿಕೆಯಿಂದ ನಕ್ಕು ಚದುರಿದ ಪುಸ್ತಕಗಳನ್ನೂ ಟಿಫನ್ ಬಾಕ್ಸ್‌ನ್ನು ಸಹ ಸಂಗ್ರಹಿಸಿ ಸರಿಯಾಗಿ ಕುಳಿತಳು.

ಕಾರಿನ ಕಿಟಿಕಿಯ ಗಾಜಿನ ಹೊರಗೆ ಅವಳಿಗೆ ಏನೂ ಕಾಣಿಸಲಿಲ್ಲ. ಗಾಜಿನ ಮೇಲೆ ತುಂತುರು ತುಂತುರಾಗಿ ಕವಿದು ನಿಂತ ನೀರಿನ ಹನಿಗಳನ್ನು ಅವಳು ತನ್ನ ದಾವಣಿಯಿಂದ ಒರೆಸಿದಳು ಕೂಡ. ಹೊರಗೆ ನೋಡಿದಳು.

ರಸ್ತೆಯ ಎರಡು ಭಾಗಗಳಲ್ಲೂ ದೀಪಗಳು ಬೆಳಗಿದ್ದುವು. ದೇದೀಪ್ಯಮಾನವಾಗಿ ಅಲಂಕೃತವಾದ ಅಂಗಡಿಗಳ ಛಾಯಾ ಪರಂಪರೆ ರಸ್ತೆಯಲ್ಲಿ ನಿಂತ ನೀರಿನಲ್ಲಿ ಪ್ರತಿಬಿಂಬಿತ

ವಾಗಿ ಕಣ್ಣು ಕೋರೈಸುತ್ತಿತು. ಭೂಲೋಕದ ತಳದಲ್ಲಿ ಮತ್ತೊಂದು ಪ್ರಪಂಚವಿದೆ ಯಂತಲ್ಲಾ, ಅದರಂತೆ ಕಾಣುತ್ತದೆ...

'ಇದೇನು, ಕಾರು ಈ ರಸ್ತೆಯಲ್ಲಿ ಹೋಗುತ್ತಿದೆ ? '

" ಓಹ್ ನಮ್ಮ ಮನೆ ಅಲ್ಲಿದೆ " ಎಂದು ಅವಳು ನಯವಾಗಿ ಹೇಳಿದಳು.

"ಇರಲಿ, ಯಾರು ಇಲ್ಲವೆಂದರು? " ಎಂದು ಅವನೂ ನಯವಾಗಿ ಹೇಳಿ ಅವಳನ್ನು ನೋಡಿ ನಸುನಕ್ಕ.

" ಏನಿದು ರಗಳೆ ' ಎಂದು ಅವಳು ತನ್ನ ಕರಗಳನ್ನು ಒತ್ತಿಕೊಂಡಾಗಲೇ ಅವನು ಅವಳನ್ನು ನೋಡಿದ. ಅವನ ತೃಪ್ತಿಗಾಗಿ ಅವಳು ಮಂದಹಾಸ ಬೀರಿದಳು.

ಕಾರು ಚಲಿಸುತ್ತಲೇ ಇದ್ದಿತು.

ತುಂಬಾ ಜನಸಂದಣಿಯಿದ್ದ ಪ್ರಮುಖ ಅಂಗಡಿ ಬೀದಿಯನ್ನು ದಾಟಿ ದೊಡ್ಡ ದೊಡ್ಡ ಕಟ್ಟಡಗಳು ತುಂಬಿದ ರಸ್ತೆಯಾಚೆ, ಸುಂದರ ಬಂಗಲೆಗಳು ಮತ್ತು ಹೂ ತೋಟಗಳು ನಿಬಿಡವಾಗಿದ್ದ ಅವೆನ್ಯೂ ಹೊಕ್ಕು, ನಗರಗಲಭೆ ಅಡಗಿದ ಒಂದು ಟ್ರಂಕ್ ರೋಡಿನಲ್ಲಿ ಕಾರು ಹೋಗುತ್ತಿತ್ತು.

ಈ ಮಳೆಯಲ್ಲಿ ಹೀಗೆ ಒಂದು ಕಾರಿನಲ್ಲಿ ಪ್ರಯಾಣ ಮಾಡುತ್ತಿದ್ದುದು ಅವಳಿಗೆ ಒಂದು ಹೊಸ ಅನುಭವವಾಗಿ ಕೌತುಕವೆನಿಸಿದರೂ ಆ ಕಾರಣದಿಂದಲೇ ಪದೇ ಪದೇ ಒಂದು ವಿಧವಾದ ಭೀತಿಭಾವ ಅವಳಲ್ಲಿ ಉದಯಿಸಿತು.

ಚಿಕ್ಕ ಮಗುವಿನಂತೆ ಮತ್ತೆ ಮತ್ತೆ ' ಮನೆಗೆ ಹೋಗಬೇಕು ' ಎಂದು ಅವನಿಗೆ ಜ್ಞಾಪಿಸಿ ಹೇಳಲೂ ಭಯವಾಯಿತು.

ತನ್ನನ್ನು ಆ ಬಸ್ ನಿಲ್ದಾಣದಲ್ಲಿ ಏಕಾಂಗಿಯಾಗಿ ಬಿಟ್ಟುಹೋದಳಲ್ಲ, ಅವಳ ನೆನಪೂ, ಅವಳು ತನ್ನ ಕೆನ್ನೆಯನ್ನು ಮೃದುವಾಗಿ ಚಿವುಟಿ ' ಜಾಣೆಯಾಗಿ ಜಾಗರೂಕತೆಯಿಂದ ಮನೆಗೆ ಹೋಗು ' ಎಂಬ ಮಾತುಗಳು ಈಗ ಅವಳ ನೆನಪಿಗೆ ಬಂದುವು.

' ನಾನೇನು ಈಗ ಮೂರ್ಖಳಾದೆನೆ ? ಹೀಗೆ ಅಪರಿಚಿತನಾದವನೊಡನೆ ಕಾರಿನಲ್ಲಿ ಏಕಾಂಗಿಯಾಗಿ ಹತ್ತಿ ಹೋಗುವುದು ತಪ್ಪಲ್ಲವೆ?...ಅವರನ್ನು ನೋಡಿದರೆ ಕೆಟ್ಟವ ರಂತೇನೂ ಕಾಣುವುದಿಲ್ಲ...ಹೇಗಾದರಾಗಲಿ ನಾನು ಬರಬಾರದಾಗಿತ್ತು...ಈಗ ಮಾಡುವುದೇನು? ನನಗೆ ಅಳುಬರುತ್ತಿದೆ, ಛಿ ಅಳಬಾರದು...ಅತ್ತರೆ ಅವರು ಕೋಪಿಸಿ ಕೊಂಡು ' ಮೂರ್ಖಳೇ, ಇಲ್ಲೇ ಬಿದ್ದಿರು, ಎಂದು ಇಳಿಸಿಬಿಟ್ಟು ಹೊರಟುಹೋದರೆ ? ಮನೆಗೆ ಹೋಗುವುದಾದರೂ ಹೇಗೆ ? ನನಗೆ ದಾರಿಯೇ ತಿಳಿಯದಲ್ಲ...ನಾಳೆಗೆ ಜೂಯಾ ಲಜಿ ರೆಕಾರ್ಡ್ ಬೇರೆ ಸಬ್‌ಮಿಟ್ ಮಾಡಬೇಕಲ್ಲ...ತುಂಬಾ ಕೆಲಸವಿದೆ...'

ಅವಳ ದೃಷ್ಟಿ ಎದುರಿನ ಗಾಜಿನ ಮೇಲೆ ಹರಿದು ಅವಳಂತೆಯೇ ಚಲಿಸಿ ಹೋಗು ತ್ತಿದ್ದ ವೈಪರ್ ಮೇಲೆ ಬಿತ್ತು. ಕಡೆಗೆ ಅವಳಿಗೆ ಅರಿವಿಲ್ಲದಂತೆಯೇ ಅವಳು ಅವನನ್ನು ಕೇಳಿದಳು :

" ಈಗ ನಾವು ಎಲ್ಲಿಗೆ ಹೋಗುತ್ತಿದ್ದೇವೆ ? "—ಒಂದೇ ಉಸುರಿನಲ್ಲಿ ಕೇಳಿದ ಅವಳ ಪ್ರಶ್ನೆಗೆ ಅವನು ಸಾವಧಾನವಾಗಿ ಉತ್ತರಕೊಟ್ಟ :

" ಎಲ್ಲಿಗೂ ಇಲ್ಲ ; ಸುಮ್ಮನೆ ಒಂದು ಡ್ರೈವ್..."

" ಹೊತ್ತಾಯಿತಲ್ಲ. ಮನೆಯಲ್ಲಿ ಅಮ್ಮ ಕಾದುಕೊಂಡಿರುತ್ತಾರೆ..."

" ಓ ಯಸ್...ಹಿಂತಿರುಗಿ ಹೋಗಿಬಿಡೋಣ."

—ಕಾರು ಹಿಂತಿರುಗಿತು. ಟ್ರಂಕ್ ರೋಡ್ ಬಿಟ್ಟು ನಿರ್ಜನ ಪ್ರದೇಶವೊಂದನ್ನು ಪ್ರವೇಶಿಸಿ ಅದರ ಆವರಣದಲ್ಲಿಯೂ ಬಹುದೂರ ಹೋಗಿ ಮಧ್ಯೆ ನಿಂತಿತು. ಕಣ್ಣೋಟ ಓಡಿದಷ್ಟು ದೂರಕ್ಕೂ ಕತ್ತಲು ಮತ್ತು ಮಳೆ ಸೇರಿ ಭೀತಿಕಾರಕ ವಾತಾವರಣ ಸೃಷ್ಟಿಯಾಗಿತ್ತು. ಆ ಭಯಂಕರಾರಣ್ಯದಲ್ಲಿ ಕಪ್ಪೆಗಳ ವಟವಟ ಬಲವಾಗಿತ್ತು. ಮಳೆ ಮತ್ತು ಗಾಳಿ ಮೊದಲಿಗಿಂತ ಹೆಚ್ಚು ಚೀರಿ ಭೀಕರವಾಗಿ ನರ್ತಿಸುತ್ತಿದ್ದುವು.

ಕಾರಿನೊಳಗೇ ಒಬ್ಬರ ಮುಖ ಮತ್ತೊಬ್ಬರಿಗೆ ಕಾಣಿಸದು.

ಕಾರು ಥಟ್ಟನೆ ನಿಂತುದನ್ನು ಕಂಡು ಅವಳು ಭಯಪಟ್ಟು ಕೇಳಿದಳು : "ಯಾಕೆ ಕಾರು ನಿಂತುಬಿಟ್ಟಿತು? ಬ್ರೇಕ್‌ಡೌನಾ ? "

ಅವನು ಅದಕ್ಕೆ ಉತ್ತರ ಕೊಡದೆ ಸಿಡಿಲಿನಂತೆ ನಕ್ಕ. ಅವಳ ಮುಖವನ್ನು ನೋಡಲೆಂದು ಕಾರಿನೊಳಗಿದ್ದ ರೇಡಿಯೋ ಸ್ವಿಚ್ ಹಾಕಿದ. ಅದರಿಂದ ಮೊದಲು ಮಂದ ಪ್ರಕಾಶವೂ ಹಿಂದೆಯೇ ಸಂಗೀತವೂ ಪ್ರಾರಂಭವಾಯಿತು.

ಆ ಮಂಕಾದ ಬೆಳಕಿನಲ್ಲಿ ಅವಳು ಅವನನ್ನು ಏನೋ ಕೇಳುವವಳಂತೆ ಹುಬ್ಬೇರಿಸಿದಳು. ಅವನಾದರೋ ಮಂದಹಾಸದಿಂದ ಅವಳನ್ನು ಯಾಚಿಸುವವನಂತೆ ಏನೋ ಬೇಡಿದ. ಆಗ ರೇಡಿಯೋವಿನಿಂದ ಒಂದು ಟ್ರಂಪೆಟ್ಟಿನ ಸ್ವರವೆದ್ದು ಆರ್ಭಟಿಸಿತು. ಅದರ ಹಿಂದೆ ನಾಡಿ ಪಟಪಟನೆ ಬಡಿಯುವಂತೆ ಕಂಪಿತ ಧ್ವನಿಯ ಪಾಂಗೋ ಡ್ರಂ ಹೊಡೆತ...ಅವನ ಬೆರಳುಗಳು ಅದಕ್ಕೆ ತಾಳ ಹಾಕಿ ಆ ಸಂಗೀತದ ಗತಿಯನ್ನು ಅನುಸರಿಸಿ ತಲೆಯಾಡಿಸುತ್ತಾ ಸಂತಸಪಟ್ಟು ಅವಳ ಕಡೆಗೆ ತಿರುಗಿ 'ನಿನಗೆ ಹಿಡಿಸಿತೆ? ' ಎಂದು ಆಂಗ್ಲ ಭಾಷೆಯಲ್ಲಿ ವಿಚಾರಿಸಿದ. ತುಟಿಯರಳಿಸಿ ನಸುನಕ್ಕು ' ಆ ' ಎಂದು ತಲೆಯಾಡಿಸಿದಳು.

ರೇಡಿಯೋ ಬಳಿಯಿದ್ದ ಪೆಟ್ಟಿಗೆ ತೆರೆದು ಎರಡು ಕ್ಯಾಡ್‌ಬರೀಸ್ ಚಾಕಲೇಟುಗಳನ್ನು ಎತ್ತಿಕೊಂಡು ಒಂದನ್ನು ಅವಳಿಗೆ ಕೊಟ್ಟ. ನಂತರ ಆ ಚಾಕಲೇಟಿನ ಮೇಲೆ ಸುತ್ತಿದ್ದ ಕಾಗದವನ್ನು ಪೂರ್ತಿ ಬಿಚ್ಚದೆ ಹಿಂದಕ್ಕೆ ಸರಿಸಿ ಒಂದೊಂದು ತುಂಡನ್ನೇ ಕಚ್ಚಿ ತಿನ್ನತೊಡಗಿದ. ಕಾಲಮೇಲೆ ಕಾಲು ಹಾಕಿ ಕುಳಿತು ಒಂದು ಕೈಯಿಂದ, ರೇಡಿಯೋ ಸಂಗೀತಕ್ಕೆ ಅನುಗುಣವಾಗಿ ತಾನು ಸೀಟಿನ ಹಿಂಭಾಗದಲ್ಲಿ ತಾಳಹಾಕುತ್ತಾ ಅರಾಮವಾಗಿದ್ದ. ಅವನನ್ನು ಆಳವಾಗಿ ನೋಡಿದಳವಳು.

ಅವನು ಸುಂದರನೇ. ದೇಹಕ್ಕೆ ಬಿಗಿಯಾದ ಕಪಿಲವರ್ಣದ ಉಡುಪು. ' ಒಂದೇ ಎತ್ತರವಾಗಿ ' ಆ ಮಂದ ಬೆಳಕಿನಲ್ಲಿ ಅವನ ವರ್ಣವೇ ಪ್ರಕಾಶಮಾನವಾಗಿದ್ದುದನ್ನು ಕಂಡು.

ಕ್ರೂರ ಸರ್ಪದ ಗಂಭೀರ ಸೌಂದರ್ಯ ಅವಳ ನೆನಪಿಗೆ ಬಂದಿತು. ಹಿಂದುಗಡೆಯಿಂದ ನೋಡಿದರೆ ಆ ಕೋಣದಲ್ಲಿ ಸ್ವಲ್ಪ ಭಾಗ ಮಾತ್ರ ಕಾಣುತ್ತಿದ್ದ ಅವನ ಎಡಗಣ್ಣಿನ ದೃಷ್ಟಿ ಬೆಳಗುತ್ತಿತ್ತು. ಎಷ್ಟು ಬಿರುಗಾಳಿ ಬೀಸಿದರೂ ಚಂಚಲವಾಗದ ಕ್ರಾಪು. ಕೆನ್ನೆಯ ಮೇಲೆ ಅಧಿಕವಾಗಿಯೇ ಇದ್ದ ಸೈಡ್‌ಲಾಕ್ ಆಗಲೂ ಎದ್ದು ಕಾಣಿಸಿದವು. ಪಕ್ಕದಿಂದ ನೋಡಿದರೆ ಬೆಳಗುವ ಮುಖದಲ್ಲಿ ಸಣ್ಣದಾಗಿ ಒಂದುಮೀಸೆಯಿದ್ದಿದ್ದರೆ ಚೆನ್ನಾಗಿರುತ್ತಿತ್ತು ಎಂದು ಕ್ಷಣ ಎನಿಸಿತು. ಓಹ್ ಆ ಒಂದು ಹುಬ್ಬು ಎಷ್ಟು ಸ್ಥಿರವಾಗಿ, ಬಾಗಿ, ನೋಡಿದರೆ ಭಯವನ್ನುಂಟು ಮಾಡುವಂತಿದೆ! ಅವಳು ಕುಳಿತಿದ್ದ ಸೀಟಿನ ಮೇಲೆ ಬಾಚಿ ಇಟ್ಟ ಅವನ ಎಡಗೈಯಲ್ಲಿದ್ದ ಘನ ಸುವರ್ಣ ಸ್ಟ್ರಾಪ್‌ವುಳ್ಳ ಗಡಿಯಾರ ಏಳು ಗಂಟೆ ತೋರಿಸುತಿತ್ತು. ಅವನ ನೀಳ ಬೆರಳುಗಳು ಸಂಗೀತಕ್ಕೆ ತಾಳ ಹಾಕುತ್ತಿದ್ದುವು. ಅವನ ಕೈಯ ಮೇಲ್ಭಾಗದಲ್ಲಿದ್ದ ರೋಮವೃಂದ ಆ ತಂಗಾಳಿಯಲ್ಲಿ ರೋಮಾಂಚಗೊಂಡಿತ್ತು.

"ಅಯ್ಯೋ, ಗಂಟೆ ಏಳಾಯಿತು" ಅವಳು ಚಾಕಲೇಟು ತಿನ್ನುತ್ತಾ ಶಾಂತಿಯಿಂದ ಅವನನ್ನು ವಿನೋದವಾಗಿ ನೋಡುತ್ತಾ ಹೇಳಿದುದನ್ನು ಕೇಳಿ ಅವನೂ ಕೈಗಡಿಯಾರವನ್ನು ನೋಡಿಕೊಂಡ.

ಕಾರಿನ ಮುಂದಿನ ಬಾಗಿಲನ್ನು ಮೆಲ್ಲನೆ ಸ್ವಲ್ಪ ತೆರೆದಾಗಲೇ ಮಳೆಯ ರಭಸ ಗೊತ್ತಾಗುತ್ತಿತ್ತು. ಅವನು ಒಂದು ಕ್ಷಣದಲ್ಲಿ ಬಾಗಿಲು ತೆಗೆದು ಕೆಳಗೆ ಇಳಿದ.

"ಎಲ್ಲಿಗೆ?..." ಎಂದು ಅವಳು ಅವನನ್ನು ಕಾತರವಾಗಿ ಕೇಳಿದುದು ಬಾಗಿಲನ್ನು ಮುಚ್ಚಿದನಂತರ ಹೊರಗೆ ನಿಂತಿದ್ದ ಅವನ ಕಿವಿಗಳಲ್ಲಿ ಪ್ರತಿಧ್ವನಿಸಿತು: "ಎಲ್ಲಿಗೆ ಹೊರಟಿರಿ?"

"ಎಲ್ಲಿಗೂ ಹೋಗುವುದಿಲ್ಲ. ಇಲ್ಲಿಗೇ ಬಂದೆ" ಎಂದು ಹೇಳಿ ಆ ಸ್ವಲ್ಪ ಹೊತ್ತಿನಲ್ಲೇ ಚೆನ್ನಾಗಿ ನೆನೆದು ಹೋದ ಅವನು ಹಿಂದುಗಡೆ ಸೀಟಿನ ಬಾಗಿಲನ್ನು ತೆರೆದುಕೊಂಡು ಒಳಗೆ ಬಂದ.

ಅವಳ ಪಕ್ಕದಲ್ಲಿ ಕುಳಿತು, ಸ್ವಲ್ಪ ಹೊತ್ತಿನ ಹಿಂದೆ ತೇವವನ್ನು ಒರೆಸಿಕೊಳ್ಳಲು ಅವಳಿಗೆ ಕೊಟ್ಟಿದ್ದ ಟವಲನ್ನು ಎತ್ತಿಕೊಂಡು ಮುಖ ಮತ್ತು ತಲೆಯನ್ನು ಒರೆಸಿಕೊಂಡ. ನಂತರ ಕೈಯಲ್ಲಿದ್ದ ಚಾಕಲೆಟ್ ಕಾಗದವನ್ನು ಹಿಸುಕಿ ಎಸೆದ. ತನಗೆ ಕೊಟ್ಟಿದ್ದ ಚಾಕಲೇಟನ್ನು ಅವಳು ಇನ್ನೂ ಸ್ವಲ್ಪ ಸ್ವಲ್ಪವಾಗಿ ತಿನ್ನುತ್ತಿದ್ದಳು. ಅವನು ಷರಟಿನ ಜೇಬಿನಿಂದ ಒಂದು ಚಿಕ್ಕ ಪ್ಯಾಕೇಟ್ ತೆಗೆದು ಅದರಿಂದ ಮಿಠಾಯಿಯಂತಹ ತುಂಡೊಂದನ್ನು ಬಾಯೊಳಗೆ ಹಾಕಿಕೊಂಡು ಅವಳಿಗೆ ಒಂದನ್ನು ಕೊಟ್ಟ.

"ಏನಿದು?"

"ಚ್ಯೂಯಿಂಗ್ ಗಂ"

"ಅಯ್ಯೋ ನನಗೆ ಬೇಡ"

"ಟ್ರೈ...ಯು ವಿಲ್ ಲೈಕ್ ಇಟ್.

ಅವಳು ತನ್ನ ಕೈಯಲ್ಲಿದ್ದ ಚಾಕಲೇಟನ್ನು ಬೇಗ ಮುಗಿಸಿ ಅವನು ಕೊಟ್ಟುದನ್ನು ನಿರಾಕರಿಸಲು ಮನಸ್ಸು ಬಾರದೆ ಕೈ ನೀಡಿದಳು.

"ನೋ"—ಅವಳ ಕೈಯಲ್ಲಿ ಕೊಡದೆ ಅದನ್ನು ಎತ್ತಿ ಅವಳ ಬಾಯಲ್ಲಿ ಮೆಲ್ಲನೆ ಇಡಲು ಪ್ರಯತ್ನಿಸಿದ.

ಅವಳಿಗೆ ಬೆಂಕಿಯುರಿಯುವಂತೆ ದೇಹಾದ್ಯಂತ ಹಿತವಾದ ಉಷ್ಣೋದಯವಾಯಿತು. ಸ್ವಲ್ಪ ಹಿಂದೆ ಸರಿದು ಅವನ ಕೈಯಲ್ಲಿದ್ದುದನ್ನು ತೆಗೆದುಕೊಂಡಳು: "ಥ್ಯಾಂಕ್ಯೂ."

ಅವನ ನಯನದ್ವಯ ಅವಳನ್ನೇ ದೃಷ್ಟಿಸಿತು. ಅವನ ದೃಷ್ಟಿಯನ್ನು ಎದುರಿಸಲಾರದ ನಾಚಿಕೆಯಿಂದ ಅವಳ ಬಲಹೀನವಾದ ನೋಟ ಮತ್ತೆ ಮತ್ತೆ ಅಧೋಮುಖವಾಯಿತು. ಅವಳ ನೋಟದಲ್ಲಿ ಅವನ ಮೊಳಕೈಗಳು ಆ ಸೀಟಿನ ಮೇಲೆ ಮೆಲ್ಲನೆ ಸರಿದು ಸಮೀಪಕ್ಕೆ ಬರುವಂತೆನಿಸಿತು.

ಅವಳು ಎದುರು ಗಾಜಿನ ಕಡೆ ನೋಡಿದಳು. ಹೊರಗೆ ಮಳೆ ಮತ್ತು ಗಾಳಿ ಚೀರಿ ಭೀಕರವಾಗಿ ನರ್ತಿಸುತ್ತಿದ್ದುವು.

ಅವಳು ಬಾಗಿಲಿಗೆ ಒರಗಿ ಕುಳಿತಳು. ಅವನೂ ಕೈಕಟ್ಟಿಕೊಂಡು ಬಹಳ ಗೌರವವಾಗಿ ದೂರ ಸರಿದು ಅವಳ ಅಂತರ್ಯವನ್ನು ಅರಿಯುವ ಕುತೂಹಲದಿಂದ ನೋಡತೊಡಗಿದ.

"ಹೌ ಡು ಯು ಲೈಕ್ ದಿಸ್ ಕಾರ್?"

—"ಈ ಕಾರು ನಿನಗೆ ಹಿಡಿಸಿತೆ?" ಎಂದು ಕೇಳಿದ. ಅವನ ಕಂಠ ಮಂದರ ಸ್ಥಾಯಿಯಲ್ಲ ಅಂತರಂಗವಾಗಿ ಅವಳ ಕರ್ಣಗಳಲ್ಲಿ ಪ್ರವೇಶಿಸಿ ಅವಳಲ್ಲಿ ಒಂದು ಬಗೆಯ ಚಲನವನ್ನು ಉಂಟುಮಾಡಿತು. ಆದರೆ ಅದನ್ನು ತೋರ್ಪಡಿಸದೆ ಅವಳು ಮಂದಹಾಸದಿಂದ ಮನ ಬಿಚ್ಚದೆ ಸುಮ್ಮನೆ ಹೇಳಿದಳು: "ಓಹ್ ಇಟ್ ಈಸ್ ನೈಸ್."

ಅವನು ಆಳವಾದ ಚಿಂತನೆಯಿಂದ ನಿಟ್ಟುಸಿರು ಬಿಟ್ಟು ತಲೆಬಾಗಿ ಹೇಳಿದ: "ನಿನಗೆ ಗೊತ್ತೆ? ಈ ಕಾರು ಎರಡು ವರ್ಷಗಳಿಂದ ನಿನ್ನ ಹಿಂದೆಯೇ ಅಲೆಯುತ್ತಿದೆ—ಡು ಯು ನೋ ದಟ್?" ಎಂದು ಕೇಳಿ ಮುಖವೆತ್ತಿ ಅವಳನ್ನು ನೋಡಿದ. ಅವನು ಅವಳಿಗೆ ಕಿರೀಟವಿಟ್ಟಂತೆ ಅವಳು ಆ ಕ್ಷಣ ಮೈಮರೆತಳು:

"ರಿಯಲಿ?..."

"ರಿಯಲಿ..."

ಅವನ ಬಿಸಿಯುಸಿರು ಅವಳ ಪಕ್ಕೆಯಲ್ಲಿ ಮೆಲ್ಲನೆ ಸೆಳೆಯಿತು. ಅವನ ರಹಸ್ಯ ಕಂಠ ಹೃದಯವನ್ನು ತಾಕಿ ರೋಮಾಂಚನಗೊಳಿಸಿತು:

"ಡು ಯು ಲೈಕ್ ಮಿ?"—'ನನ್ನ ಕಂಡರೆ ನಿನಗೆ ಮೆಚ್ಚುಗೆಯೆನಿಸಿತೆ?'

"ಹುಂ."—ಸರಿಯಲು ಜಾಗವಿಲ್ಲದ್ದರಿಂದ ಅವಳು ತಾನಾಗಿ ಕೃಶವಾಗಿ ಕುಳಿತುಕೊಳ್ಳುವುದನ್ನು ನೋಡಿ ಅವನು ಮತ್ತೆ ಸ್ವಲ್ಪ ಹಿಂದಕ್ಕೆ ಸರಿದು ಕುಳಿತ.

ಹೊರಗೆ ಮಳೆ ಬರುತ್ತಲೇ ಇತ್ತು. ರೇಡಿಯೋದಿಂದ ಟ್ರಂಪೆಟ್‌ವಾದ್ಯದಿಂದ ಹೊಸ ಹೊಸ ರಾಗಲಯ ಪರಂಪರೆ ಹೊರಬರುತ್ತಿತ್ತು...

"ಬಹಳ ಚೆನ್ನಾಗಿದೆಯಲ್ಲಾ? "—ಸನ್ನಿವೇಶವನ್ನು ಮತ್ತು ಅನುಭವವನ್ನು ಕುರಿತು ಅವಳ ಭಾವ ಪರಂಪರೆಯನ್ನು ತಿಳಿಯಲು ಎಂದು ಅವನು ಕೇಳಿದ.

"ಚೆನ್ನಾಗಿದೆ...ಆದರೆ ಭಯವೆನಿಸುತ್ತೆ..."

"ಭಯವೆ ? ಯಾಕೆ...ಯಾಕೆ ಭಯಪಡಬೇಕು ?"

ಅವಳಿಗೆ ಧೈರ್ಯವುಂಟುಮಾಡುವುದಕ್ಕಾಗಿ ಅವಳ ತೋಳುಗಳನ್ನು ಹಿಡಿದು ಅಲುಗಾಡಿಸಿದಾಗ ಅವಳ ಶರೀರದಲ್ಲಿದ್ದ ಸೂಕ್ಷ್ಮ ಹೆಣ್ಣುತನ ಆ ಅಲುಗಾಡಿಸುವಿಕೆಯಲ್ಲಿ ಉದುರಿಹೋದಂತೆ ಅವಳು ಕಂಪಿಸಿದಳು: "ನನಗೆ ಭಯವಾಗಿದೆ: ನನಗೆ ಇದೆಲ್ಲಾ ಹೊಸದು..."

'ಯಾಕೆ ಈ ಸರ್ಟಿಫಿಕೇಟುಗಳು ?' ಎಂದು ತನ್ನಲ್ಲಿ ತಾನು ಗೊಣಗಿಕೊಂಡು ಅವನು ಈ ಬಾರಿ ನಾನು ಹಿಂತೆಗೆಯುವುದಿಲ್ಲ ಎಂಬ ತೀರ್ಮಾನದಿಂದ ಮತ್ತೆ ಅವನು ಅವಳ ಸಮೀಪಕ್ಕೆ ಸರಿದು ಬಂದ: "ಮೇ ಐ ಕಿಸ್ ಯು?"

ಇದಕ್ಕೆ ಏನು ಉತ್ತರ ಹೇಳುವುದೆಂದು ಅವಳಿಗೆ ತಿಳಿಯಲಿಲ್ಲ. ನಾಲಿಗೆ ಸ್ತಬ್ಧವಾಯಿತು. ಆ ಚಳಿಯಲ್ಲಿಯೂ ಸಹ ದೇಹವೆಲ್ಲಾ ಬೆವರಿಟ್ಟು ನಡುಗಿತು.

ಥಟ್ಟನೆ ಅವಳ ಕಿವಿಗಳ ಹಿಂದೆ, ಕೆನ್ನೆಗಳ ಮೇಲೆ, ತುಟಿಗಳಲ್ಲಿ ಬೆಂಕಿಯಿಂದ ಸುಟ್ಟಂತೆ ಅವರ ತೋಳುಗಳಲ್ಲಿ ಬಂಧಿತಳಾದ ಅವಳು ಬೆದರಿ "ಪ್ಲೀಸ್...ಪ್ಲೀಸ್..." ಎಂದು ಅರಚಿದಷ್ಟೂ ಅವನು ಕಾಮುಕತೆಯಿಂದ ಅಪ್ಪಿ ಅಪ್ಪಿ...

ಅವಳ ಅರಚುವಿಕೆ ಕ್ರಮೇಣ ಅಡಗಿ ನಿಂತೇಹೋಯಿತು. ಅವನ ಮೇಲೆ ಪ್ರತೀಕಾರ ವೆಸಗುವವಳಂತೆ ಈಗ ಅವಳ ಕರದ್ವಯ ಅವನ ಕೊರಳನ್ನು ಬಿಗಿಯಾಗಿ ಹೆಣೆದುಕೊಂಡಿತು...

ಹೊರಗೆ...ಆಕಾಶವೇ ಹರಿದುಹೋಯಿತು. ಅತ್ತ ಇತ್ತ ಮಿಂಚು ಮಿಂಚಿತು. ಸಿಡಿಲು ಬಡಿಯಿತು.

"ಆಹ್" ಆ ಸಿಡಿಲು ಎಲ್ಲಿಯೋ ಎರಗಬೇಕಾಗಿತ್ತು.

"ನಾನು ಮನೆಗೆ ಹೋಗಬೇಕು, ಅಯ್ಯೋ ನಮ್ಮ ಅಮ್ಮ ಕಾದಿರುತ್ತಾರೆ..."

ಕಾರಿನ ಬಾಗಿಲನ್ನು ತೆಗೆದು ಹಿಂದಿನ ಸೀಟಿನಿಂದ ಅವನು ಹೊರಗೆ ಇಳಿದ. ಆ ಮೈದಾನದಲ್ಲಿ ಉಂಟಾಗಿದ್ದ ಕೆಸರಿನಲ್ಲಿ ಅವನ ಬೂಟುಗಳನ್ನು ಧರಿಸಿದ ಹೆಜ್ಜೆ ಗುರುತಾಯಿತು. ಅವನು ಕಾಲುಗಳನ್ನು ಮೇಲಕ್ಕೆ ಎಳೆದುಕೊಂಡಾಗ ಶಬ್ದ ಮಾಡಿದ ಕೆಸರು ಕಾರಿನ ಮೇಲೆ ಕಲೆಗಳನ್ನು ಉಂಟುಮಾಡಿತು. ತೆರೆದ ಕಾರು ಬಾಗಿಲಿನಿಂದ ಸ್ವಲ್ಪ ಕಲೆಗಳು ಅವಳ ಮೇಲೆಯೂ ಬಿದ್ದುವು.

ದೇಹದಲ್ಲಿಯೇ ಮನಸ್ಸಿನಲ್ಲಿಯೇ ಒತ್ತುವ ವೇದನೆಯಿಂದ ಉಕ್ಕಿ ಬರುವ ನಯನಾಶ್ರುಗಳನ್ನು ತಡೆಯಲಾಗದೆ ಅವನಿಗೆ ತಿಳಿಯದ ರೀತಿ ಅವಳು ಮೌನವಾಗಿ ರೋದಿಸಿದಳು.

ಮುಂದುಗಡೆ ಬಾಗಿಲು ತೆರೆದು ಡ್ರೈವರ್ ಸೀಟಿನಲ್ಲಿ ಕುಳಿತು ಅವನು ಕೆಸರು ತುಂಬಿದ ಬೂಟುಗಳನ್ನು ಬಿಚ್ಚಿ ಎಸೆದ. ರೇಡಿಯೋ ಪಕ್ಕದಲ್ಲಿದ್ದ ಪೆಟ್ಟಿಗೆ ತೆರೆದ. ಅದರಲ್ಲಿದ್ದ ಒಂದು ಸಿಗರೇಟು ತೆಗೆದು ಹಚ್ಚಿ ಭುಗಭುಗನೆ ಹೊಗೆ ಬಿಡುತ್ತಾ ಚ್ಯೂಯಿಂಗ್ ಗಂ ಅಗಿಯುತ್ತಿದ್ದ.

ಈ ಕ್ಷಣ ತಾನು ಮನೆಯಲ್ಲಿರಬೇಕೆಂದೂ ಅಮ್ಮನ ತೊಡೆಯ ಮೇಲೆ ತಲೆಯಿಟ್ಟು ರೋದಿಸುತ್ತಾ ಈ ಹಿಂಸಾಚಾರಕ್ಕೆ ಸಮಾಧಾನಪಡೆಯಬೇಕೆಂಬ ಅಗತ್ಯ ಉಂಟಾಗಿ ಹೃದಯ, ಮನಸ್ಸು, ದೇಹ ಮತ್ತು ಭಾವನೆಗಳು ತೆರೆತೆರೆಯಾಗಿ ಎದ್ದುವು.

ಅವನಾದರೋ ಸಾವಧಾನವಾಗಿ ಸಿಗರೇಟು ಸೇದುತ್ತಾ ಕುಳಿತಿದ್ದ. ಅದನ್ನು ನೋಡಿ ಅವಳಿಗೆ ಮೈ ಉರಿದೇಳುತ್ತಿತು . ಆ ಕಾರಿನೊಳಗಿದ್ದುದು ಎರಡು ಬಂಡೆಗಳ ಮಧ್ಯೆ ಇದ್ದ ಗುಹೆಯೊಂದರೊಳಗೆ ಸಿಕ್ಕಿಕೊಂಡಂತಿತ್ತು. ಒಮ್ಮೆ ಭಯ, ಮತ್ತೊಮ್ಮೆ ಜಿಗುಪ್ಸೆ—ಆ ಸಿಗರೇಟಿನ ದುರ್ವಾಸನೆ ಹೊಟ್ಟೆ ತೊಳಸುತ್ತಿತ್ತು. ಆ ಮೈದಾನದಲ್ಲಿದ್ದ ಕೆಸರೆಲ್ಲಾ ಅವಳ ಮೇಲೆ ಎತ್ತಿ ಎಸೆಯಲ್ಪಟ್ಟಂತೆ ಅವಳ ಮೈಯೆಲ್ಲಾ ಅಸಹ್ಯವಾಗಿ ತೇವಗೊಂಡಿತು...

ರೇಡಿಯೋದಿಂದ ನರಿಯ ಕೆಟ್ಟ ಕೂಗಿನಂತೆ ಟ್ರಂಪೆಟ್ ಸಂಗೀತ ಶರೀರವನ್ನು ಸೀಳಿಸುವಂತೆ ಹುಚ್ಚು ಹುಚ್ಚಾಗಿ ಏರುತ್ತಲೇ ಇತ್ತು...

ಅವಳು ತನ್ನನ್ನು ಮಿಂಚಿ ಕಾತರದಿಂದ ಅಳುವಿನ ಕಂಠದಲ್ಲಿ ಅರಚಿದಳು.

" ನನ್ನನ್ನು ಮನೆಗೆ ಕರೆದುಕೊಂಡು ಹೋಗಿ ಬಿಡುವಿರೋ ಇಲ್ಲವೋ ? "

ಅವನು ರೇಡಿಯೋ ನಿಲ್ಲಿಸಿದ.

" ಡು ನಾಟ್ ಷೌಟ್ ಲೈಕ್ ದಟ್ " ಎಂದು ಅವನು ಮೈಯುರಿದವನಂತೆ ಎಚ್ಚರಿಸಿದ : ' ಅರಚಬೇಕಾದ್ದಿಲ್ಲ '

ಅವನನ್ನು ನೋಡಿ ಕರದ್ವಯಗಳನ್ನು ನೀಡಿ ದೀನಳಾಗಿ ಬೇಡಿಕೊಂಡಳು : " ನಮ್ಮ ಅಮ್ಮ ಕಾಯುತ್ತಿದ್ದಾಳೆ...ನನ್ನನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಬಿಟ್ಟುಬಿಟ್ಟರೆ ನಿಮಗೆ ಕೋಟಿ ಪುಣ್ಯ" ಎಂದು ಹೇಳಿದಳು. ಆದರೂ ' ನನ್ನ ಬುದ್ಧಿಯನ್ನು ಜೋಡಿನಿಂದ ಹೊಡೆಯಬೇಕು. ನಾನು ಹೀಗೆ ಬರಬಾರದಾಗಿತ್ತು...ಅಯ್ಯೋ ಏನೇನೋ ಆಗಿಹೋಯಿತಲ್ಲಾ ಎಂದು ಹಲುಬಿದಳು. ತಲೆ ಚಚ್ಚಿಕೊಂಡರೊಳ್ಳೆಯದು ಎನಿಸಿ ದಹಿಸಿಹೋದಳು. ಹಲ್ಲುಗಳನ್ನು ಕಚ್ಚಿದ ಶಬ್ದವಾಯಿತು. ಆ ಕ್ಷಣದಲ್ಲಿ ಅವಳ ಭಯಂಕರ ಅವತಾರ ಕಂಡು ಅವನೂ ವಿಹ್ವಲಗೊಂಡ.

"ಪ್ಲೀಸ್...ಡು ನಾಟ್ ಕ್ರಿಯೇಟ್ ಸೀನ್ಸ್" ಎಂದು ದೀನನಂತೆ ಅವಳನ್ನು ಬೇಡಿ ಬೇಸರದಿಂದ ಕಾರು ತಿರುಗಿಸಿದ—

ಈ ಕತ್ತಲ ದಾರಿಯಲ್ಲಿ ಕಣ್ಣುಗಳನ್ನು ಚುಚ್ಚುವ ರೀತಿ ಬೆಳಕು ಚೆಲ್ಲಿ ಕಾರು ಮುಂದೆ ಓಡಿತು.

'ಛೀ! ಎಂತಹ ಕಷ್ಟ ಬಂತಿದು! ಇಷ್ಟವಿಲ್ಲದಿದ್ದರೆ ಆಗಲೇ ಹೇಳಬಹುದಾಗಿತ್ತು. ಒಂದು ಸೌಮ್ಯ ಸಂಜೆ ಹಾಳಾಯಿತು. ಪಾಪ! ಇಂತಹವರೆಲ್ಲಾ ಕಾಲೇಜಿನಲ್ಲಿ ಓದಿ ಏನು ಮಾಡಬೇಕೆಂದಿದ್ದಾರೋ ಇನ್ನೂ ಅಳುತ್ತಿದ್ದಾಳೆ.' ಅವನು ಅವಳ ಕಡೆ ತಿರುಗಿ ಕ್ಷಮಾಪಣೆ ಕೇಳಿದ: " ಐ ಅಮ್ ಸಾರಿ...ನಿನ್ನ ಭಾವನೆಗೆ ನಾನು ಧಕ್ಕೆ ತಂದಿದ್ದರೆ ದಯವಿಟ್ಟು ಮನ್ನಿಸು."

—ಅವಳನ್ನು ಅವಳ ಜಾಗದಲ್ಲಿ ಇಳಿಸಿ ನಂತರ ಈ ಘಟನೆಯನ್ನು ಮರೆತು ಶಾಂತಿ ಪಡೆಯಬೇಕೆಂಬ ಆಕಾಂಕ್ಷೆಯಿಂದ ಅವನು ಕಾರನ್ನು ವೇಗವಾಗಿ ಡ್ರೈವ್ ಮಾಡಿಕೊಂಡು ಹೋದ.

ಇನ್ನೂ ಮಳೆ ಬೀಳುತ್ತಿತ್ತು.

ನಗರ ಗಲಭೆ ಅಡಗಿದ ಟ್ರಂಕ್ ರೋಡ್ ದಾಟಿ ಸುಂದರ ಬಂಗಲೆಗಳೂ ಮತ್ತು ಹೂದೋಟಗಳು ನಿಬಿಡವಾಗಿದ್ದ ಅವೆನ್ಯೂ ಹೊಕ್ಕು ದೊಡ್ಡ ದೊಡ್ಡ ಕಟ್ಟಡಗಳು ತುಂಬಿದ ರಸ್ತೆಯಾಚೆ ಜನಸಂದಣಿ ಹೆಚ್ಚಿದ ಪೇಟೆಯ ಬೀದಿಗೆ ಇಳಿದ ಕಾರು ಒಂದು ಸಣ್ಣ ಗಲ್ಲಿಯಲ್ಲಿ ತಿರುಗಿ ಅವಳ ಮನೆಯತ್ತ ಓಡುತ್ತಿತ್ತು.

ಇಲ್ಲಿಯೇ ನಿಲ್ಲಿಸಿ. ನಾನು ಇಳಿಯುತ್ತೇನೆ ಎಂದು ಅವಳೇ ಹೇಳುತ್ತಾಳೆ ಎಂಬ ನಿರೀಕ್ಷಣೆಯಿಂದ ಅವನು ಆ ಬೀದಿಯಲ್ಲಿ ಕಾರನ್ನು ನಿಧಾನವಾಗಿ ಓಡಿಸುತ್ತಿದ್ದ. ಅವಳಿಗೆ ಅಷ್ಟು ಮಾತ್ರವೂ ತಿಳಿಯುವ ಮುಗ್ಧೆ ಎಂದು ಅರಿತುಕೊಂಡ ಅವನೇ ಒಂದು ಕಡೆ ಕಾರನ್ನು ನಿಲ್ಲಿಸಿದ: "ಮನೆಯವರೆಗೂ ಬಂದುಬಿಡಬಾರದು : ಆದ್ದರಿಂದ ನೀನು ಇಲ್ಲಿಯೇ ಇಳಿದು ಹೋಗು... ಹುಂ."

ಅವಳನ್ನು ಕಂಡ ಅವನಿಗೇ ಪರಿತಾಪ ಮತ್ತು ವ್ಯಥೆಯಾಯಿತು. ಏನೋ ತಪ್ಪು ಮಾಡಿದವನಂತೆ ಮತ್ತು ಹಂಗಿಗೆ ಸಿಕ್ಕಿಕೊಂಡ ಮನೋಭಾವದಲ್ಲಿ ಅವನ ನಯನಗಳು ವಿಚಲಿತಗೊಂಡುವು. ಅವನೇ ಇಳಿದು ಸೇವಕನಂತೆ ಅವಳಿಗಾಗಿ ಬಾಗಿಲನ್ನು ತೆಗೆದು ಮಳೆಯಲ್ಲಿ ನಿಂತಿದ್ದ. ಭಾವನೆಗಳು ಜಡಗೊಂಡ ರೀತಿ ಅವಳು ತನ್ನ ಪುಸ್ತಕಗಳನ್ನು ಆಯ್ದು ಜೋಡಿಸಿಕೊಂಡು, ಕೆಳಗೆ ಬಿದ್ದಿದ್ದ ಸಣ್ಣ ಎವರ್ ಸಿಲ್ವರ್ ಟಿಫಿನ್ ಬಾಕ್ಸ್‌ನ್ನು ಹುಡುಕಿ ಎತ್ತಿಕೊಂಡು ಅವನ ಮುಖವನ್ನು ನೋಡಲಾಗದೆ ತಲೆಬಾಗಿ ನಿಂತಳು.

ಆ ಸಣ್ಣ ಬೀದಿಯಲ್ಲಿ ಮಳೆ ಮತ್ತು ಕತ್ತಲಿನಿಂದಾಗಿ ಜನಸಂಚಾರವೇ ಇರಲಿಲ್ಲ. ದೂರದಲ್ಲಿ ಪ್ರಕಾಶಿಸುತ್ತಿದ್ದ ಬೀದಿ ದೀಪದ ಬೆಳಕಿನಲ್ಲಿ ತನ್ನ ಬಳಿಯೇ ಕುಳ್ಳಗೆ ನಿಂತಿದ್ದ ಅವಳನ್ನು ಕಂಡು ಅವನು ತನ್ನಲ್ಲಿ ತಾನೇ ನೊಂದುಕೊಂಡ. ತನಗಿದ್ದ ಅಪಾರ ಸ್ವೇಚ್ಛೆಯೇ ತನ್ನನ್ನು ಎಷ್ಟು ಅಧೀನ ವ್ಯಕ್ತಿಯನ್ನಾಗಿ ಮಾಡಿತೆಂಬುದನ್ನು ಕುರಿತು ಅವನು ಚಿಂತಿಸಿದ.

"ಹೌದು, ಅಧೀನ"—ಭಾವನೆಗಳ ಗುಲಾಮ!" ಎಂದು ಅವನು ಅರಿತುಕೊಂಡ.

ರಹಸ್ಯ ಹೇಳುವವನಂತೆ ಅವಳೊಂದಿಗೆ ಮಾತನಾಡಿದ : " ಐ ಅಮ್ ಸಾರಿ..."

ಅವಳು ತಲೆಯೆತ್ತಿ ಅವನನ್ನು ನೋಡಿದಳು. ಓ! ಆ ನೋಟ!

ಅವಳನ್ನು ಏನೋ ಕೇಳುವುದಕ್ಕಾಗಿ ಅವನ ತುಟಿಗಳು ಅಲುಗಾಡಿದುವು: "ಏನು...?" ಎಂಬ ಒಂದೇ ಮಾತಿನಿಂದ ಅವನ ಕಂಠ ಇಳಿದುಹೋಯಿತು.

"ಏನೂ ಇಲ್ಲ" ಎಂದು ಅವಳು ಮುಂದೆ ಹೆಜ್ಜೆಯಿಟ್ಟಳು.

ಅವಳ ಮುಂದೆ ಕಾರು ವೇಗವಾಗಿ ಓಡಿತು. ಕಾರಿನ ಹಿಂದಿದ್ದ ಕೆಂಪು ದೀಪ ಕತ್ತಲಲ್ಲಿ ಲೀನವಾಗಿ ಹೋಯಿತು.

ಮನೆಯೊಳಗೆ ಅಂಗಳದಲ್ಲಿದ್ದ ಹರಿಕೇನ್ ದೀಪ ಗಾಳಿಯಿಂದಾಗಿ ಆರಿಹೋಗಿತ್ತು. ಅಡಿಗೆ ಕೆಲಸದಲ್ಲಿ ತೊಡಗಿದ್ದ ತಾಯಿ ಅಂಗಳದಲ್ಲಿ ಕತ್ತಲಾಗಿದ್ದುದನ್ನು ಗಮನಿಸಿ ದೀಪ ವನ್ನು ಎತ್ತಿಕೊಂಡು ಹೋಗಿ ಹಚ್ಚಿ ತಂದಿಟ್ಟಳು. ಗಡಿಯಾರದಲ್ಲಿ ಏಳೂವರೆ ಗಂಟೆ ಯಾಗಿದ್ದುದನ್ನು ಕಂಡು ಮನಸ್ಸಿನಲ್ಲಿ ಗಾಬರಿಯಾಗಿ ಹಿಂತಿರುಗಿ ನೋಡಿದಳು. ಮಗಳು ಮೆಟ್ಟಿಲು ಹತ್ತಿ ಬರುತ್ತಿದ್ದಳು.

ಮಳೆಯಲ್ಲಿ ನೆನೆದು ತಲೆ ಮೈ ಬಟ್ಟೆ ಎಲ್ಲಾ ನೆನೆದು ಅವ್ಯವಸ್ಥೆಗೊಂಡುದನ್ನು ನೋಡಿ ಅವಳಿಗೆ ಏನೋ ಅನಿಸಿತು: "ಏನೇ ಇದು ಅವತಾರ?"

ಅವಳು ಶಿಲೆ ನಡೆದು ಬಂದಂತೆ ಅಂಗಳಕ್ಕೆ ಬಂದಳು. ಹರಿಕೇನ್ ದೀಪದ ಬೆಳಕಿನಲ್ಲಿ ಸ್ಥಿರವಾಗಿ ನಿಂತಳು. ಅವಳ ನಯನಗಳಿಂದ ಅಶ್ರುಧಾರೆ ಬರಲಾರಂಭಿಸಿತು: "ಅಮ್ಮಾ" ಎಂದು ಉಕ್ಕಿಬಂದ ಅಳುವನ್ನು ತಾಯಿಯ ಭುಜದ ಮೇಲೆ ಮುಖವಿಟ್ಟು ಗಟ್ಟಿಯಾಗಿ ಆಲಂಗಿಸಿಕೊಂಡು ರೋದಿಸತೊಡಗಿದಳು.

ತಾಯಿಯ ಮನಸ್ಸಿನಲ್ಲಿ ಏನೋ ಅನಾಹುತ ನಡೆದಿದೆಯೆಂಬ ಭಾವ ಮೂಡಿತು.

"ಏನೇ, ಏನಾಯಿತು, ಯಾಕೆ ಇಷ್ಟು ಹೊತ್ತು? ಸಾಕು, ಅಳು ನಿಲ್ಲಿಸು. ಏನಾಯಿತು ಹೇಳು?" ತನ್ನ ಮೇಲೆ ಬಿದ್ದು ಅಪ್ಪಿಕೊಂಡು ತೊಳಲುತ್ತಿದ್ದ ಮಗಳ ವೇದನೆಯ ಕಾರಣ ಗೊತ್ತಾಗದಿದ್ದರೂ ಅದು ವೇದನೆಯೇ ಎಂಬುದನ್ನು ಅರ್ಥಮಾಡಿಕೊಂಡು ಅದಕ್ಕೆ ತಾನೂ ಭಾಗಿಯಾದವಳಂತೆ ಅತ್ತು ಕಣ್ಣೀರು ಒರೆಸಿಕೊಂಡು ಮಗಳ ಬೆನ್ನು ಸವರಿ ಕೇಳಿದಳು: "ಯಾಕಮ್ಮ, ಯಾಕೆ ಹೀಗೆ ಅಳುವೆ ಹೇಳು?"

ತಾಯಿಯ ಮುಖವನ್ನು ನೋಡಲಾಗದೆ ಅವಳ ಭುಜದಲ್ಲಿ ಮುಖವನ್ನು ಅಡಗಿಸಿ ಕೊಂಡು ಕಿವಿಗೆ ಮಾತ್ರ ಕೇಳಿಸುವಂತೆ ಹೇಳಿದಳು. ಅಳುವುದನ್ನು ನಿಲ್ಲಿಸಿ ಮೆಲ್ಲನೆಯ ಕಂಠದಲ್ಲಿ ಅವಳು ಹೇಳಲು ಆರಂಭಿಸಿದಳು. ತಾಯಿ ಅವಳನ್ನು ದೂರ ತಳ್ಳಿ ನಿಲ್ಲಿಸಿ ಶಾಪಕ್ಕೆ ಒಳಗಾದ ನೀಚ ಮಗಳನ್ನು ತುಚ್ಛವಾಗಿ ನೋಡುತ್ತಾ ನಿಂತಳಾತಾಯಿ.

ಆ ಮುಗ್ಧ ಮಗು ಹೇಳುತ್ತಲೇ ಇದ್ದಳು: "ಮಳೆ ಭರಭರನೆ ಬರುತ್ತಿತ್ತು...ಬಸ್ಸು ಬರಲಿಲ್ಲ. ಅದರಿಂದಲೇ ಕಾರಿನೊಳಕ್ಕೆ ಹತ್ತಿದೆ... ಆಮೇಲೆ ಎಲ್ಲೋ ಅರಣ್ಯದಂತಹ ಪ್ರದೇಶ...ಮನುಷ್ಯರೇ ಇಲ್ಲ...ಕತ್ತಲೆಂದರೆ ಕತ್ತಲು. ಮಳೆಯಾಗಿದ್ದರೂ ಇಳಿದು ಓಡಿ ಬಂದುಬಿಡೋಣವೆಂದುಕೊಂಡರೆ ನನಗೆ ದಾರಿ ತಿಳಿಯದು...ನಾನೇನು ಮಾಡಲಿ? ಆಮೇಲೆ ಏನಾಯಿತೆಂದರೆ...ಅಮ್ಮಾ...ಅವನು ನನ್ನನ್ನು..."

—ಅವಳು ಹೇಳಿ ಮುಗಿಸುವುದರೊಳಗೆ ನೋಟದಲ್ಲಿ ಮಿಂಚುಹುಳಗಳು ಹಾರುವಂತೆ ಆ ಏಟು ಅವಳ ಕಿವಿಯ ಮೇಲ್ಲೋ ನೆತ್ತಿಯ ಪಕ್ಕದಲ್ಲೋ ಜೋರಾಗಿಬಿತ್ತು. ಅಂಗಳದ ಮೂಲೆಯಲ್ಲಿ ಅವಳು ಕೆಳಗೆ ಉರುಳಿ ಬಿದ್ದಳು. ಕೈಯಲ್ಲಿದ್ದ ಪುಸ್ತಕಗಳು ದಿಕ್ಕಾಪಾಲಾಗಿ ಎವರ್ ಸಿಲ್ವರ್ ಟಿಫನ್ ಬಾಕ್ಸ್ ಕೆಳಗೆ ಬಿದ್ದು ಶಬ್ದ ಮಾಡಿ ಉರುಳಿತು.

"ಅಯ್ಯೋ ಪಾಪಿ! ನನ್ನ ತಲೆಯ ಮೇಲೆ ಬೆಂಕಿಯನ್ನು ಸುರಿದೆ ನೀನು..." ಎಂದು ಅರಚಲು ತೆಗೆದ ಬಾಯಿ ಹಾಗೆಯೇ ನಿಂತಿತು.

ಅದು ನಾಲ್ಕು ಸಂಸಾರಿಗಳಿದ್ದ ವಠಾರ. ಶಬ್ದ ಕೇಳಿ ಕೆಲವರು ಅಲ್ಲಿಗೆ ಓಡಿ ಬಂದರು.

"ಏನು. ಏನು ವಿಚಾರ ?" ಎಂದು ತೇವದ ಕೈಯನ್ನು ಸೀರೆಯ ಸೆರಗಿನಿಂದ ಒರೆಸಿ ಕೊಳ್ಳುತ್ತಾ ಸ್ವಾರಸ್ಯವಾಗಿ ವಿಚಾರಿಸುತ್ತಾ ಅಂಗಳಕ್ಕೆ ಬಂದಳು ಹಿಂದಿನ ಮನೆಯಾಕೆ.

"ಏನಿಲ್ಲ. ಈ ಜೋರಾದ ಮಳೆಯಲ್ಲಿ ನೆನೆದು ತೆಪ್ಪವಾಗಿ ಬಂದಿದ್ದಾಳೆ. ಕೊಳ್ಳೆ ಹೋದುದೇನು ? ಅಷ್ಟೊಂದು ಹಣ ಸುರಿದು ಓದಿಸುತ್ತಿರುವಾಗ ಅದೂ, ಪರೀಕ್ಷೆ ಸಮೀಪಿಸುತ್ತಿರುವಾಗ ಈ ರೀತಿ ನೆನೆದು ಜ್ವರ ಬಂದು ಮಲಗಿದರೆ! ಒಳ್ಳೆಯ ಕಾಲ. ಅವಳ ಅಣ್ಣ ಇಲ್ಲ: ಇದ್ದಿದ್ದರೆ ಈ ಹೊತ್ತಿಗೆ ಅವಳ ಚರ್ಮ ಸುಲಿದು ಹಾಕುತ್ತಿದ್ದ" ಎಂದು ಸುಳ್ಳು ಕಾರಣ ಹೇಳಿಕೊಂಡಳು ಆ ತಾಯಿ.

"ಸರಿ, ಸರಿ, ಬಿಡು, ಇದಕ್ಕಾಗಿ ಯಾರಾದರೂ ಈ ಮಗುವನ್ನು ಹೊಡೆಯುವ ರೇನು ?" ಹಿಂದಿನ ಮನೆಯಾಕೆಗೆ ವಿಷಯ ಅಷ್ಟೇನೂ ಸ್ವಾರಸ್ಯವಾಗಿರಲಿಲ್ಲವಾದ್ದರಿಂದ ಹೊರಟುಹೋದಳು.

ಬೀದಿಬಾಗಿಲನ್ನೂ ಹಾಲಿನ ಕಿಟಕಿಗಳನ್ನೂ ಚೆನ್ನಾಗಿ ಎಳೆದು ಮುಚ್ಚಿದಳು ಅವಳ ತಾಯಿ. ಒಂದೇ ಏಟಿನಿಂದ ಬೆಕ್ಕಿನ ಮರಿಯಂತೆ ಕೆಳಗುರುಳಿ ಈ ಒಂದೇಟಿಗೇ ಸ್ವಲ್ಪವೂ ವೇದನೆಪಡದೆ, 'ಇನ್ನೂ ಬಲವಾಗಿ ಅಮ್ಮ ತನ್ನನ್ನು ಹೊಡೆದರೆ, ಉಸಿರು ಹೋಗುವಂತೆ ತುಳಿದು ಹಾಕಿದರೆ' ಎಂದು ನಿರೀಕ್ಷಿಸಿ ಚಲನವಿಲ್ಲದೆ ಬಿದ್ದಿದ್ದ ಮಗಳನ್ನು ಕೋಪ ಜ್ವಾಲೆಯ ಕಣ್ಣುಗಳಿಂದ ಅಸಹ್ಯೆಯಾಗಿ ನೋಡಿದಳು ತಾಯಿ...

'ಇವಳನ್ನು ಏನು ಮಾಡುವುದು ?... ಒಂದು ಗೌರವವಾದ ಕುಟುಂಬವನ್ನೇ ಕಳಂಕಕ್ಕೀಡುಮಾಡಿಬಿಟ್ಟಳಲ್ಲಾ ?...ದೇವರೇ, ನಾನೇನು ಮಾಡಲಿ ?' ಎಂದು ತಿರುಗಿ ನೋಡಿದಳು.

ಅಡಿಗೆಮನೆಯಲ್ಲಿ ಒಲೆ ಒಂದೇ ಸಮನೆ ಜೋರಾಗಿ ಉರಿಯುತ್ತಿದ್ದುದರಿಂದ ಗೆಣಸು ಬೆಂದು ಸೀದು ಹೋಗುತ್ತಿತ್ತು...

'ಹಾಗೆಯೇ ಒಂದು ಮೊರ ಕೆಂಡವನ್ನು ಎತ್ತಿ ತಂದು ಇವಳ ತಲೆಯ ಮೇಲೆ ಸುರಿದರೆ ಏನಂತೆ ?' ಎಂದು ಎನಿಸಿತಾಕೆಗೆ.

—ಬೆಂಕಿಯ ಮಧ್ಯೆ ಬಿದ್ದು ಹುಳುವಿನಂತೆ ಒದ್ದಾಡಿ ಕಂದಿ ಸಾಯುವ ಮಗಳ ಭಯಂಕರ ದೃಶ್ಯ ಆ ತಾಯಿಯ ಕಣ್ಣುಮುಂದೆ ನಿಂತಿತು...

'ಆಮೇಲೆ ? ಅದರಿಂದ ಈ ಕಳಂಕ ದೂರವಾದೀತೆ ?... ಅಯ್ಯೋ ಮಗಳೇ, ನಿನ್ನನ್ನು ನನ್ನ ಕೈಯಿಂದಲೇ ಕೊಂದು ನಾನು ಜೀವದಿಂದಿರಲಿ ?... ನಾನೂ ನನ್ನ ಪ್ರಾಣವನ್ನು ತೆಗೆದುಕೊಂಡುಬಿಟ್ಟರೆ ? '

" ಹುಂ...ಆಮೇಲೆ ? ಅದರಿಂದ ಈ ಕಳಂಕ ಹೋಗಿಬಿಡುವುದೆ ?" ಅವಳ ತಾಯಿಗೆ ಏನೂ ತೋಚಲಿಲ್ಲ. ಮಗಳ ತಲೆಕೂದಲನ್ನು ಹಿಡಿದು ಮುಖವನ್ನು ಮೇಲೆತ್ತಿ ನಿಲ್ಲಿಸಿದಳು.

ಹಾಲಿನಲ್ಲಿ ನೇತು ಹಾಕಿದ್ದ ಹರಿಕೇನ್ ದೀಪದ ಬತ್ತಿಯನ್ನು ಹೆಚ್ಚುಮಾಡಿ ಅದನ್ನು ತಂದು ಮಗಳ ಹತ್ತಿರ ಹಿಡಿದು ಆ ಬೆಳಕಿನಲ್ಲಿ ಮಗಳನ್ನು ನಖಶಿಖಾಂತ ಒಂದೊಂದು ಅಂಗುಲವಾಗಿ ನೋಡಿದಳು. ಆ ನೋಟವನ್ನು ತಡೆಯಲಾರದೆ ಮುಖವನ ಮುಚ್ಚಿ ಕೊಂಡು " ಅಯ್ಯೋ ಅಮ್ಮ, ನನ್ನನ್ನು ನೋಡಬೇಡ " ಎಂದು ಬೆನ್ನು ತೋರಿಸಿ ಗೋಡೆಗೆ ಮುಖವನ್ನು ಇಟ್ಟು ಅಳಲಾರಂಭಿಸಿದಳು ಆ ಹುಡುಗಿ...

"ಅಯ್ಯೋ ದೇವರೆ ಆ ಪಾಪಿಗೆ ನೀನೇ ಶಿಕ್ಷೆ ಕೊಡಬೇಕು" ಎಂದು ಬಾಯಿ ಮುಚ್ಚಿ ಅವನ ಮುಖವನ್ನೇ ನೋಡದ ಅವಳ ತಾಯಿ ಅವನನ್ನು ಮನಸಾರೆ ಶಪಿಸಿದಳು; ಮಗಳನ್ನು ಮುಟ್ಟಲು ಕೈಗಳು ಹಿಂಜರಿದರೂ, ತಾನೇ ಅವಳನ್ನು ದೂರ ಮಾಡಿದರೆ ಅವಳು ಎಲ್ಲಿ ತಾನೇ ಶರಣುಹೋಗುವಳು ಎಂದು ಯೋಚಿಸಿ ಸಹಾನುಭೂತಿಯಿಂದ ಎಲ್ಲವನ್ನೂ ಸಹಿಸಿಕೊಂಡು, ತನ್ನ ನಡುಗುವ ಕೈಗಳಿಂದ ಮಗಳನ್ನು ಮುಟ್ಟಿದಳು. ' ನನ್ನ ವಿಧಿ ' ಎಂದು ದೀರ್ಘ ನಿಶ್ವಾಸವನ್ನು ಬಿಟ್ಟು, ಕೋಪಿಸಿಕೊಂಡು ಶಿಕ್ಷಿಸುವುದರಿಂದ ಇದಕ್ಕೆ ಪರಿಹಾರ ದೊರಕಲಾರದೆಂದು ಆಳವಾಗಿ ಯೋಚಿಸಿ, ಅವಳನ್ನು ಕೈಗಳಿಂದ ಹಿಡಿದು ಕೊಂಡು ಹರಿಕೇನ್ ದೀಪದೊಡನೆ ಬಾತ್‌ರೂಮಿಗೆ ಹೋದಳು.

'ಈಗೇನು ಮಾಡಬಹುದು ?...ಅವನು ಯಾರೆಂದು ಕಂಡುಹಿಡಿದರೆ ?...ಅವನ ತಲೆಗೇ ಇವಳನ್ನು ಕಟ್ಟಿಬಿಡಬಹುದೇನೋ ?...ಅಯ್ಯೋ ದೇವರೆ...ಮೃಗದ ರೀತಿ ಯಂತೆ ವರ್ತಿಸಿದ ಆ ಪಾಪಿಯೊಡನೆ ಜೀವನ ಪರ್ಯಂತ ಇವಳನ್ನು ಬಾಳಿಸುವುದೇ ? " ಎಂದು ಅವಳ ಮನಸ್ಸು ಅರಚಿತು...

ಬಾತ್‌ರೂಮಿನಲ್ಲಿ ತಣ್ಣೀರಿನ ತೊಟ್ಟಿಯ ಹತ್ತಿರ ಅವಳನ್ನು ನಿಲ್ಲಿಸಿ ಹಾಲಿನಲ್ಲಿ ದೀಪ ವನ್ನು ತೂಗುಹಾಕಿ ತಾನು ತಿಳಿದಂತಹ ದೇವರುಗಳೆಲ್ಲವನ್ನೂ ಮುಂದಿಟ್ಟು ಒಂದೂ ಅರಿಯದ ಆ ಮುಗ್ಧ ಬಾಲೆಯ ಮೇಲೆ ಎರಗಿದ ಕಳಂಕವನ್ನು ತೊಳೆದು ದೂರಮಾಡ ಲೆಂದು ಪ್ರಾರ್ಥಿಸಿದಳು. ಚಳಿಯಲ್ಲಿ ನಡುಗುವಳಂತೆ ಎದೆಯ ಮೇಲೆ ಕ್ರಾಸಾಗಿ ಕೈಗಳನ್ನು ಕಟ್ಟಿಕೊಂಡು ಕುಗ್ಗಿ ಬಾಗಿ ನಿಂತಿದ್ದಳು ಆ ಹುಡುಗಿ.

ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿ ಶಿಲೆಯಂತೆ ನಿಂತಿರುವ ಮಗಳ ಹತ್ತಿರ ಬಂದು ಮಾತನ್ನೂ ಆಡದ ಅವಳ ಉಡುಪೆಲ್ಲವನ್ನೂ ತಾನೇ ಬಿಚ್ಚಿದಳು. ಸೊಂಟಕ್ಕೆ ಕೆಳಗಿನ ವರೆಗೆ ಹೆಣೆದಿದ್ದ ಜಡೆಯನ್ನು ಬಿಚ್ಚಿ ಅವಳ ಮೃದುವಾದ ಬೆನ್ನನ್ನು ಮುಚ್ಚುವಂತೆ

ಕೂದಲನ್ನು ಹರಡಿದಳು. ಮೊಣಕಾಲುಗಳನ್ನು ಕಟ್ಟಿಕೊಂಡು ಒಂದು ಯಂತ್ರದಂತೆ ಕುಳಿತಿದ್ದ ಅವಳ ತಲೆಯ ಮೇಲೆ ಕೊಡ ಕೊಡವಾಗಿ ತೊಟ್ಟಿಯಲ್ಲಿದ್ದ ನೀರನ್ನು ಎತ್ತಿ ಸುರಿದಳು. ಅವಳ ತಲೆಯನ್ನು ಶೀಗೆಕಾಯಿ ಪುಡಿಯಿಂದ ಉಜ್ಜಿ ಮೆಲುಧ್ವನಿಯಲ್ಲಿ ಮಗಳನ್ನು ವಿಚಾರಿಸಿದಳು : "ನಿನಗೆ ಅವನ ಪರಿಚಯವಿದೆಯೆ ?"

"ಊಹೂಂ..."

"ಅವನ ಸರ್ವಸ್ವ ನಾಶವಾಗಲಿ. ಅವನನ್ನು ಏನು ಮಾಡಿದರೆ ಸರಿಯಾದೀತು ?" — ಹಲ್ಲುಗಳನ್ನು ಕಡಿದು ಶೀಗೆಪುಡಿಯನ್ನು ಉಜ್ಜಿದ ಬೆರಳುಗಳನ್ನು ಹುಲಿಯಂತೆ ಹರಡಿ ಕಣ್ಣುಗಳಲ್ಲಿ ಕೊಲೆ ಮಾಡುವ ಪ್ರತೀಕಾರದ ದೃಷ್ಟಿಯಿಂದ ನೆಟ್ಟಗೆ ನಿಂತಳು.

"ಉಂ...ಬಾಳೆ ಮರ ಆಡಿದರೂ ಅದಕ್ಕೆ ನಷ್ಟ. ಮುಳ್ಳು ಅಡಿದರೂ ನಷ್ಟ'—ಎಂದು ಉಕ್ಕಿ ಬಂದ ಆವೇಶವನ್ನು ಶಾಂತಗೊಳಿಸಿಕೊಂಡು ಮಗಳ ಹಣೆಬರಹವನ್ನೇ ಉಜ್ಜಿ ಅಳಿಸುವಂತೆ ಇನ್ನೂ ಸ್ವಲ್ಪ ಶೀಗೆಪುಡಿಯನ್ನು ಹಚ್ಚಿ ಅವಳ ತಲೆಯನ್ನು ಜೋರಾಗಿ ತೊಳೆದಳು.

ಎರಡು ವಯಸ್ಸಿನ ಮಗುವನ್ನು ಬಿಟ್ಟುಹೋದ ತನ್ನ ಗಂಡನನ್ನು ಆ ಸಮಯದಲ್ಲಿ ನೆನೆಸಿಕೊಂಡು ಅತ್ತಳು :

'ಅವರು ಮಾತ್ರ ಬದುಕಿದ್ದರೆ – ಸದ್ಯ ಮಹಾನುಭಾವರು ಈ ಕೆಟ್ಟ ದೃಶ್ಯವನ್ನು ನೋಡದೆ ಹೋದರಲ್ಲಾ? '

"ಈ ವಿಷಯ ಯಾರಿಗೂ ತಿಳಿಯಬಾರದು ಮಗಳೆ. ತಿಳಿದರೆ ಅದರೊಂದಿಗೆ ಒಂದು ಕುಟುಂಬವೇ ನಾಶವಾಗಿ ಬಿಡುವುದು. 'ನಮ್ಮ ಮನೆಯಲ್ಲೂ ಒಂದು ಹುಡುಗಿ ಇದೆಯಲ್ಲಾ, ಅವಳಿಗೇನಾದರೂ ಈ ರೀತಿ ಆಗಿದ್ದರೆ ಏನು ಮಾಡುತ್ತಿದ್ದೆವು ?' ಎಂದು ಯಾರೂ ಯೋಚಿಸುವುದಿಲ್ಲ ಪರಂಪರೆಯಾಗಿ ಬಂದ ದ್ವೇಷದಂತೆ ಕುಲವನ್ನೇ ನಾಶ ಮಾಡಿಬಿಡುವರು...ಮತ್ತೊಬ್ಬರನ್ನು ಅನ್ನುವೆನಲ್ಲಾ; ಬೇರೆಯವರಾದರೂ ನಾನೇ ಈ ರೀತಿ ಹೇಳುತ್ತಿರಲಿಲ್ಲವೆ ? ಬೇರೆ ರೀತಿಯಾಗಿ ತಾನೇ ಅನ್ನುವುದು. ಎಷ್ಟು ಅಂದಾಗಿದೆಯೋ ಈಗಾಗಲೇ " ಎಂದು ಹಲುಬಿ ಬಟ್ಟೆಯ ತುಂಡನ್ನು ಎತ್ತಿ ಮಗಳ ತಲೆಯನ್ನು ಒರೆಸಿದಳು. ನಂತರ ಅವಳ ಮುಖವನ್ನು ಎತ್ತಿ ಹಿಡಿದು ನೋಡಿದಳು. ತೊಳೆದು ಒರೆಸಿದ ಪಿಂಗಾಣಿ ಬಟ್ಟಲಿನಂತೆ ಯೌವನದಲ್ಲಿ ಕಳಂಕ ಹೊರಲು ದಾರಿಯೇ ಇಲ್ಲದ ಆ ಮುಗ್ಧ ಶಿಶುವಿನಂತಿದ್ದ ಮುಖವನ್ನು ಸ್ವಲ್ಪ ಹೊತ್ತು ತದೇಕ ದೃಷ್ಟಿಯಿಂದ ನೋಡಿ ಮಗಳ ನೆತ್ತಿಯನ್ನು ಆಸೆಯಿಂದ ಮುತ್ತಿಟ್ಟಳು : ನೀನು ಶುದ್ಧವಾಗಿಬಿಟ್ಟೆಯಮ್ಮಾ. ಮಗಳೇ ಶುದ್ಧವಾಗಿಬಿಟ್ಟೆ...ನಿನ್ನ ಮೇಲೆ ಸುರಿದೆನಲ್ಲಾ ಅದು ನೀರಲ್ಲ...ಖಂಡಿತ ನೀರಲ್ಲ; ಬೆಂಕಿ ಎಂದು ತಿಳಿ, ನಿನ್ನ ಮೇಲೆ ಈಗ ಕಳಂಕವೇ ಇಲ್ಲ...ನೀನು ಏನೂ ಅರಿಯದವಳು...ಮನಸ್ಸಿನಲ್ಲಿ ಕಲ್ಮಷವಿದ್ದರೇನೇ ಅದು ಕೆಟ್ಟದ್ದು. ನಿನ್ನ ಮನಸ್ಸು ನನಗೆ ಚೆನ್ನಾಗಿ ಗೊತ್ತು. ಪ್ರಪಂಚಕ್ಕೆ ಗೊತ್ತೇನು? ಅದಕ್ಕಾಗಿ ಹೇಳುತ್ತೇನೆ, ಇದು ಯಾರಿಗೂ ತಿಳಿಯ

ಬಾರದೆಂದು. ಏನು ಹಾಗೆ ನೋಡುತ್ತಿದ್ದೀಯ? ತಿಳಿದುಬಿಟ್ಟರೆ ಏನು ಮಾಡುವುದೆಂದು ಯೋಚಿಸುತ್ತಿದ್ದೀಯಾ? ಏನು ಗೊತ್ತಾಗುತ್ತೆ? ಯಾರೊಂದಿಗೋ ನೀನು ಕಾರಿನಲ್ಲಿ ಬಂದೆ ಅಂತ ತಾನೆ ಗೊತ್ತಾಗುತ್ತೆ. ಅದಕ್ಕಿಂತ ಹೆಚ್ಚಿಗೆ ಕಣ್ಣಾರೆ ಕಾಣದುದನ್ನು ಹೇಳಿದರೆ ನಾಲಿಗೆ ಕಿತ್ತಾರು ?...ಹುಂ...ಏನೂ ನಡೆದಿಲ್ಲ ಈಗ. ನಡೆದಿಲ್ಲ. ಕಾರಿನಲ್ಲಿ ಹತ್ತಿ ಬಂದುದು ಮಾತ್ರ ನೋಡಿ ಕತೆ ಕಟ್ಟುವರೇನು ? ಹಾಗೆ ನೋಡಿದರೆ ಊರಿನಲ್ಲಿ ಎಷ್ಟು ಜನರ ಮೇಲೆ ಬೇಕಾದರೂ ಕತೆ ಕಟ್ಟುವ ಗುಂಪೇ ಇದೆ...ಬಿಡು ಅವರನ್ನು ...ನಿನ್ನ ಒಳ್ಳೆಯದಕ್ಕೆ ನಾನು ಹೇಳುತ್ತೇನೆ. ನಿನ್ನ ಮನಸ್ಸಿನಲ್ಲಿ ಒಂದು ಕಳಂಕವೂ ಇಲ್ಲ. ನೀನು ಶುದ್ಧವಾಗಿರುವೆಯೆಂಬುದನ್ನು ನೀನೇ ನಂಬುವುದಕ್ಕಾಗಿ ಹೇಳುತ್ತೇನೆ...ನೀನು ನಂಬು... ನಿನ್ನನ್ನು ಶುದ್ಧಮಾಡಿದೆ...ನಾನು ಹೇಳುವುದು ಸತ್ಯ. ನೀನು ಶುದ್ಧಳಾದೆ...ಹೌದು... ದಾರಿಯಲ್ಲಿ ನಡೆದು ಬರುವಾಗ ಎಷ್ಟು ಬಾರಿ ಅಸಹ್ಯ ವಸ್ತು ತುಳಿದು ಬರುತ್ತೇವೆ ? ಅದಕ್ಕೆ ಕಾಲನ್ನೇ ಕತ್ತರಿಸಿಬಿಡುತ್ತೇವೇನು? ಚೆನ್ನಾಗಿ ತೊಳೆದುಕೊಂಡು ಪೂಜೆಮನೆಗೆ ಕೂಡ ಹೋಗುತ್ತೇವೆ...ನೀನು ಬರಬೇಡವೆಂದು ದೇವರು ಹಿಂದಕ್ಕೆ ತಳ್ಳುತ್ತಾನೇನು?... ಎಲ್ಲಾ ಮನಸ್ಸು...ಮನಸ್ಸು ಶುದ್ಧವಾಗಿರಬೇಕು. ನಿನಗೆ ಅಹಲ್ಯೆಯ ಕತೆ ಗೊತ್ತೆ? ರಾಮನ ಪಾದಧೂಳಿಯಿಂದ ಅವಳು ಪುನೀತಳಾದಳೆಂದು ಹೇಳುತ್ತಾರೆ. ಆದರೆ ಅವಳು ಮನಸ್ಸಿನಲ್ಲಿ ಕಳಂಕಿಯಾಗಿರಲಿಲ್ಲ. ಆದುದರಿಂದಲೇ ರಾಮನ ಪಾದಧೂಳಿಯಿಂದ ಅವಳಿಗೆ ಅಭ್ಯುದಯವಾಯಿತು. ಯಾಕೆ ಹೇಳುತ್ತೇನೆಂದರೆ ಅನಾವಶ್ಯಕವಾಗಿ ನಿನ್ನ ಮನಸ್ಸೂ ಕೆಡಬಾರದು ನೋಡು...ಇದೊಂದು ಕೆಟ್ಟ ಕನಸು ಎಂದುಕೊಂಡು ಇವನ್ನು ಮರೆತು ಬಿಡು. ನಿನಗೆ ಏನೂ ಆಗಲಿಲ್ಲ...

ಒಗೆದು ಒಣಗಿ ಹಾಕಿದ್ದ ಬಟ್ಟೆಗಳನ್ನು ತಂದು ಅವನ್ನು ಉಟ್ಟುಕೊಳ್ಳುವಂತೆ ಹೇಳಿದಳು ಆ ತಾಯಿ. "ಅದೇನು ಬಾಯಲ್ಲಿ, ಕಚಕಚ ಏನೋ ಅಗಿಯುತ್ತಿದ್ದೀಯಾ ?"

"ಚೂಯಿಂಗ್ ಗಂ,"

"ಕರ್ಮ, ಅದನ್ನು ಉಗಿ...ಥೀ ಉಗಿ. ಒಂದು ಬಾರಿ ಬಾಯನ್ನು ಚೆನ್ನಾಗಿ ತೊಳೆದುಕೊಂಡು ಬಾ ಎಂದು ಹೇಳಿ ಪೂಜಾ ಗೃಹಕ್ಕೈದಿದಳು.

ದೇವರ ಪಟದ ಮುಂದೆ ಮನಸ್ಸು ನೊಂದು ಕಂದಿದ ತಾಯಿ ಕೆಲವು ನಿಮಿಷಗಳ ಕಾಲ ತನ್ನನ್ನು ತಾನೇ ಮರೆತು ನಿಂತಿದ್ದಳು. ಪಕ್ಕದಲ್ಲಿ ಬಂದು ನಿಂತ ಮಗಳನ್ನು "ಮಗು. ನನಗೆ ಒಳ್ಳೆಯ ಬಾಳನ್ನು ಕೊಡು ಎಂದು ದೇವರನ್ನು ಬೇಡಿಕೊ—ಹೀಗೆಲ್ಲಾ ನಡೆಯಲು ನಾನೂ ಕಾರಣ. ವಯಸ್ಸಿಗೆ ಬಂದ ಹೆಣ್ಣನ್ನು ಹೊರಗೆ ಕಳುಹಿಸುತ್ತೇವಲ್ಲ. ಪ್ರಪಂಚ ಕುಲಗೆಟ್ಟು ಹೋಗಿದೆಯೆಂದು ನನಗೆ ತೋರದೆಹೋಯಿತು. ನನ್ನ ಮಗಳು ಕಾಲೇಜಿಗೆ ಹೋಗುತ್ತಾಳೆಂಬ ಹೆಮ್ಮೆಯ ಮಧ್ಯೆ ನನಗೇ ಬೇರೇನೂ ತೋರಲಿಲ್ಲ. ಮೇಲಾಗಿ ನನಗೆ ನೀನು ಇನ್ನೂ ಮಗುವೇ...ಆದರೆ ಇನ್ನು ನೀನು ಪ್ರಪಂಚಕ್ಕೆ ಮಗುವಲ್ಲ...ಇನ್ನು ಅದನ್ನು ಮರೆತುಬಿಡು...ಏನು, ಮರೆತುಬಿಡು ಎಂದು ಹೇಳಿದೆನೆ ? ಅದನ್ನು ಮರೆ

ಯದೆ ವರ್ತಿಸು. ಯಾರ ಹತ್ತಿರವೂ ಈ ವಿಚಾರ ಮಾತನಾಡಬೇಡ, ಈ ಒಂದು ವಿಚಾರ ದಲ್ಲಿ ಮಾತ್ರ ಸ್ನೇಹಿತರು, ಆತ್ಮೀಯರು ಎಂಬುವರಿಲ್ಲ. ಯಾರ ಬಳಿಯೂ ಇದನ್ನು ಹೇಳುವುದಿಲ್ಲವೆಂದು ನನ್ನ ಕೈಮೇಲೆ ಕೈಯಿಟ್ಟು ಆಣೆಯಿಡು...ಹುಂ"—ತನ್ನ ರಹಸ್ಯ ವನ್ನು ಕಾಪಾಡಿಕೊಳ್ಳುವುದಕ್ಕಾಗಿ ಆಣೆಯಿಡುವಂತೆ ಕೇಳಿ ಕೈ ತೋರಿ ಎದುರಿಗೆ ನಿಂತ ತಾಯಿಯ ಕೈಯಲ್ಲಿ ತನ್ನ ಕೈಯನ್ನಿಟ್ಟು ಬಿಗಿಯಾಗಿ ಹಿಡಿದು "ಸತ್ಯವಾಗಿ...ಯಾರ ಬಳಿಯೂ ಹೇಳುವುದಿಲ್ಲ..."

"ಪರೀಕ್ಷೆಯಲ್ಲಿ ಚೆನ್ನಾಗಿ ಮಾರ್ಕ್ಸ್ ತೆಗೆದು ಬರುತ್ತಿದ್ದಾಳೆ. ಬುದ್ಧಿವಂತೆ ಅಂತ ನೆನೆಸಿದ್ದೆ. ಈಗ ತಾನೇ ನೀನು ಬುದ್ಧಿವಂತಳಾಗಿದ್ದೀಯ. ಇನ್ನು ಮೇಲೆ ಯಾವಾಗಲೂ ಬುದ್ಧಿವಂತಳಾಗಿಯೇ ಇರು" ಎಂದು ಮಗಳ ಮುಖವನ್ನು ಒಂದು ಕೈಯಲ್ಲಿ ಎತ್ತಿ ಇನ್ನೊಂದು ಕೈಯಿಂದ ವಿಭೂತಿ ಧಾರಣೆ ಮಾಡಿದಳು.

ಆ ಮುಗ್ಧೆಯ ನಯನಗಳಲ್ಲಿ ಪೂಜಾಗೃಹದಲ್ಲಿ ಬೆಳಗುತ್ತಿದ್ದ ದೇವರ ದೀಪಗಳ ಬೆಳಕು ಮಿಂಚಿತು. ಅದು ದೀಪದ ನೆರಳು ಮಾತ್ರವಲ್ಲ. ಅದರಲ್ಲಿ ಹೆಣ್ಣುತನ ಮೂರ್ತೀಭವಿಸಿದ ಬೆಳಕೇ ಪ್ರಕಾಶಿಸುತ್ತಿದೆ ಎಂದುಕೊಂಡಳು ತಾಯಿ.

ಅದೋ, ಅವಳು ಕಾಲೇಜಿಗೆ ಹೋಗುತ್ತಿದ್ದಾಳೆ. ಅವಳು ಹೋಗುವ ದಾರಿಯಲ್ಲಿ ಡಾಂಭಿಕವಾದ ನೂರಾರು ಕಾರುಗಳು ಅಡ್ಡವಾಗಿಯೇ ಬರುತ್ತವೆ. ಒಂದನ್ನಾದರೂ ಅವಳು ತಲೆಯೆತ್ತಿ ನೋಡಬೇಕಲ್ಲ! ಕೆಲವುವೇಳೆ ನೋಡುತ್ತಾಳೆ. ಆ ನೋಟದಲ್ಲಿ, ತನ್ನ ದಾರಿಯಲ್ಲಿ ಆ ಕಾರೋ, ಆ ಕಾರಿನ ದಾರಿಯಲ್ಲೇ ತಾನೋ ಸಿಕ್ಕಿಕೊಳ್ಳಬಾರದೆಂಬ ಜಾಗೃತಭಾವ ಮಾತ್ರ ಇರುತ್ತಿತ್ತು.

# 2. ನಂದನವನದಲ್ಲಿ ಒಬ್ಬ ಆಂಡಿ

ದೂರದ ನೋಟಕ್ಕೆ ಅದು ಒಂದು ನಂದನವನದಂತೆ ಕಾಣುವುದು. ಆದರೆ ಅದು ನಂದನವನವಲ್ಲ; ಸ್ಮಶಾನ!

ಹಸಿರು ಬಳ್ಳಿಗಳಿಂದ ಹರಡಿನಿಂತ ಕಾಂಪೌಂಡ್. ಅದರೊಳಗೆ ನಾಲ್ಕು ದಿಕ್ಕಿನಲ್ಲೂ ಆವೃತವಾದ ಆ ಸ್ಮಶಾನದ ಉತ್ತರ ಭಾಗದ ಒಂದು ಮೂಲೆಯಲ್ಲಿ ಈಚಲು ಗರಿಗಳಿಂದ ಕಟ್ಟಲ್ಪಟ್ಟ ಚಿಕ್ಕದಾದ ಗುಡಿಸಲು.

ಅದರಲ್ಲೇ ಆಂಡಿ ವಾಸಿಸುವುದು. ಗುಡಿಸಲ ಮುಂದೆ ಬೇವಿನ ಮರದ ರೆಂಬೆಗೆ ಕಟ್ಟಿದ ಬಟ್ಟೆಯ ತೊಟ್ಟಿಲಲ್ಲಿ ಅವನ ಸುಪುತ್ರ ಇರುಳ ಸುಖವಾಗಿ ನಿದ್ರಿಸುತ್ತಿದ್ದ.

ಅದೋ ಅವನ ಹೆಂಡತಿ ಮುರುಗಾಯಿ ಬೇಲಿಯ ಪಕ್ಕದಲ್ಲಿ ಕಟ್ಟಿಗೆ ಆರಿಸುತ್ತಿದ್ದಳು.

ಹೌದು; ಆಂಡಿಗೆ ಹೆಂಡತಿ—ಮಗ ಇಬ್ಬರೂ ಇದ್ದರು. ಅವನ ಹೆಸರು ಮಾತ್ರ ಆಂಡಿ. ಅವನಿದ್ದ ಆ ಜಾಗ ದೂರದ ನೋಟಕ್ಕೆ ಮಾತ್ರ ನಂದನವನ.

ಆಂಡಿ ಸ್ಮಶಾನದಲ್ಲಿ ಹಳ್ಳ ತೋಡುವವನು. ಅವನು ವಾಸಿಸುವ ಸ್ಥಳ ಸ್ಮಶಾನ. ಆ ಸ್ಮಶಾನಭೂಮಿಗೆ ಬರುವ ಶವಗಳಿಗೆ ಹಳ್ಳ ತೋಡುವುದು ಅವನ ಕೆಲಸ. ಅದಕ್ಕಾಗಿ ಮುನಿಸಿಪಾಲಿಟಿಯಿಂದ ತಿಂಗಳಿಗೆ ಏಳು ರೂಪಾಯಿ ಸಂಬಳವೂ, ಅಲ್ಲಿಯೇ ವಾಸ ವಾಗಿರಲು ಮನೆಯನ್ನು ಕೊಟ್ಟಿದ್ದಾರೆ.

ಆಂಡಿ 'ಒಂದು ತರಹೆ' ವ್ಯಕ್ತಿ; ಹುಚ್ಚನಲ್ಲ. ಸಂತೋಷವೆಂದರೆ ಏನೆಂದೇ ತಿಳಿಯ ದವರು, ಯಾವಾಗಲೂ ಸಂತೋಷವಾಗಿ ಹಾಡಿಕೊಂಡಿರುತ್ತಿದ್ದ ಅವನನ್ನು 'ಒಂದು ತರಹೆ' ಎಂದು ಭಾವಿಸಿದ್ದರು. ಅವನ ಒಡಲಲ್ಲಿ ಎಂದೂ ಬೇಸರವೋ ಶ್ರಮವೋ ಉಂಟಾದುದೇ ಇಲ್ಲ. ವಯಸ್ಸು 40 ವರ್ಷ; 20 ವರ್ಷದ ಯುವಕನಂತೆ ಯಾವಾಗಲೂ ಚಟುವಟಿಕೆಯಿಂದಿರುತ್ತಿದ್ದ.

ಅರ್ಥವಾಗಿಯೋ ಆಗದೆಯೋ ಅವನ ಬಾಯಿ ಉಚ್ಚ ಸ್ವರದಲ್ಲಿ ಸದಾ ಒಂದು ಹಾಡನ್ನು ಹಾಡಿಕೊಂಡೇ ಇರುತ್ತಿತ್ತು.

"ನಂದನವನತ್ತಿಲ್ ಓರ್ ಆಂಡಿ—ಅವನ್
ನಾಲಾರು ಮಾದಮಾಯ್ ಕುಯವನ್ಯೆ ವೇಂಡಿ
ಕೊಂಡು ವಂದಾನ್ ಒರು ತೋಂಡಿ—ಅದ್ಯೆ
ಕೊತ್ತಾಡಿ ಕೊತ್ತಾಡಿ ಪೋಟ್ಟುಡೈತ್ತಾಂಡಿ..."

(ನಂದನವನದಲ್ಲೋರ್ವ ಆಂಡಿ—ಅವನು ನಾಲ್ಕಾರು ತಿಂಗಳುಗಳಿಂದ ಭಗವಂತ ನನ್ನು ಬೇಡಿಕೊಂಡು ತಂದ ಒಂದು ಗುದ್ದಲಿ—ಕುಣಿ ಕುಣಿದು ಹಳ್ಳ ತೋಡಿದ.)

ಹಳ್ಳ ತೋಡುವ ಕೆಲಸವಿದ್ದಾಗ ಅವನು ನಂದನವನದ ಕೆಲಸದಲ್ಲಿ ತೊಡಗುತ್ತಿದ್ದ. ಅವನ ಶ್ರಮದಿಂದಲೇ ಆ ಸ್ಮಶಾನವು ಕೂಡ ನಂದನವನವಾಗಿತ್ತು. ಶೋಕವೆಂದರೆ ಏನು ಎಂದೇ ಅವನರಿಯ.

ಗಿಡಗಳಿಗೆ ನೀರು ಹರಿಸುವಾಗಲಾಗಲಿ, ಹೆಣಗಳಿಗೆ ಹಳ್ಳ ತೋಡುವಾಗಲಾಗಲಿ—ಚಂಚಲತೆಯೋ ದುಃಖವೋ ಯಾವುದೂ ಇಲ್ಲದೆ, ಉಚ್ಚ ಸ್ವರದಲ್ಲಿ ಕೊರಳ ನರಗಳು ಉಬ್ಬುಬರುವಂತೆ ಹಾಡನ್ನು ತನ್ನ ಕರ್ಕಶ ಸ್ವರದಲ್ಲಿ ಹಾಡುತ್ತಿದ್ದ.

ಅವನ ಮಟ್ಟಿಗೆ ಆ ಹಾಡಿಗೆ ಯಾವ ಅರ್ಥವೂ ಇಲ್ಲ; ಕೇವಲ ಅಭ್ಯಾಸ ಬಲ.

ಅದು ಶವಗಳನ್ನು ಹೂಳುವ ಪ್ರದೇಶವಾದ್ದರಿಂದ ವಿಶೇಷವಾಗಿ ಮಕ್ಕಳ ಶವಗಳೇ ಅಲ್ಲಿ ಬರುತ್ತಿದ್ದುವು.

'ಮೂರಡಿ ಅಗಲ, ಮೂರಡಿ ಆಳ'ವಾದ ಹಳ್ಳ ತೋಡುವುದು ಆಂಡಿಗೆ ದೊಡ್ಡ ಕೆಲಸವಲ್ಲ.

ತಲೆಯಲ್ಲಿ ಬಿಗಿಯಾಗಿ ಕಟ್ಟಿದ ಲಪ್ಪೇಟ, ಭದ್ರವಾಗಿ ಕಟ್ಟಿದ ಪಂಚೆಯೊಂದಿಗೆ ಕಾಲು ಗಳನ್ನು ಅಗಲಿಸಿ ನಿಂತಿರುತ್ತಿದ್ದ. ಅವನ ಕೈಯಲ್ಲಿದ್ದ ಗುದ್ದಲಿ ಅನಾಯಾಸವಾಗಿ ಭೂಮಿಯ ಮೇಲೆ ಬಿದ್ದು ಮೇಲಕ್ಕೆ ಏಳುತ್ತಿತ್ತು. ಒಂದೊಂದೇಟಿಗೂ ತೇವಗೊಂಡ ಮಣ್ಣು ಎದ್ದು ಬರುತ್ತಿತ್ತು. ಭೂಮಿಯೇ ಸರಿದೇಳುತ್ತಿತ್ತು.

"...ಕೊಂಡು ವಂದಾನ್ ಒರು ತೋಂಡಿ—ಅದ್ಯೆ ಕೂತ್ತಾಡಿ ಕೂತ್ತಾಡಿ... ಪೋಟ್ಟು ಡ್ಯೆತ್ತಾಂಡಿ..."

ಆ 'ಕುಣಿದು' ಎಂಬ ಪದವನ್ನು ಒತ್ತಿ ಒತ್ತಿ ಉಚ್ಚರಿಸುತ್ತಾ ಭೂಮಿಯ ಎದೆ ಯನ್ನು ಸೀಳುವಾಗ ಅವನನ್ನು ಯಾರಾದರೂ ಕಂಡರೆ ಆ ಹಾಡಿನ ಅರ್ಥ ತಿಳಿದೇ ಅವನು ಹಾಡುತ್ತಿದ್ದಾನೆ ಎಂದು ಭಾವಿಸುತ್ತಿದ್ದರು.

ನಿಜವಾಗಿಯೂ ಆ ಹಾಡಿನ ಅರ್ಥ ಅವನಿಗೆ ತಿಳಿಯದು.

ಅವನು ಆ ಹಾಡನ್ನು, ಎಲ್ಲಿ ಯಾವಾಗ ಕಲಿತ ?

ನಮಗೆ ತಿಳಿದಿರುವ ಒಂದೊಂದು ಮಾತನ್ನೂ ಎಲ್ಲಿ ಯಾವಾಗ ಕಲಿತು ಮೊದಲು ಉಚ್ಚರಿಸಿದೆವು ಎಂಬುದನ್ನು ಹೇಳಲಾದೀತೆ ? ಆದರೆ, ಯಾವುದಾದರೊಂದು ವಿಶೇಷ ಪದವನ್ನು ಕುರಿತು ಆಲೋಚಿಸದಲ್ಲಿ ನಮ್ಮಲ್ಲಿ ಎಷ್ಟೋ ಮಂದಿ ಹೇಳಿಬಿಡಬಲ್ಲರು.

ಆಂಡಿ ಈ ಹಾಡನ್ನು ಯಾವಾಗ ಎಲ್ಲಿ ಮೊದಮೊದಲು ಕೇಳಿದ ? ಸ್ವಲ್ಪ ನೆನಪಿಸಿ ಕೊಂಡರೆ ಅವನು ಹೇಳಲು ಸಾಧ್ಯ.

* * *

ಒಂದು ದಿನ ಪ್ರಾತಃಕಾಲ. ಹಗ್ಗದ ಮಂಚದ ಮೇಲೆ ಮಲಗಿದ್ದವನು ಎಚ್ಚರಗೊಂಡು ಕಣ್ಣುಗಳನ್ನುಜ್ಜಿಕೊಂಡು ನೋಡಿದ ಆಂಡಿ. ಎದುರುಗಡೆಯ ದೃಶ್ಯ ಅವನಿಗೆ ಆಶ್ಚರ್ಯ ಕರವಾಗಿ ಕಂಡಿತು.

ಗುಡಿಸಲಿನ ಬಾಗಿಲಲ್ಲಿ, ಹರಿದುಹೋದ ಚಾಪೆಯ ಮೇಲೆ, ಪದ್ಧತಿಯನ್ನು ಮೀರಿ ನಿದ್ರೆಯಿಂದೇಳದೆ ತನ್ನನ್ನೇ ಮರೆತು ಮಲಗಿದ್ದಳು ಮುರುಗಾಯಿ.

ಅವನು ತಾನು ಎದ್ದಮೇಲೆ ಅವಳು ಇನ್ನೂ ಮಲಗಿದ್ದುದನ್ನು ವಿವಾಹವಾದ ಆ ಹದಿನೈದು ವರ್ಷಗಳ ಕಾಲದಲ್ಲಿ ಒಂದು ದಿನವೂ ನೋಡಿದ್ದಿಲ್ಲ.

"ಏಯ್...ಮುರುಗಾಯಿ..." ಎಂದು ಕೂಗಿದ.

ಅವಳು ಏಳಲಿಲ್ಲ; ಹೊರಳಿ ಮಲಗಿದಳು.

ಅವನು ತನ್ನ ಹಗ್ಗದ ಮಂಚವನ್ನು ಬಿಟ್ಟೆದ್ದು ಹೋಗಿ ಅವಳ ಬಳಿ ಕುಳಿತ.

'ಜ್ವರವೇನಾದರೂ ಬಂದಿದೆಯೋ?' ಎಂದು ಯೋಚಿಸಿ ಅವಳ ಹಣೆಯನ್ನು ಮುಟ್ಟಿ ನೋಡಿದ. ಜ್ವರವೇನೂ ಇಲ್ಲ.

"ಮುರುಗಾಯಿ..." ಎಂದು ಮತ್ತೆ ಎಚ್ಚರಿಸಿದ.

ಮೈಮರೆತು ಮಲಗಿದ್ದ ಮುರುಗಾಯಿ ಕಣ್ತೆರೆದಳು. ಎದುರುಗಡೆ ಗಂಡ ಕುಳಿತಿದ್ದು ದನ್ನು ಕಂಡು ಎದ್ದು ಕುಳಿತು ಅವನನ್ನು ಮತ್ತೆ ಮತ್ತೆ ನೋಡಿದಳು.

"ಏನು ಮುರುಗಾಯಿ...ಮೈಗೆ ಹುಷಾರಿಲ್ಲವೆ?" ಎಂದು ಕಾತರದಿಂದ ಕೇಳಿದ ಆಂಡಿ.

"ಏನೂ ಇಲ್ಲ...ಮೈಕೈಯೆಲ್ಲಾ ನೋವು...ಏಟು ತಿಂದಂತೆ...ಗಿರ್ರನೆ ತಲೆ ಸುತ್ತು ತ್ತಿದೆ..." ಎಂದು ಹೇಳುವಾಗಲೇ ಕಪ್ಪಾದ ರೆಪ್ಪೆಗಳು ಹೊಡೆದುವು.

"ಕನಸೊಂದು ಕಂಡೆ."

"ಏನು ಕನಸು?"

ಮುರುಗಾಯಿ ಕಣ್ಣುಗಳನ್ನು ಹೊಸಕಿಕೊಂಡೇ ಆಕಳಿಸಿದಳು.

"ಕನಸಿನಲ್ಲಿ ಒಂದು ಹುಳು...ಕಪ್ಪಾಗಿ...ಚಿಕ್ಕದಾಗಿ..." ಅವಳ ದೇಹ ಒಮ್ಮೆ ಕಂಪಿಸಿತು.

"ಹುಂ..."

"ಹೇಳುವಾಗಲೇ ಮೈ ನಡುಗುತ್ತೆ...ಆ ಕಪ್ಪು ಹುಳು ತೆವಳಿಕೊಂಡೇ ಬಂದು ನನ್ನ ಕೈಮೇಲೆ ಏರಿತು...ಏರಿದೊಡನೆ ಅದು ಹಳದಿ ಬಣ್ಣದ್ದಾಯಿತು—ಊಹುಂ, ಹಳದಿ ಯಲ್ಲ...ಬಂಗಾರದ ಬಣ್ಣ... ಹಾಗೆ ಜ್ವಾಲಾಯಮಾನವಾಗಿತ್ತು...ಅದು ನನ್ನ ಕೈ ಮೇಲೆಯೇ ಬಂದು ಕುಳಿತು...'ನನ್ನನ್ನು ತಿಂದುಬಿಡು, ನನ್ನನ್ನು ತಿಂದುಬಿಡು' ಎಂದಿತು."

"ಹುಂ, ಆಮೇಲೆ...?"

"ಹಾಗೆಂದು ಹೇಳಿಕೊಂಡೇ ನನ್ನ ಕೈಯನ್ನು ಕೊರೆಯಲಾರಂಭಿಸಿತು. ನನಗೇನೋ ಬುದ್ಧಿ ಕೆಟ್ಟಂತಾಗಿ ಆವೇಶವೇ ಉಂಟಾಯಿತು...ಛೀ, ಈ ಅಲ್ಪಕ್ರಿಮಿಗೆ ಎಷ್ಟು ಧೈರ್ಯ. ಹತ್ತಿರ ಬಂದು 'ತಿಂದುಬಿಡು, ತಿಂದುಬಿಡು' ಎಂದು ಹೇಳುತ್ತದೆಯಲ್ಲಾ...? ನಾವು ತಿನ್ನುವುದಿಲ್ಲ ಎಂಬ ಧೈರ್ಯದಿಂದ..."

—ಅವಳ ಮುಖದಲ್ಲಿ ಕೆಂಪೇರಿತು, ಸಂಕುಚಿತಗೊಂಡಿತು.

"ಮೈಯೆಲ್ಲಾ ಒಂದು ತರಹೆಯಾಯಿತು. ಆ ಹುಳವನ್ನು ಎರಡು ಬೆರಳಲ್ಲಿ ಹಿಡಿದು ಬಾಯಲ್ಲಿ ಹಾಕಿಕೊಂಡು ಅಗಿದುಬಿಟ್ಟೆ...ವ್ವಾ! ವ್ವಾ!!"

—ಅವಳು ಇನ್ನೂ ಮುಗಿಸಲಿಲ್ಲ. ಕರುಳು ಹಿಡಿದಂತೆ ಆಗಿ ಕೊರಳ ನರಗಳುಬ್ಬಿದುವು. ತಲೆ ಭಾರವಾಯಿತು; ಉಸಿರುಗಟ್ಟಿದಂತಾಗಿ ಕಣ್ಣುಗಳು ಕೆಂಪಾದುವು.

'ವ್ವಾ ವ್ವಾ!'

"ಅಯ್ಯೋ...ಆ ಹುಳು ಹೊಟ್ಟೆಯೊಳಗೆ ಓಡಾಡುತ್ತಿದೆ..."

ಮತ್ತೆ ವಾಕರಿಕೆ.

ತಾನು ಹೊಟ್ಟೆಯನ್ನು ಹಿಡಿದುಕೊಂಡು ಶಿರಬಾಗಿ ಕುಳಿತಳು. ಬಾಯೆಲ್ಲಾ ಪಿತ್ತದ ನೀರು.

"ಅಯ್ಯೊ... ಹೊಟ್ಟೆಯಲ್ಲಿ ಹುಳು."

— ಆಂಡಿಗೆ ಅರ್ಥವಾಯಿತು. ಅವನು ಆನಂದತುಂದಿಲನಾದ.

ಹದಿನೈದು ವರ್ಷಗಳಿಂದ ಪ್ರಾಪ್ತವಾಗದುದು...ಎಷ್ಟೋ ವರ್ಷ ನಿರೀಕ್ಷಿಸಿ ನಿರಾಶೆಗೊಂಡು ಇನ್ನಿಲ್ಲವೆಂದು ತೀರ್ಮಾನ ಮಾಡಿಕೊಂಡು ಮರತೇ ಹೋದ ನಂತರ

—ಕರುಳು ಹಿಂಡಿದಂತಾಗಿ ದೇಹವೆಲ್ಲಾ ಕುಲುಕಿ ವಾಂತಿ ಮಾಡಿಕೊಂಡಳು ಮುರುಗಾಯಿ.

—"ಆ...ಅದೇ ಹಾಹಾ...ಮುರುಗಾಯಿ ಅದೇ ಹಾ ಹಾ" ಆಂಡಿ ನಕ್ಕ.

"ವ್ವಾ..."

—ಹೊಟ್ಟೆ ಹಿಡಿದುಕೊಂಡು ತಲೆ ಬಗ್ಗಿಸಿ ಕುಳಿತಿದ್ದ ಮುರುಗಾಯಿಯನ್ನು ಆಂಡಿ ಆಲಂಗಿಸಿ ನಕ್ಕ.

"ಹಾ ಹಾ ಹಾ...ಅದೇ ಅದೇ..."

ಬಲವಾಗಿ ವಾಂತಿ ಮಾಡುತ್ತಲೇ ಬಂದ ನಗುವನ್ನು ತಡೆಯಲಾರದೆ ಮುರುಗಾಯಿ ತೊಳಲಾಡಿದಳು.

"ಹೊಟ್ಟೆ ತೊಳೆಸುತ್ತಿದೆ. ತಡೆಯಲು ಆಗುತ್ತಲೇ ಇಲ್ಲ ಅಯ್ಯೊ..." ಎಂದು ಪ್ರಲಾಪಿಸಿದಳು.

"ಸುಮ್ಮನಿರು, ನಮ್ಮ ಎಡಿವೇಲು ವೈದ್ಯರ ಬಳಿ ಹೋಗಿ ಏನಾದರೂ ಔಷಧ ತರುತ್ತೇನೆ" ಎಂದು ಟವಲನ್ನು ಒದರಿ ಭುಜದ ಮೇಲೆ ಹಾಕಿಕೊಂಡು ಹೊರಟ ಆಂಡಿ.

ಮುರುಗಾಯಿ ನಕ್ಕಳು.

"ಏಯ್ ಸುಮ್ಮನಿರು. ಯಾರಾದರೂ ನಕ್ಕಾರು."

"ನೀ ಪಡುವ ಅವಸ್ಥೆ ನೋಡಲಾರೆ..."

"ನೀನೇನು ನೋಡಬೇಕು...ಆ ಕಡೆ ಹೋಗಿ ನಿಲ್ಲು..."

ಆಂಡಿ ಮನಸ್ಸಿನಲ್ಲಿ ಉಕ್ಕಿ ಬಂದ ಸಂತಸದಿಂದ ಸ್ಮಶಾನದ ಬಾಗಿಲ ಬಳಿ ಬಂದು ನಿಂತ.

ಆಗ ತಾನೇ ಆ ಬೀದಿಯಲ್ಲಿ ಹೋದ ಕಾವಿ ಧರಿಸಿದ ಸಾಧುವೊಬ್ಬ ಮೈಮರೆತವನಂತೆ ಆ ಹಾಡನ್ನು ಹಾಡಿಕೊಂಡು ಹೋಗುತ್ತಿದ್ದ.

"ನಂದನವನತ್ತಿಲ್ ಓರ್ ಆಂಡಿ—ಅವನ್
ನಾಲಾರು ಮಾದಮಾಯ್ ಕುಯವನ್ನೈ ವೇಂಡಿ
ಕೊಂಡುವಂದಾನ್ ಒರು ತೋಂಡಿ—ಅದ್ಯೆ
ಕೊತ್ತಾಡಿ ಕೊತ್ತಾಡಿ ಪೋಟ್ಟುಡೈತ್ತಾಂಡಿ..."

ಇದುವರೆಗೆ ಅನುಭವಿಸಿ ಅರಿಯದ ಒಂದು ನೂತನ ಭಾವದಲ್ಲಿ, ಸಂತೋಷದಲ್ಲಿ ಲಯಗೊಂಡು ತನ್ನನ್ನು ತಾನೇ ಮರೆತು ನಿಂತಿದ್ದ ಆಂಡಿಯ ಮನದಲ್ಲಿ, ತಾಳಲಯಬದ್ಧವಾಗಿ ತರಂಗರಂಗವಾಗಿ ಬಂದ ಆ ಹಾಡಿನ ಒಂದೊಂದು ಪದವೂ ನೆಟ್ಟಿತು.

ಅದು ಮರೆಯದೆ ಇರಲೆಂಬಂತೆ ಆ ಸಾಧು ಆ ನಾಲ್ಕು ಸಾಲುಗಳನ್ನು ಮತ್ತೆ ಮತ್ತೆ ಹಾಡಿಕೊಂಡು ಸಾಗಿದ.

ಅಂದಿನಿಂದ ತನಗರಿಯದಂತೆ ಆಂಡಿ ಸಹ ಆ ಹಾಡನ್ನು ಹಾಡುತ್ತಾ ಮರೆಯಲಾರಂಭಿಸಿದ.

"ನಂದ ವನತ್ತಿಲ್ ಓರ್ ಆಂಡಿ..."

* * *

ಸಾವಿರಾರು ಸಂಖ್ಯೆಯಲ್ಲಿ ಮಾನವದೇಹಗಳು ಶವಗಳಾಗಿ ಹೂಳಲ್ಪಟ್ಟು ಆ ಸ್ಮಶಾನ ಭೂಮಿಯ ಮೇಲೆ ಒಬ್ಬ ಮನುಷ್ಯನ ಜನನವಾಯಿತು.

ಆಂಡಿಗೆ ಒಂದು ಮಗು ಹುಟ್ಟಿತು.

ತಾಯಿಯ ಗರ್ಭದಲ್ಲಿ ಮಗನು ಹುಟ್ಟಿದ ದಿನ ಉಂಟಾದ ಕುತೂಹಲವನ್ನು ಆಂಡಿಗೆ ಎಂದೂ ಮರೆಯಲಾಗಲಿಲ್ಲ.

ದಿನವೆಲ್ಲಾ ತನ್ನ ಸುಪುತ್ರನನ್ನು ಎತ್ತಿಕೊಂಡು ಕುಣಿದಾಡಿದ.

ನೂರಾರು ಸಂಖ್ಯೆಯಲ್ಲಿ ಮಕ್ಕಳ ಶವಗಳಿಗೆ ಹಳ್ಳಗಳನ್ನು ತೋಡಿದ ಆಂಡಿಯ ಕರಗಳು ತನ್ನ ಮುದ್ದು ಮಗನನ್ನು ಎದೆಗೆ ಅಪ್ಪಿಕೊಂಡು ಮನಃಪೂರ್ವಕ ನೇವರಿಸಿದುವು.

—ತನ್ನ ಮುದ್ದು ಮಗನನ್ನು ಎದೆಗೆ ಅಪ್ಪಿಕೊಂಡು ಮನಃಪೂರ್ವಕ ಮುದ್ದಾಡಿ ಸಂತಸಗೊಂಡ ಆಂಡಿಯ ಕರಗಳು ಊರಿನ ಮಕ್ಕಳ ಶವಗಳಿಗೆ ಹಳ್ಳಗಳನ್ನು ತೋಡಿದುವು.

ಊರಿನವರ ಪುತ್ರಶೋಕವನ್ನು ಅವನು ಅರಿತವನಲ್ಲ.

ರೋಜಾಗಿಡಕ್ಕೆ ಪಾತಿ ಅಗೆಯುವ ಬಾಲಕನಂತೆ ಹಾಡು ಹಾಡಿಕೊಂಡೇ ಹಳ್ಳ ತೋಡುತ್ತಿದ್ದ.

ಹತ್ತಿರದಲ್ಲಿರುವ ಆ ಹಸುಗೂಸಿನ ಶವವನ್ನು ನೋಡಲಾಗಿ—ಅದೋ, ಪಕ್ಕದಲ್ಲಿ ತನ್ನನ್ನೂ ಮಿಂಚಿ ಬರುವ ಅಳುವನ್ನು ತಡೆದು ನಿಂತ ಆ ತಂದೆಯನ್ನು ನೋಡಿಯೂ—ಹೃದಯದಲ್ಲಿ ಕರುಣೆಯೆಂಬುದೇ ಇಲ್ಲದೆ ಹಾಡಿಕೊಂಡಿರುವನಲ್ಲ...

ಛೀ, ಛೀ ಇವನೊಬ್ಬ ಮನುಷ್ಯನೆ...

ಆದ್ದರಿಂದಲೇ ಎಲ್ಲರೂ ಅವನನ್ನು 'ಒಂದು ತರಹ' ಎಂದು ಹೇಳುವರು.

ಹಳ್ಳ ತೋಡಿ ಆದೊಡನೆ ತನ್ನ ಗುಡಿಸಲಿಗೆ ಓಡುತ್ತಿದ್ದ. ಬಟ್ಟೆಯ ತೊಟ್ಟಿಲಲ್ಲಿ ನಿದ್ರಿಸುತ್ತಿದ್ದ ಇರುಳನನ್ನು ಎತ್ತಿಕೊಂಡು ಮುದ್ದಾಡುತ್ತಿದ್ದ—ಕುಣಿದಾಡುತ್ತಿದ್ದ.

ಆ ಸಂತೋಷಕ್ಕೆ, ಕುತೂಹಲಕ್ಕೆ, ಹಾಡಿಗೆ, ಕುಣಿತಕ್ಕೆ ಇವೆಲ್ಲಕ್ಕೂ ಕಾರಣ ಇರುಳನೇ ಏನು?

ಎರಡು ವರ್ಷಗಳ ನಂತರ...

ಎಷ್ಟೋ ಮಂದಿ ಸತ್ತವರ ಆನಂದ ಮತ್ತು ಹಗಲುಗನಸುಗಳನ್ನೆಲ್ಲಾ ಹುಗಿದಿಡುವ ಆ ಸ್ಮಶಾನದಲ್ಲಿ ಮರಣವೆಂಬ ಮಾಯೆಯನ್ನು ಮರೆತು ಜನನವೆಂಬ ಭ್ರಾಂತಿಯಲ್ಲಿ ಮಾತ್ರ ಲಯವಾಗಿದ್ದ ಆಂಡಿಯ... ಆಂಡಿಯ...

—ಹೇಳಲು ಬೇರೇನಿದೆ ?

ಇರುಳನ್ ಒಂದು ದಿನ ಸತ್ತುಹೋದ.

ಬಾಡಿ ಬೆಂಡಾಗಿ ವರ ಬೇಡಿ ಕಾದಿದ್ದು ತಪಸ್ಸುಮಾಡಿ ಬಹುದಿನಗಳನಂತರ ಅನಿರೀಕ್ಷಿತವಾಗಿ ಇನ್ನು ಯಾವ ಭರವಸೆಯೂ ಇಲ್ಲವೆಂಬ ಕಾಲ. ಬಾರದೆ ಬಂದು ಜನ್ಮವೆತ್ತಿ, ಆಸೆದೋರಿ, ಆಡಿ ನಲಿದಾಡಿ, ಕನಸುಗಳನ್ನು ಕಟ್ಟಲು ಕಾರಣನಾದ ಇರುಳನ್ ಇದ್ದಕ್ಕಿದ್ದಂತೆ ಎರಡು ದಿನಗಳ ಜ್ವರದಿಂದ ಪ್ರವಾಹದಲ್ಲಿ ಬಂದಂತೆ ಹೋಗಿಯೇಬಿಟ್ಟ.

ಆಸೆಗಳನ್ನೂ ಕನಸುಗಳನ್ನೂ ವಿನಾಶಕ್ಕೆ ಮತ್ತು ಭ್ರಾಂತಿಗೆ ಬಲಿಕೊಟ್ಟು ಮುರುಗಾಯಿ ಬಾಯ್ಬಿಡಿದುಕೊಂಡು ಹೊಟ್ಟೆಯ ಮೇಲೆ ಹೊಡೆದುಕೊಳ್ಳುತ್ತಾ ಉರುಳುರುಳಿ ರೋದಿಸಿದಳು.

ಶೋಕ ಪರಂಪರೆಯು ಹೆಪ್ಪುಗಟ್ಟಿ ಕರಡಾದ ಆ ಸ್ಮಶಾನಭೂಮಿಯಲ್ಲಿ ತನ್ನ ಭಾಗದ ದುಃಖದಿಂದ ಬಹುವಾಗಿ ಅತ್ತಳು.

ಬೇವಿನ ಮರದಡಿ ಬರೀ ಬಟ್ಟೆಯ ಖಾಲಿ ತೊಟ್ಟಿಲಿನ ಬಳಿ ಮೊಣಕಾಲುಗಳ ಮಧ್ಯೆ ಮುಖ ಮರೆಸಿಕೊಂಡು ಆಂಡಿ ಕುಳಿತಿದ್ದ.

ನಿರಾಶಾಭರಿತ ದೃಷ್ಟಿ ಎಲ್ಲೋ...ಏನೇನೋ ದೃಶ್ಯಗಳು...ಎಲ್ಲವನ್ನೂ ಕಂಡಂತಹುದೇ...ಇನ್ನು ಕಾಣಲಾಗದುದು...

ಅದೋ ಇರುಳನ್—

ಬೇಲಿಯ ಪಕ್ಕಕ್ಕೆ ತೆವಳಿ ಹೋದಾಗ...ಬಟ್ಟೆಯ ತೊಟ್ಟಿಲಿನಿಂದ ನಿದ್ರೆಯಿಂದೆದ್ದು ತಲೆಯನ್ನು ಮಾತ್ರ ಹೊರಗೆ ಹಾಕಿ ಕೆನ್ನೆಗಳು ಗುಳಿಬೀಳುವಂತೆ ನಗುತ್ತಾ 'ಅಪ್ಪಾ' ಎಂದು ಕರೆದಾಗ...

ಗಿಡಗಳಿಗೆ ನೀರು ಹಾಯಿಸುವಾಗ ಅವನಿಗರಿವಾಗದಂತೆ ಹಿಂದೆ ಬಂದು ಥಟ್ಟನೆ ಹಾಯ್ದು ರೋಮಾಂಚನಗೊಳ್ಳುವಂತೆ ಸಂತೋಷಗೊಳಿಸುತ್ತಿದ್ದುದು...

ಎದುರಿನಲ್ಲಿದ್ದ ತಟ್ಟೆಯ ಕಡೆಗೆ ವೇಗವಾಗಿ ತೆವಳಿ ಬಂದು ತನ್ನ ಕೋಮಲ ಕರಗಳನ್ನು ಇಟ್ಟು ಹಿಸುಕಿ ಬೆರಳುಗಳ ಮಧ್ಯೆ ಸಿಕ್ಕಿದ ಒಂದೆರಡು ಅನ್ನದ ಅಗುಳುಗಳನ್ನು ಬಾಯಲ್ಲಿ ಇಟ್ಟುಕೊಂಡು ಸವಿದು ಲೊಟ್ಟೆಹಾಕಿ ಕೈತಟ್ಟಿ ನಗುತ್ತಿದ್ದುದು...

ಹೃದಯಕ್ಕೆ ಹೃದಯವಾಗಿ ಹಗಲಿರುಳು ಎನ್ನದೆ ದಿನವೆಲ್ಲಾ ನಿದ್ರಿಸಿ...

—ಸುಳ್ಳೆ...? ಕನಸೆ...? ಭ್ರಾಂತಿಯೆ...? ಹುಚ್ಚೆ...? ಮೌಢ್ಯವೆ...?

ಆಂಡಿ ಚಿತ್ತ ಭ್ರಮೆಗೊಂಡವನಂತೆ ಶಿಲೆಯಾಗಿ ಕುಳಿತಿದ್ದ.

ಇರುಳನ್ ತೆವಳಿ ತಿರುಗಾಡಿದ ಸ್ಥಳವೆಲ್ಲಾ, ಅವನು ಮುಟ್ಟಿ ಆಟವಾಡಿದ ವಸ್ತುಗಳೆಲ್ಲಾ, ಅವನು ಮುದ್ದಾಗಿ ಆಡಿದ ಮಾತುಗಳೆಲ್ಲಾ ಆಂಡಿಯ ನೆನಪಿಗೆ ಮತ್ತೆಮತ್ತೆ ಬಂದು ಕಂಪಿಸಿ ಹೋಗುತ್ತಿದ್ದ.

ಅದೋ ಗುಡಿಸಲಿನಲ್ಲಿ ಆ ಮಗುವಿನ ಶವ ಊದಿ ಬಿದ್ದಿದೆ. ಬಾಯಿ ಕಣ್ಣುಗಳಲ್ಲಿ ನೊಣ ಮುತ್ತಿವೆ. ಹಣೆಯಲ್ಲಿ ಕಪ್ಪು ಚಂದನದ ಬೊಟ್ಟು; ಕಪ್ಪೇರಿದ ತುಟಿಗಳ ನಡುವೆ ಎಳೆತನ ಮೀರಿದ ಹಲ್ಲುಗಳ ಸಾಲು ಮಿಂಚುತ್ತಿದ್ದುವು. ಕೈಕಾಲುಗಳನ್ನು ಅಗಲಿಸಿ...

—ದೀರ್ಘ ನಿದ್ರೆಯೋ ?

"ಇಲ್ಲ, ಸತ್ತುಹೋಗಿದ್ದಾನೆ."

ಮುರುಗಾಯಿ ಅವನ ಎದೆಯ ಮೇಲೆ ಅವನ ಕರಗಳನ್ನು ಮಡಿಸಿಟ್ಟಳು. ಬಾಯಿ ಕಣ್ಣುಗಳಲ್ಲಿ ಮುತ್ತಿದ್ದ ನೊಣಗಳನ್ನು ಓಡಿಸಿದಳು. ಶವದ ಮೇಲೆ ಒಂದು ಬಟ್ಟೆಯನ್ನು ತಂದು ಮುಚ್ಚಿದಳು...

ಕಡೆಯಲ್ಲಿ...

ಕರ್ತವ್ಯವೆಂಬುದೊಂದಿದೆಯಲ್ಲವೆ ?

* * *

ಕೆಂಪಾದ ನಯನಗಳಿಂದ ಅಶ್ರುಧಾರೆ ಬರುತ್ತಿರಲು ಟವಲನ್ನು ತಲೆಗೆತ್ತಿ ಸುತ್ತಿಕೊಂಡ ಆಂಡಿ. ಮೂಲೆಯಲ್ಲಿದ್ದ ಗುದ್ದಲಿಯನ್ನು ಭುಜದ ಮೇಲೇರಿಸಿಕೊಂಡ. ನೆನೆಸಿಟ್ಟಿದ್ದ ಅರಸಿನದ ಬಟ್ಟೆಯಲ್ಲಿ ಇರುಳನನ್ನು ಸುತ್ತಿ ಎದೆಗಪ್ಪಿಕೊಂಡು ಹೊರಟ.

"ಅಯ್ಯೋ...ನನ್ನ ರಾಜಾ" ಎಂಬ ಘೋರ ಶಬ್ದವೆದ್ದಿತು—ಮುರುಗಾಯಿ ಅಳುತ್ತಲೇ ನೆಲದ ಮೇಲೆ ಹೊರಳಿದಳು. ಆಂಡಿಯ ಕಾಲುಗಳೆರಡನ್ನೂ ಹಿಡಿದು ತಡೆದಳು.

ಕೈಯಲ್ಲಿ ಒಂದು ಶೋಕ, ಹೃದಯದಲ್ಲೊಂದು ಶೋಕ, ಕಾಲುಗಳನ್ನು ಹಿಡಿದು ಹಿರಿದಾದ ಶೋಕ...

—ಅಯ್ಯೊ, ಅವನೇನು ಮಾಡಿಯಾನು. ನಿಂತವನು ನಿಂತಂತೆ ವೇದನೆಗೆ ಒಳಗಾದ, ಎಲ್ಲಾ ಶೋಕಗಳಿಗೂ ಹಳ್ಳ ತೋಡಿದ ಗುದ್ದಲಿ ಭುಜದ ಮೇಲಿದೆ. ಅದರಿಂದ ಈಗೇನು ಸಾಧ್ಯ?

ಒಂದು ಕೈ ಶವವನ್ನು ಮತ್ತೊಂದು ಕೈ ಗುದ್ದಲಿಯನ್ನೂ ಬಿಗಿಯಾಗಿ ಹಿಡಿದಿತ್ತು...

"ಮುರುಗಾಯಿ...ಅಳಬೇಡ..." ಎಂದು ಅವಳಿಗೆ ಹೇಳುತ್ತಾ ಅವನೇ ಅಳುತ್ತಿದ್ದ.

ಅವಳು ಇನ್ನೂ ಜೋರಾಗಿ ರೋದಿಸಿದಳು.

ಅವಳ ಹಿಡಿತದಿಂದ ಬಿಡಿಸಿಕೊಂಡು ಆಂಡಿ ಮುನ್ನಡೆದ.

—ಅವನಿಗೆ ಇಷ್ಟು ದಿನಗಳಿಂದ ಶವಗಳು ಮಾತ್ರ ಗೊತ್ತಿದ್ದುವು. ಆದರೆ ಆ ಶವಗಳ ಹಿಂದೆ ಇಷ್ಟು ಶೋಕವೆ ?

'ಅಯ್ಯೊ...'

ಅಂದು ಆ ನಂದನವನಕೆ ಅದೇನು ಸಂತೋಷವೋ...? ಮರ ಗಿಡಗಳು ನವ ಪುಷ್ಪಾವಳಿಯನ್ನು ಆ ಸ್ಮಶಾನ ಭೂಮಿಯಲ್ಲಿ ಎಲ್ಲೆಡೆ ಚೆಲ್ಲಿದ್ದುವು.

—ಆಂಡಿ ತನ್ನ ಕಳೆದುಹೋದ ಕನಸನ್ನು ಕೈಗಳಲ್ಲಿ ಎತ್ತಿಕೊಂಡು ನಡೆದ.

'ಆ ಪನ್ನೀರು ಮರದಡಿ ಇರುಳನಿಗೆ ಹಳ್ಳ ತೋಡಬೇಕು. ಆ ಮರವಾದರೆ ಯಾವಾಗಲೂ ಪನ್ನಿ ಸುವಾಸನೆಯ ಪುಷ್ಪರಾಜಿಯನ್ನು ಚೆಲ್ಲುತ್ತದೆ.'

ಮಗನ ಶವವನ್ನು ನೆಲದ ಮೇಲಿಟ್ಟ. ಭುಜದ ಮೇಲಿದ್ದ ಗುದ್ದಲಿಯನ್ನು ಕೈಯಲ್ಲಿ ಹಿಡಿದು ಮರದಂತೆ ನಿಂತ.

ಅವನ ನಯನಗಳು ಶೂನ್ಯಾಂಬರವನ್ನು ನಿರಾಶೆಯಿಂದ ನೋಡಿದುವು. ಕಣ್ಣೀರು ಹರಿಯಿತು. ಸಹಿಸಲಸಾಧ್ಯವಾದ ಶೋಕದಿಂದ ಮೂಗು ಮತ್ತು ತುಟಿಗಳು ಅದುರಿದುವು. ಎದೆ ಭಾರವಾಯಿತು.

ಮನಸ್ಸನ್ನು ಕಲ್ಲು ಮಾಡಿಕೊಂಡು ಗುದ್ದಲಿಯನ್ನೆತ್ತಿದ. ಕರಗಳು ನಡುಗಿದುವು. ಕಾಲುಗಳು ನೆಲದ ಮೇಲೆ ನಿಲ್ಲಲಾರದೆಹೋದುವು.

ಮೇಲಕ್ಕೆತ್ತಿ ಹಿಡಿದಿದ್ದ ಗುದ್ದಲಿಯನ್ನು ಬೀರಿ ಬಿಸಾಡಿ 'ಮಗನೇ' ಎಂದು ಪ್ರಲಾಪಿಸಿ ಶವದ ಮೇಲೊರಗಿದ. ಬಹಳವಾಗಿ ಅತ್ತ, ಅತ್ತು ಬೇಸತ್ತ...

ಬಹಳ ಹೊತ್ತು ತನ್ನ ಪುದ್ದು ಮಗನ, ಇನ್ನುಮೇಲೆ ಕಾಣಲಾಗದ ಮಗನ—ಮುಖವನ್ನು ನೆಟ್ಟ ದೃಷ್ಟಿಯಿಂದ ನೋಡುತ್ತಾ ಕುಳಿತಿದ್ದ.

ಹಣೆಯಲ್ಲಿ ಬೆವರಿನ ಹನಿಗಳು ಸಾಲುಗಟ್ಟಿದುವು.

ಎದೆಯನ್ನು ಒತ್ತಿ ಹಿಡಿದುಕೊಂಡು ಗುದ್ದಲಿಯನ್ನು ಎತ್ತಿಕೊಂಡ. ಕಾಲುಗಳನ್ನು ಅಗಲಿಸಿ ನಿಂತು ಕಣ್ಮುಚ್ಚಿ ಗುದ್ದಲಿಯಿಂದ ಬಲವಾಗಿ ಕೆತ್ತಿದ.

'ನಂದನವನತ್ತಿಲ್ ಒರ್ ಅಂಡಿ...'

ಆ ಹಾಡು...ಅವನು ಹಾಡಲಿಲ್ಲ.

ಊರಿನವರ ಶವಗಳಿಗೆ ಹಳ್ಳ ತೋಡುವಾಗ ಹೃದಯದಲ್ಲಿ ಹೃದಯ ಭಾರವೋ ಶೋಕವೋ ಇಲ್ಲದೆ ಕುಣಿದು ಬರುತ್ತಿದ್ದ ಆ ಹಾಡು...' ಹಾಡಿದವರು ಯಾರು...? '

ಮತ್ತೆ ಗುದ್ದಲಿಯನ್ನೆತ್ತಿ ಭೂಮಿಯನ್ನು ಅಗೆದ.

'ನಂದನವನತ್ತಿಲ್ ಒರ್ ಅಂಡಿ...'

—ಮತ್ತೆ ಅದೇ ಕಂಠ...

'ಯಾರದು...? '

ದುಃಖವನ್ನೆಲ್ಲಾ ನುಂಗಿ ಮತ್ತೆ ಹಳ್ಳ ತೋಡಿದ.

ಮತ್ತೆ ಒಂದು ಕಂಠ :

" ನಂದನವನತ್ತಿಲ್ ಓರ್ ಆಂಡಿ—ಅವನ್
ನಾಲಾರು ಮಾದಮಾಯ್ ಕುಯವನ್ನೈ ತೇಂಡಿ..."

'ಅಯ್ಯೋ ಅರ್ಥವಾಗುತ್ತಿದೆ...'

—ಆಂಡಿ ಗುದ್ದಲಿಯನ್ನು ಬೀರಿ ಬಿಸಾಡಿ ಹಿಂತಿರುಗಿ ನೋಡಿದ.

ಕಂಬವನ್ನೊಡೆದುಕೊಂಡು ನರಸಿಂಹಾವತಾರದಂತೆ, ಭೂಮಿಯಲ್ಲಿನ ಹಳ್ಳದ ಹಂಟೆಗಳನ್ನು ಭೇದಿಸಿಕೊಂಡು ಸುಂದರ ಮಗುವೊಂದು ಹೊರಗೆ ಬಂತು.

ಕೈಗಳನ್ನು ತಟ್ಟಿ ತಾಳಹಾಕುತ್ತಾ ಆ ಶಿಶು ಹಾಡಿತು

" ನಂದನವನತ್ತಿಲ್ ಓರ್ ಆಂಡಿ—ಅವನ್
ನಾಲಾರು ಮಾದಮಾಯ್ ಕುಯವನ್ನೈ ತೇಂಡಿ
ಕೊಂಡುವಂದಾನ್-ಒರು ತೋಂಡಿ—ಅದೈ
ಕೊತ್ತಾಡಿ ಕೊತ್ತಾಡಿ ಪೋಟ್ಟುಡೈತ್ತಾಂಡಿ..."

ಕಂಠಗಳೊಂದಾಗಿ ಬಲವಾಗಿ ಏಕವಾಗಿ ಸುಗಮಗೊಂಡು ಘೋಷವಾಯಿತು.

ಆ ಸ್ಮಶಾನಭೂಮಿಯಲ್ಲಿ ಎಷ್ಟೋ ಕಾಲದ ಹಿಂದೆ ಹೂಳಲ್ಪಟ್ಟ ಮೊದಲ ಮಗುವಿನಿಂದ ಹಿಡಿದು ನೆನ್ನೆ ಸತ್ತು ಹೂಳಲ್ಪಟ್ಟ ಕಡೆಯ ಮಗುವಿನವರೆಗೆ ಎಲ್ಲವೂ ಜೀವಂತ ಸ್ವರೂಪವೆತ್ತಿ ಒಂದಾಗಿ ಸಂಗಮಗೊಂಡು ಬಿಕ್ಕಿ ವಿರಸಿಸಿದ ಧ್ವನಿಯಿಂದ—ಶಿಶು ಧ್ವನಿಯಲ್ಲಿ—ಹಾಡಿ ಕೈ ತಾಳಹಾಕಿ ಅವನನ್ನು ಬಳಸಿ ನಿಂತು ಆಡಲಾರಂಭಿಸಿದುವು.

ಆಗಸದ ಬೆಳಕೆಲ್ಲಾ ದಿಕ್ಕುಪಾಲಾಗಿ ಚದುರಿ ಓಡಿತು.

ಆಂಡಿ ತನ್ನನ್ನು ಮರೆತು ನಕ್ಕ.

ಅದೋ, ಅವನ ಇರುಳನೂ ಆ ಮಕ್ಕಳ ಮಧ್ಯೆ ನಿಂತು ನರ್ತಿಸುತ್ತಿದ್ದ, ತಾಳ ಹಾಕುತ್ತಿದ್ದ.

ಹಾಡುತ್ತಿದ್ದ.

ಏನು ಹಾಡು ಗೊತ್ತೆ...?

'ನಂದನವನತ್ತಿಲ್ ಓರ್ ಆಂಡಿ...'

ಗುಂಪಾಗಿ ತಾಕಿಕೊಂಡು ಓಡುವ ಮಕ್ಕಳ ಮಹಾಸಾಗರದಲ್ಲಿ ತನ್ನ ಇರುಳನನ್ನು ಬಾಚಿ ಆಲಂಗಿಸಿಕೊಳ್ಳಲು ಅವನು ಓಡಿದ.

ಇರುಳನ್ ಕಾಣಿಸಲಿಲ್ಲ...ಹುಡುಕಿದ, ಸಿಗಲಿಲ್ಲ...ಇಲ್ಲವೇ ಇಲ್ಲ. ಇರುಳನ್ ಕಾಣಿಸಲೇ ಇಲ್ಲ...

ಆ ಮಕ್ಕಳು ಎಲ್ಲರೂ ಒಂದೇ ತೆರನಾಗಿದ್ದರು.

ನನ್ನದು ಮತ್ತೊಬ್ಬರದು ಅವನು, ಇವನು ಎಂದು ವ್ಯತ್ಯಾಸವೇ ಕಾಣಲಾಗದ ಆ ಸಾಗರದಲ್ಲಿ ಆ ಇರುಳನನ್ನು ಮಾತ್ರ ಗುರುತುಹಚ್ಚುವುದಾದರೂ ಹೇಗೆ...

ಆಂಡಿ ತಪಿಸಿದ.

ಆಹಾ, ಅದೆಂತಹ ವೇದನೆ...ಅದೆಂತಹ ವೇದನೆ...

* * *

ಪನ್ನೀರು ಮರದಡಿಯಲ್ಲಿ ಮಗನ ಶವದ ಬಳಿ ಮುಖಮುಚ್ಚಿಕೊಂಡು ಬಿದ್ದಿದ್ದ ಆಂಡಿಯನ್ನು ಕಂಡು ಗಾಬರಿಗೊಂಡು ಓಡಿಬಂದಳು ಮುರುಗಾಯಿ, ಅವನನ್ನು ಹೊರಳಿಸಿ ಎತ್ತಿ ಮಡಿಲಲ್ಲಿ ಮಲಗಿಸಿಕೊಂಡು ಅತ್ತಳು, ಅವನ ರೆಪ್ಪೆಗಳು ಅಲುಗಾಡಿದುವು.

—ದೇವರೇ ಅವನಿನ್ನೂ ಜೀವಂತವಾಗಿದ್ದ; ಸತ್ತಿರಲಿಲ್ಲ.

ಅವನು ಇನ್ನೂ ಆ ನಂದನವನದಲ್ಲಿ ವಾಸಿಸುತ್ತಿದ್ದಾನೆ. ಆದರೆ ಹಿಂದಿನಂತೆ ಈಗ ಹಾಡುವುದಿಲ್ಲ.

ಸ್ಮಶಾನಭೂಮಿಗೆ ಬರುವ ಶವಗಳನ್ನು ನೋಡಿದಾಗಲೆಲ್ಲಾ ಪರಿತಪಿಸಿ ಅಳುತ್ತಾನೆ. ಊರಿನವರ ಶೋಕಕ್ಕೆಲ್ಲಾ ಅವನು ಬಲಿ. ಆದರೆ ಈಗಲೂ ಅವನನ್ನು 'ಒಂದು ತರಹೆ' ಎಂದೇ ಹೇಳುವರು.

# 3. ಅಂತರಂಗ ಪುನೀತ

“ಒಂದು ನಿಮಿಷ ಇರಿ; ಕರೆಯುತ್ತೇನೆ... ನೀವು ಯಾರು ಮಾತನಾಡುತ್ತಿರುವುದು?” ಎಂದು ಕೇಳಿದಾಗ ಹಲ್ಲು ಕಚ್ಚಿ ಉತ್ತರ ಕೊಟ್ಟ: “ನಾನು—ಅವರ ಮಗ ವೇಣು!”

ಸ್ವಲ್ಪ ಸಮಯದ ನಂತರ ಅವನ ತಂದೆಯ ಧ್ವನಿ ಫೋನಿನಲ್ಲಿ ಕೇಳಿಸಿತು: “ಹಲೋ, ನಾನು, ಸುಂದರಂ...”

—ಅದುವರೆಗೆ ಇದ್ದ ಧೈರ್ಯ, ಕಾತರ, ಉದ್ವೇಗ ಎಲ್ಲಾ ಮೇಲೆದ್ದು ವೇಣುವಿನ ತುಟಿಗಳು ಅದುರಿದುವು. ಅವನ ಕಂಠ ಕುಗ್ಗಿತು; ಆದರೂ ತನ್ನನ್ನು ತಾನು ಸಂಭಾಳಿಸಿ ಕೊಂಡು ಮಾತನಾಡಿದ: “ನಾನು ವೇಣು ಮಾತನಾಡುವುದು...ನಾನು ನಿಮ್ಮೊಂದಿಗೆ ಸ್ವಲ ಮಾತನಾಡಬೇಕಾಗಿದೆ....ಉಂ...ಪ್ರತ್ಯೇಕ ಮಾತನಾಡಬೇಕಾಗಿದೆ.”

“ಸರಿ...ಇನ್ನು ಸ್ವಲ್ಪ ಹೊತ್ತಿಗೆ ಮನೆಗೇ ಬಂದುಬಿಡುತ್ತೇನಲ್ಲಾ.”

“ಇಲ್ಲ...ಆ ಬಗ್ಗೆ ಮನೆಯಲ್ಲಿ ಮಾತನಾಡಲು ನನಗೆ ಇಚ್ಛೆಯಿಲ್ಲ...ನೀವು ಇರುವು ದಾದರೆ ಈಗಲೇ ಹತ್ತು ನಿಮಿಷದಲ್ಲಿ ನಾನು ಅಲ್ಲಿಗೆ ಬರುತ್ತೇನೆ...”

“ಓಯಸ್! ಸರಿ—ಬಾ...”

“ಥ್ಯಾಂಕ್ಸ್...”

—ರಿಸೀವರನ್ನು ಕೆಳಗಿಟ್ಟು ಹಣೆಯಲ್ಲಿ ಮೂಡಿದ್ದ ಬೆವರಿನ ಹನಿಗಳನ್ನು ಒರೆಸಿಕೊಂಡ ವೇಣು.

ಅವನ ಹೃದಯ ಇನ್ನೂ ಜೋರಾಗಿ ಬಡಿದುಕೊಳ್ಳುತ್ತಲೇ ಇತ್ತು. ಅವನು ಏನೇನೋ ಮಾತನಾಡಬೇಕೆಂದು, ಒಂದು ಮಹತ್ವದ ಕಾರ್ಯೋನ್ಮುಖವಾಗುವ ಧೋರಣೆಯಲ್ಲಿ ಅಂಗೈಯಲ್ಲಿ ಕುಟ್ಟುತ್ತಾ ಗುಣಾಕಾರ ಹಾಕಿದ.

“ಉಂ... ಇದು ನನ್ನ ಕರ್ತವ್ಯ! ಈ ಕುಟುಂಬ ಅಳಿದು ಹೋಗದಂತೆ ರಕ್ಷಿಸುವುದು ನನ್ನ ಕರ್ತವ್ಯ! ಒಬ್ಬ ಹುಡುಗ—ತನ್ನ ಮಗನೇ—ತನ್ನನ್ನು ಖಂಡಿಸುವ ರೀತಿ ಕೇಡು ಕೆಟ್ಟುದನ್ನು ಅವರು ಅರ್ಥಮಾಡಿಕೊಳ್ಳಬೇಡವೆ? ಅಪಮಾನಕರ ವಿಷಯ...ನಾನು ಆತುರಪಡದೆ ನ್ಯಾಯವಾಗಿ ಮಾತನಾಡಿ ಅವರ ಕೇಡು, ಕೆಟ್ಟ ರಹಸ್ಯವನ್ನು ಅವರಿಗೇ ಮೊದಲು ತಿಳಿಯಹೇಳಬೇಕು... ‘ಅದೆಲ್ಲಾ ಏನೂ ಇಲ್ಲ ಹಾಗೆ ಹೀಗೆ’ ಅಂತ ಅವರು ಮರೆಮಾಚುವರು...ಉಹುಂ ಅವರ ಟೇಬಲ್ ಡ್ರಾಯರ್‌ನಲ್ಲಿದ್ದ ಕಾಗದವನ್ನು... ಕರ್ಮಠ ಪ್ರಣಯ ಪತ್ರ—ಅದನ್ನು ಜ್ಞಾಪಕವಾಗಿ ಎತ್ತಿಟ್ಟುಕೊಳ್ಳುತ್ತೇನೆ...’ ನನ್ನ ಟೇಬಲ್ ಡ್ರಾಯರ್‌ಗೆ ಕಳ್ಳ ಬೀಗದ ಕೈ ಉಪಯೋಗಿಸಿದೆಯಾ?’ ಎಂದು ಅವರು

ಕುಪಿತರಾಗಬಹುದು. ಇವರ ಕಳ್ಳ ಪ್ರಣಯವನ್ನು ಕಂಡುಹಿಡಿಯುವುದಕ್ಕೆ ನಾನು ಮಾಡಿದ ಕಳ್ಳತನದಲ್ಲಿ ಯಾವ ತಪ್ಪೂ ಇಲ್ಲ...ಮೊನ್ನೆ ರಾತ್ರಿ ಕೂಡ ಅವಳೊಂದಿಗೆ ಸೆಕೆಂಡ್ ಷೋ ಸಿನಿಮಾಕ್ಕೆ ಹೋದುದನ್ನು ನೋಡಿದಮೇಲೆ ತಾನೆ ಈ ಸಂಬಂಧದ ಪೂರ್ಣ ಸತ್ಯವನ್ನು ತಿಳಿದುಕೊಳ್ಳುವುದಕ್ಕೆ ನಾನು ಅವರ ಕೋಣೆಯನ್ನು ಶೋಧಿಸಿದೆ..."

—ವೇಣು ಅವಸರ ಅವಸರವಾಗಿ ಬಟ್ಟೆ ಬದಲಾಯಿಸಿ ಹೊರಗೆ ಹೊರಡುವ ಸಮಯದಲ್ಲಿ, ಲೇಡೀಸ್ ಕ್ಲಬ್‌ಗೆ ಹೊರಟಿದ್ದ ರಮಣಿಯಮ್ಮಾಳ್ ಅವನಿಗೆ ಎದುರಾದಳು.

ಕೆಲವು ದಿನಗಳಿಂದ ಅವನ ವರ್ತನೆ ಮತ್ತು ಮಾತು ಬದಲಾಗಿದ್ದುದು ಅವನ ತಾಯಿಗೆ ಅರಿವಾಗಿತ್ತು.

ಈಗ ಅವನು ಥಟ್ಟನೆ ಎದುರು ಬಂದಾಗ ಅವನಿದ್ದ ರೀತಿಯನ್ನು ಕಂಡು ಕಳವಳಗೊಂಡಳು.

'ಅವನು ಸರಿಯಾಗಿ ಊಟ ಮಾಡದೆ ನಿದ್ರೆಯಿಲ್ಲದೆ ಹೀಗಾಗಿರುವನೋ ?' ಎಂದು ಅವನ ಬಾಡಿದ ಮುಖ ಕಂಡು ಅವಳು ಸಂದೇಹಗೊಂಡಳು. ಅವನು ಕೃಶಗೊಂಡು ಕಪ್ಪೇರಿಹೋಗಿದ್ದ. ಮುಖದಲ್ಲಿ ಗಡ್ಡ ಮೀಸೆ ಬೆಳೆದಿತ್ತು...ಅವನು ಯಾವುದೋ ವಿಚಾರ ಕುರಿತು ಬಹಳ ಮನೋವ್ಯಾಕುಲಗೊಂಡಿರುವುದನ್ನು ಅವನ ಬೇಸತ್ತ ಕಣ್ಣುಗಳಿಂದ ಅವುಗಳ ಸುತ್ತ ಆವರಿಸಿದ್ದ ಕಪ್ಪು ವೃತ್ತಗಳಿಂದ ಅವಳು ತಿಳಿದಳು.

'ಅವನು ಪ್ರಾಪ್ತ ವಯಸ್ಕನಾದ ಗಂಡು ಮಗ. ಏನಾದರೂ ಅಂತರಂಗದ ಸಮಸ್ಯೆಗಳಿರಬಹುದು. ಅದರಲ್ಲಿ ತಾನು ಪ್ರವೇಶಿಸುವುದು ಸರಿಯಲ್ಲ ಎಂದುಕೊಂಡೇ ಅವಳು ಅವನ ಸಮೀಪಕ್ಕೆ ಬಂದಳು.

"ಏನು ವೇಣು...ಎಲ್ಲಿಗೆ ಹೊರಟೆ...?" ಎಂದು ಆದರದಿಂದ ಅವನ ತೋಳು ಹಿಡಿದು ಕೇಳಿದರು. ಅವನ ದೇಹ ಸಂಕುಚಿತವಾಯಿತು.

"ಸ್ವಲ್ಪ ಕೆಲಸವಿದೆ" ಎಂದು ಗಂಭೀರವಾಗಿ ಉತ್ತರ ಕೊಟ್ಟ.

"ವಾಟ್ ಈಸ್ ರಾಂಗ್ ವಿತ್ ಯು? ಸರಿ... ಏನೇ ಆಗಿರಲಿ, ನಾನು ನಿನಗೆ ಸಹಾಯ ಮಾಡಬಲ್ಲೆನಾದರೆ ಹೇಳು...? ಎಂದು ಕೇಳಿದರು.

"ಥ್ಯಾಂಕ್ಸ್"—ಎಂದು ಅವನು ಮುಂದೆ ಹೋಗಲಾಗಿ ತಾಯಿ ಅವನನ್ನು ಹಿಡಿದು ನಿಲ್ಲಿಸಿದಳು.

"ಹೋಗು...ಹೋಗಿ—ಅಡುಗೆಯ ಅಜ್ಜಿ ಏನೋ ವಿಶೇಷ ತಿಂಡಿ ಮಾಡಿದ್ದಾಳೆ... ತಿಂದು ಹೋಗು" ಎಂದು ಉಪಚಾರ ಹೇಳಿ ತನಗೂ ವೇಳೆಯಾಯಿತೆಂದು ಕೈಗಡಿಯಾರ ನೋಡಿ ಅವರು ಹೊರಗೆ ಸಾಗಿದರು.

ವೇಣು ಒಂದು ಕ್ಷಣ ತಲೆಬಾಗಿ ಯೋಚಿಸುತ್ತಾ ನಿಂತ.

' ಈ ಪೆದ್ದು ತಾಯಿಯನ್ನು ಈ ತಂದೆ ಹೇಗೆ ವಂಚಿಸಿ ದ್ರೋಹ ಬಗೆಯುತ್ತಿದ್ದಾರೆ ' ಎನಿಸಿತು ಅವನಿಗೆ.

ಅದರ ನಂತರ ಈ ತಾಯಿ ಈ ವಯಸ್ಸಿನಲ್ಲೂ ಮಾಡಿಕೊಳ್ಳುವ ಅಲಂಕಾರ. ಪೌಡರು ಹಚ್ಚಿಕೊಳ್ಳುವುದು. ಲಿಪ್‌ಸ್ಟಿಕ್, ಸ್ಲೀವೆಲ್‌ಸ್ ಬ್ಲೌಸ್, ಕೀರಲು ಧ್ವನಿಯಲ್ಲಿ ಮಾತ ನಾಡುವ ಇಂಗ್ಲಿಷ್ ಭಾಷೆ ಇವೆಲ್ಲಾ ನೆನೆದು, ಹೊಟ್ಟೆಯನ್ನು ಬೇಧಿಸಿಕೊಂಡು ಉದ್ವೇಗ ಮತ್ತು ಜಿಗುಪ್ಸೆ ಉಕ್ಕಿ ಬಂದಿತು.

ಹಾಲ್‌ನಲ್ಲಿ ಆಗತಾನೆ ಕಾನ್ವೆಂಟಿನಿಂದ ಹಿಂತಿರುಗಿದ್ದ ಅವನ ಇಬ್ಬರು ಸಹೋದರರೂ, ಆರು ವರ್ಷ ವಯಸ್ಸಿನ ತಂಗಿಯೂ ಸೋಫಾದಲ್ಲಿ ಕುಳಿತು ಷೂ—ಸಾಕ್ಸ್ ತೆಗೆಯು ತ್ತಿದ್ದರು. ಅವರನ್ನು ನೋಡುವಾಗ ವೇಣುವಿನ ಮನಸ್ಸಿನಲ್ಲಿ ದುಃಖ ಮತ್ತು ಪರಿತಾಪ ಉಕ್ಕಿತು.

'ಈ ಬೇಜವಾಬ್ದಾರಿಯುತ ತಾಯಿಯೂ ಕೇಡುಗೆಟ್ಟ ತಂದೆಯೂ ಈ ಮಕ್ಕಳ ಭವಿಷ್ಯವನ್ನು ನಾಶ ಮಾಡುತ್ತಿದ್ದಾರೆ ' ಎಂದು ನೆನೆಸಿಕೊಂಡಾಗ...ಇದಕ್ಕೆ ತಾನೇನು ಮಾಡಬೇಕು ಎಂದು ಕಳವಳಗೊಂಡ.

'ಇದಕ್ಕೆ ಏನಾದರೂ ಮಾಡಲೇಬೇಕು ಅದು ನನ್ನ ಕರ್ತವ್ಯ...ನಾನೇನು ಇನ್ನೂ ಚಿಕ್ಕ ಹುಡುಗನೇ ? ನನಗೆ ಇಪ್ಪತ್ತೊಂದು ವರ್ಷ ವಯಸ್ಸು...ಲೀಗಲೀ ಐ ಅಮ್ ಅನ್ ಅಡಲ್ಟ್.'

ಥಟ್ಟನೆ ಅವನಿಗೆ ತನ್ನನ್ನು ಸಾಕಿ ಪೋಷಿಸಿದ ತಾತ–ಅಜ್ಜಿ ನೆನಪಿಗೆ ಬಂದರು.

' ಒಳ್ಳೆಯದಾಯಿತು. ಈ ಕೇಡುಕೆಟ್ಟ ವಾತಾವರಣದಲ್ಲಿ ನಾನು ಬೆಳೆಯಲಿಲ್ಲವಲ್ಲ ಸದ್ಯ...'

## 2

ವೇಣುವಿನ ತಂದೆ ಸುಂದರಂ, ತಾಯಿ ರಮಣಿ ಇಪ್ಪತ್ತೈದು ವರ್ಷಗಳ ಹಿಂದೆ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಪರಸ್ಪರ ಪ್ರೀತಿಸಿ ವಿವಾಹವಾದವರು. ಇಬ್ಬರು ಪ್ರತ್ಯೇಕ ಜಾತಿಯವರು ಎಂಬ ಕಾರಣದಿಂದ ಹೆತ್ತವರ ಇಷ್ಟ ವಿರುದ್ಧ, ಸುಂದರಂ ಅವಳ ಕೈ ಹಿಡಿದರು.

ರಮಣಿಯಮ್ಮಾಳ್ ಚಿಕ್ಕ ವಯಸ್ಸಿನಲ್ಲಿ ಕಾನ್ವೆಂಟಿನಲ್ಲಿ ಓದಿ ಪಾಶ್ಚಿಮಾತ್ಯ ಪದ್ಧತಿ ಯಲ್ಲಿ ಬೆಳೆದವರು. ಆ ಸಂಸ್ಕೃತಿಯಲ್ಲೇ ಅವಳ ಕುಟುಂಬ ಓಲಾಡುತ್ತಿತ್ತು. ಆ ಕಾಲದಲ್ಲಿ ಸುಂದರಂ ಅವರಲ್ಲಿ ತೋರಿದ ಪ್ರೀತಿಗೆ ಅದೇ ಕಾರಣವೂ ಆಗಿದ್ದಿರಬಹುದು.

ಆ ಪ್ರೀತಿಯ ಕಾರಣದಿಂದ ಹೆತ್ತವರಿಗೆ ವಿರೋಧಿಯಾಗಿ ಅಂತರ್ಜಾತೀ ವಿವಾಹವಾದರು. ನಂತರ ಸುಂದರಂ ಎರಡು ವರ್ಷ ಕಾಲ ಯಾವ ಸಂಪರ್ಕವನ್ನೂ ಹೊಂದಿರಲಿಲ್ಲ. ಎರಡು ವರ್ಷಗಳ ನಂತರ ವೇಣು ಹುಟ್ಟಿದ. ಪುತ್ರ ಸಂಬಂಧವನ್ನು ತೊರೆದಿದ್ದ ಸುಂದರಂ ತಂದೆ ಗಣಪತಿ ಪಿಳ್ಳೈ, ಅವರ ಪತ್ನಿ ವಿಶಾಲಂ ಮೊಮ್ಮಗನನ್ನು ನೋಡಲು ಗ್ರಾಮದಿಂದ ರೈಲು ಹತ್ತಿ ಪಟ್ಟಣಕ್ಕೆ ಧಾವಿಸಿದರು. ಕ್ರಮೇಣ ಹಗೆತನ ನೀಗಿ ಸುಂದರಂ ಮತ್ತು ಅವನ ಮಾತಾಪಿತೃಗಳ ಮಧ್ಯೆ ಸಂಪರ್ಕ ತಂದವನು ವೇಣುವೇ.

ವೇಣುವಿಗೆ ಆರು ವರ್ಷ ವಯಸ್ಸಾದಾಗ ಗಣಪತಿಪಿಳ್ಳೈ, ಮೊಮ್ಮಗನನ್ನು ತಾವು ಕರೆದುಕೊಂಡು ಹೋಗುವುದಾಗಿ ಹೇಳಿದರು: 'ಯಾರೊ ಒಬ್ಬಳಿಗೆ, ಯಾವುದೋ ಒಂದು ನಾಗರೀತನಕ್ಕೆ ತಾವು ಆಚಾರದಿಂದ ಬೆಳೆಸಿದ ತಮ್ಮ ಮಗನನ್ನು ಬಲಿಕೊಟ್ಟೆವಲ್ಲ' ಎಂಬ ನಿರಂತರ ಚಿಂತೆಗೆ ಒಳಗಾದ ಗಣಪತಿಪಿಳ್ಳೈ ಅದಕ್ಕೆ ಸಮಾಧಾನವೆಂಬಂತೆ ಮೊಮ್ಮಗನನ್ನು ಸ್ವೀಕರಿಸಿದರು.

ವೇಣು ತಾತನ ಮನೆಯಲ್ಲೇ ಓದಿಕೊಂಡು ದೊಡ್ಡವನಾದ. ಹೆತ್ತವರ ಮನೆಯೆಂಬುದು ಎಂದಾದರೂ ರಜೆಯಲ್ಲಿ ತಂಗಿ ಹೋಗುವ ಬಂಧುಗಳ ಮನೆಯಂತಾಯಿತು.

ಸುಂದರಂ ತಂದೆ ಗಣಪತಿಪಿಳ್ಳೈ ವೀರಶೈವರು. ತಮಿಳು ವಿದ್ವಾಂಸರು. ಶಿವಭಕ್ತರು. ಅವರ ಪತ್ನಿ ವಿಶಾಲಂ ಕಳೆದ ನೂರು ವರ್ಷಗಳ ತಮಿಳು ಮಹಿಳೆಯರ ಕಡೆಯ ಪ್ರತಿನಿಧಿ. ಪತಿಯ ಮುಂದೆ ಕುಳಿತು ಮಾತನಾಡುವುದು ಕೂಡ ಇಲ್ಲ.

ವೇಣು ಎಂದಾದರೂ ರಜೆಯಲ್ಲಿ ಮಾತಾಪಿತೃಗಳ ಮನೆಗೆ ಬರುವಾಗ ಅವರ ಜೀವನ ರೀತಿ ನೀತಿ, ನಡತೆ, ಉಡುಗೆ ಎಲ್ಲಾ ಅನ್ಯ ರೀತಿ ಇರುವುದನ್ನು ಕಂಡು ಅವರೇ ತನಗೆ ಅನ್ಯರೆಂಬಂತಾಯಿತು. ಚಿಕ್ಕ ವಯಸ್ಸಿನ ಆ ಅನುಭವವೆಲ್ಲಾ ತಾತನ ಮನೆಗೆ ಹೋಗಿ ಹಾಸ್ಯದಿಂದ ಅವರೊಂದಿಗೆ ನಗುವುದಕ್ಕಾಯಿತು. ನಂತರ ದೊಡ್ಡವನಾದಂತೆಲ್ಲಾ ಅಜ್ಜ ಮತ್ತು ಅಜ್ಜಿಯನ್ನು ತಂದೆ-ತಾಯಿಗಳೊಂದಿಗೆ ಹೋಲಿಸಿ ನೋಡತೊಡಗಿದ. ಅವನ ಮನಸ್ಸಿನಲ್ಲಿ ಅಜ್ಜ-ಅಜ್ಜಿ ಮಾದರಿ ದಂಪತಿಗಳಾಗಿಯೂ ನಮ್ಮ ಸಂಸ್ಕೃತಿಯ ಆದರ್ಶವಾಗಿಯೂ ಉಚ್ಚ ಸ್ಥಾನದಲ್ಲಿದ್ದವರು.

ಎಷ್ಟೇ ಪ್ರೇಮವಿದ್ದರೂ ಅವನಿಗೆ ತನ್ನ ಮಾತಾಪಿತೃಗಳ ಬಗ್ಗೆ ಉನ್ನತವಾದ ಗೌರವ ಉಂಟಾಗಲಿಲ್ಲ.

ವೇಣು ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿ ಪಕ್ಕದ ಟೌನಿನ ಕಾಲೇಜಿಗೆ ಸೇರಿದ. ಅವನ ವಿದ್ಯಾಭ್ಯಾಸ ಎಷ್ಟೇ ನವೀನವಾದುದಾಗಿದ್ದರೂ ಜೀವನ ರೀತಿ ಮಾತ್ರ ಅದಕ್ಕೆ ಅಡಿಯಾಳಾಗಲಿಲ್ಲ.

ಈಗ ಕಾಲೇಜು ವಿದ್ಯಾಭ್ಯಾಸ ಮುಗಿದು ಅವನು ಮದರಾಸಿಗೆ ಬಂದು ಕೆಲವು ತಿಂಗಳುಗಳಾಗಿದ್ದುವು...

ತಾತ-ಅಜ್ಜಿಯನ್ನು ತೊರೆದು ಬರಲಾಗಲಿಲ್ಲ.

'ನಾನೇನು ನೌಕರಿ ಹುಡುಕಬೇಕಾಗಿಲ್ಲ... ವಿದ್ಯಾವಂತರಾದವರೆಲ್ಲಾ ನಗರಗಳಿಗೆ ತೆರಳುವುದರಿಂದಲೇ ನಮ್ಮ ದೇಶ ಹೀಗಾಗಿದೆ. ನಾನು ಇಲ್ಲಿಯೇ ಇದ್ದು ವ್ಯವಸಾಯ ವನ್ನು ನೋಡಿಕೊಳ್ಳುತ್ತೇನೆ ಎಂದು ಅವನು ತಾತನೊಂದಿಗೆ ಎಷ್ಟೋ ಹೇಳಿ ನೋಡಿದ! ಅವನ ಯೋಜನೆ ಅಜ್ಜಿಗೆ ಹಿಡಿಸಿತ್ತು.

ಆದರೆ, ಬಹು ವೇಳೆ ಕಣ್ಮುಚ್ಚಿ ಈಜಿಛೇರಿನಲ್ಲಿ ಒರಗಿದ್ದ ತಾತ, ಅಜ್ಜಿಗೆ ಈ ರೀತಿ ಉತ್ತರ ಕೊಟ್ಟರು: " ಏನು, ನೀನೂ ಅವನೊಡನೆ ಸೇರಿ ಮಾತನಾಡುವೆ? ನಮ್ಮ ಮಗನನ್ನು ಬಿಟ್ಟಗಲಿದಾಗ ನಿನ್ನ ಮನಸ್ಸು ಕೇಳಿತೆ? ಹಾಗೆಯೇ ಅಲ್ಲವೆ ಅವನನ್ನು ಹೆತ್ತವಳಿಗೆ. ವಿದ್ಯಾಭ್ಯಾಸ ಎಂಬ ಕಾರಣದಿಂದ ಇಷ್ಟು ವರ್ಷಗಳ ಕಾಲ ಇದ್ದುದಾಯಿತು. ಈಗ ಅವನು ಹೆತ್ತವರಿಗೆ ಮಗನಾಗಿ ಅಲ್ಲಿ ಹೋಗಿ ಇರುವುದೇ ನ್ಯಾಯ."

" ನಾನು ಬರಲಿಲ್ಲ ಅಂತ ಅಲ್ಲಿ ಯಾರೂ ಅಳುತ್ತಿಲ್ಲ " ಎಂದು ಬೇಸರದಿಂದ ನುಡಿದ ವೇಣು.

" ವೇಣು ನೀನು ನಮ್ಮೊಂದಿಗೆ ಇರುವುದು ನಿನಗಿಂತ ನಮಗೆ ಹೆಚ್ಚಿನ ಸಂತೋಷ ಅಂತ ಹೇಳಬೇಕೇನು? ಈಗ ಕೆಲವು ದಿನ ನೀನು ಅಲ್ಲಿ ಹೋಗಿ ಇರು. ಆಮೇಲೆ ಕ್ರಮೇಣ ನೋಡೋಣವಂತೆ...ಇಷ್ಟು ಹೇಳುತ್ತಿದ್ದೇನಲ್ಲ...ನೀನು ಆ ಕಡೆ ರೈಲು ಹತ್ತಿ ಹೋದ ಮೇಲೆ ನಿನ್ನ ಅಜ್ಜಿಯೂ ನಾನೂ ಅದು ಹೇಗೆ ದಿನ ಕಳೆಯುತ್ತೇವೋ ಏನೋ...? ಅದಕ್ಕೇನಂತೆ, ನೀನು ರಜೆಯಲ್ಲಿ ಹೋಗುವೆಯಲ್ಲಾ ಹಾಗೆ ಸ್ವಲ್ಪ ದಿನ ಹೋಗಿರು... ಏನು ನಾನು ಹೇಳುವುದು? " ಎಂದು ಎಷ್ಟೋ ಒಪ್ಪಿಸಿದ ಮೇಲೆ ಅವನು ಮದರಾಸಿಗೆ ಬರಲು ಸಮ್ಮತಿಯಿತ್ತ.

ಹಿಂದೆ ಎಲ್ಲಾ ರಜಾದಿನಗಳಲ್ಲಿ ಒಂದು ಎರಡು ತಿಂಗಳು ತನ್ನ ಮಾತಾಪಿತೃಗಳೊಂದಿಗೆ ತಂಗುತ್ತಿದ್ದಾಗ ಉಂಟಾಗದ ಬೇಜಾರು ಈಗ ಎರಡೇ ವಾರಗಳಲ್ಲಿ ತಲೆದೋರಿತು. ಅವನಿಗೆ ಏನೂ ಹಿಡಿಸಲಿಲ್ಲ.

ತನ್ನ ಮಾತಾಪಿತೃಗಳು ಡೈನಿಂಗ್ ಟೇಬಲ್ ಮೇಲೆ ಎದಿರುಬದಿರಾಗಿ ಕುಳಿತು ಊಟ ಮಾಡುವುದು, ಪ್ರಾತಃಕಾಲ ಎಂಟು ಗಂಟೆಯವರೆಗೆ ಆಕೆಯ ನಿದ್ರೆ, ತಂದೆ ಕಳಕಳಿಯಿಂದ ಅವಳ ಸೇವೆ ಮಾಡುವುದು ಅವನಿಗೆ ಸಹಿಸಲಿಲ್ಲ.

ಅವನ ಮನಃಪಟಲದ ಮೇಲೆ, ಅರವತ್ತು ವರ್ಷ ವಯಸ್ಸಾದರೂ ಪ್ರಾತಃಕಾಲದಲ್ಲಿ ಬೇಗನೆ ಎದ್ದು ಸ್ನಾನಗೈದು ಅರಿಶಿನ ಕುಂಕುಮ ಭೂಷಿತೆಯಾಗಿ ಕಾಣುವ ಅಜ್ಜಿಯ ಚಿತ್ರ ಪದೇ ಪದೇ ಮೂಡುತ್ತಿತ್ತು. ಅವಳು ತಾತನಿಗೆ, ಈ ವಯಸ್ಸಿನಲ್ಲೂ ಸೇವೆ ಸಲ್ಲಿ ಸುವ ಮಹತ್ವವನ್ನು ನೆನಸಿಕೊಂಡು ಒಂದೊಂದು ದೃಶ್ಯವನ್ನು ಕಲ್ಪನೆಯಲ್ಲಿ ಕಂಡು ಇವರ ನಡೆನುಡಿಗಳೊಂದಿಗೆ ಹೋಲಿಸಿ ನೋಡಿದ.

'ಈ ತಂದೆ ಅಸಲಿ ಸ್ತ್ರೀದಾಸನೇ ಸರಿ' ಎನಿಸಿತವನಿಗೆ. ಈ ತಾಯಿ...ಸಿನಿಮಾಗೆ ಹೋಗುವುದು ಲೇಡೀಸ್ ಕ್ಲಬ್‌ಗೆ ಹೋಗುವುದು ಬರುವುದು ಯಾವುದರ ಬಗ್ಗೆಯೂ

ಅವರು ಏನೂ ಪ್ರಶ್ನಿಸುತ್ತಿರಲಿಲ್ಲ. ಹಾಗೆಯೇ ಆಕೆಯಾದರೂ ಪತಿಯ ಬಗ್ಗೆ ಅಕ್ಕರ ಯಾಗಿರದಿದ್ದುದು—ಛೀ ಇದೇನು ಸಂಬಂಧ ? ಏನು ಜೀವನ ? ' ಎಂದು ಜಿಗುಪ್ಸೆಗೊಂಡ.

'ಸರಿ ನನ್ನದೇನು ಕಳೆದುಹೋಯಿತು...ತಾತನ ಮಾತಿಗೆ ಕಟ್ಟುಬಿದ್ದು ಕೆಲವು ದಿನಗಳಿದ್ದು ಗ್ರಾಮಕ್ಕೆ ಹಿಂತಿರುಗುವುದಷ್ಟೇ ' ಎಂದುಕೊಂಡಿದ್ದ ವೇಣು ತಲ್ಲಣಿಸಿ ಹೋಗುವಂತಹ, ಕೋಪ, ಗಾಬರಿ, ತಿರಸ್ಕಾರ ಉಂಟುಮಾಡುವ ಆ ಘಟನೆ ಕಳೆದ ವಾರ ಸಂಭವಿಸಿತು.

ರಾತ್ರಿ ಎಂಟು ಗಂಟೆಯಿರಬಹುದು. ಟೆಲಿಫೋನ್ ಕರೆ ಬಂದಿತು. ಸುಂದರಂ ಆಗ ಮಹಡಿಯ ಮೇಲಿದ್ದರು. ವೇಣು ರಿಸೀವರನ್ನು ಎತ್ತಿದ.

" ಹಲೊ "—ಅವನು ಫೋನ್ ನಂಬರ್ ಹೇಳಿದ.

"—ನಾನು, ವತ್ಸಲಾ ಮಾತನಾಡುವುದು...ಕಾಲೇಜಿನಲ್ಲೇ ಮೀಟ್ ಮಾಡಲು ಬಂದೆ. ನೀವು ಅಷ್ಟರಲ್ಲೇ ಹೊರಟುಹೋಗಿದ್ದಿರಿ...' ಸೌಂಡ್ ಆಫ್ ಮ್ಯೂಸಿಕ್ ' ಈ ದಿನವೇ ಕೊನೆಯಂತೆ...ನೈಟ್ ಷೋಗೆ ಹೋಗೋಣವ...ಏನು, ಏನೂ ಹೇಳುತ್ತಿಲ್ಲ."

ವೇಣುವಿಗೆ ಏನೂ ಅರ್ಥವಾಗಲಿಲ್ಲ. ' ಅದೊಂದು ರಾಂಗ್ ನಂಬರ್ ಕಾಲ್ ' ಎಂದು ಅವನು ಪ್ರಾರಂಭದಲ್ಲಿ ಸಂದೇಹಗೊಂಡುದನ್ನು ' ಕಾಲೇಜಿನಲ್ಲಿ ಮೀಟ್ ಮಾಡಲು ಬಂದೆ ' ಎಂದು ಹೇಳಿದುದು ಬುಡಮೇಲು ಮಾಡಿತು. ಏನು ಮಾಡಲೂ ತೋಚದೆ ರಿಸೀವರನ್ನು ಟೆಲಿಫೋನ್‌ನ ಮೇಲಿಟ್ಟು ಆ ಹಾಲ್ ಬಿಟ್ಟು ಓಡಿದ ವೇಣು. ಪಕ್ಕದ ಕೋಣೆಯಲ್ಲಿ ಏಕಾಂತವಾಗಿ ಕುಳಿತ ಅವನ ಮನಸ್ಸಿನಲ್ಲಿ ತರಂಗರಂಗವೆದ್ದಿತು.

' ತಂದೆಯ ಹೊರತು ವಯಸ್ಸಾದ ಗಂಡಿನ ಕಂಠ ಬೇರೆಯಾರದೂ ಆಗಿರಲಾರದು ' ಎಂಬ ಧೈರ್ಯದಿಂದ ಪದ್ಧತಿಯಂತೆ ಮಾತನಾಡುವ ಅವಳು—ಆ ವತ್ಸಲೆಯೇ ಇರಬೇಕು ಎಂದು ಅವನು ದೃಢವಾಗಿ ನಂಬಿದ. ಸ್ವಲ್ಪ ಹೊತ್ತಿಗೆ ಮತ್ತೆ ಕರೆ ಬಂದಿತು. ಹೊಡೆಯುತ್ತಲೇ ಇದ್ದಿತು; ವೇಣು ಕದಲಲಿಲ್ಲ.

ಮಹಡಿಯಿಂದ ಇಳಿದು ಬಂದ ಸುಂದರಂ ತಾವೇ ರಿಸೀವರನ್ನು ಎತ್ತಿದುದಾಯಿತು.

" ಹಲೋ ? "

—ಟೆಲಿಫೋನ್ ನಂಬರನ್ನು ಹೇಳುವುದು ಕೇಳಿಸಿತು. ವೇಣು ಮೆಲ್ಲನೆ ಎದ್ದು ಟೆಲಿಫೋನ್ ಇದ್ದ ಹಾಲ್‌ಗೂ ಅವನಿದ್ದ ಕೋಣೆಗೂ ಮಧ್ಯೆ ಇದ್ದ ಹಲಗೆಯ ಮರೆಯಲ್ಲಿ ಕಿವಿಯಿಟ್ಟು ಪ್ರಣಯ ಸಂಭಾಷಣೆಯನ್ನು ಕೇಳಿದ, ಹೌದು ಕಿವಿಯಿಟ್ಟು ಕೇಳಿದ. ಇಂಗ್ಲೀಷ್‌ನಲ್ಲಿ ಅವನ ತಂದೆಯ ಸಂಭಾಷಣೆ ನಡೆದಿತ್ತು.

" ಇಲ್ಲವಲ್ಲ, ನಾನು ಮಹಡಿಯ ಮೇಲಿದ್ದೆ...ಉಂ...ತ್ಸ..."

" ,............"

" ಇಟ್ ಈಸ್ ಆಲ್‌ರೈಟ್."

" ............ "

" ಬಹುಶಃ ನನ್ನ ಮೊದಲ ಮಗನಾಗಿರಬಹುದು...ಹೌದು ಅವನು ಗ್ರಾಮದಲ್ಲಿದ್ದ... ಈಗತಾನೆ...ಹೌದು... "

" ............ "

" ಬೇರೆ ಯಾರೂ ' ಅಡಲ್ಟ್' ಇಲ್ಲವಲ್ಲ."

" ............ "

" ಸರಿ...ನಾನು ನೋಡಿಕೊಳ್ಳುತ್ತೇನೆ...ಒ...ಕೇ... "

" ............ "

" ನೈನ್ ಥರ್ಟಿ...ಎಸ್ ? ಒ.ಕೆ."

" ............ "

" ಡೋಂಟ್ ವರಿ... "

" ............ "

" ಒ...ವಾಟ್ ಆರ್ ಯು ಟಾಕಿಂಗ್... "

" ............ "

" ಬೈ......... "

ಸಂಭಾಷಣೆ ಮುಗಿಯುತ್ತಿದ್ದಂತೆಯೇ ವೇಣು ಕೋಣೆಯಿಂದ ಹೊರಗೆ ಹೊರಟು ಹೋದ.

ಆ ಘಟನೆಯ ನಂತರ ಅವನು ಅವರ ಮುಖವನ್ನು ನೋಡಲಿಲ್ಲ. ಒಂದೇ ಮನೆಯಲ್ಲಿದ್ದರೂ ಅವನು ಅವರ ದೃಷ್ಟಿಗೆ ಬೀಳದಂತೆ ಚಮತ್ಕಾರದಿಂದ ತಪ್ಪಿಸಿಕೊಂಡು ಓಡಾಡುತ್ತಿದ್ದ.

ಕೆಲವು ದಿನಗಳ ನಂತರ ಮನೆಯಲ್ಲಿ ಯಾರೂ ಇಲ್ಲದ ವೇಳೆಯಲ್ಲಿ ಅವನು ಮಹಡಿಯ ಮೇಲಿದ್ದ ತನ್ನ ತಂದೆಯ ಕೋಣೆಗೆ ಹೋದ. ತನ್ನ ಸಂದೇಹಗಳನ್ನು ಪರಿಹರಿಸಿಕೊಳ್ಳಲು ಅವನಿಗಿನ್ನೂ ಕೆಲವು ಸಾಕ್ಷ್ಯಾಧಾರಗಳು ಬೇಕಿದ್ದುವು.

ಬದಲಿ ಬೀಗದ ಕೈಗಳನ್ನು ಉಪಯೋಗಿಸಿ ಅದರ ಮೇಲಿನ ಪೆಟ್ಟಿಗೆಯನ್ನು ತೆಗೆದ. ಆರೀತಿಯಾಗಿ ಒಬ್ಬ ಕಳ್ಳನೋಪಾದಿಯಲ್ಲಿ ವರ್ತಿಸುವುದರಿಂದ ಅವನಿಗೆ ಯಾವ ವಿಧವಾದ ಅವಮಾನವೂ ಉಂಟಾಗಲಿಲ್ಲ. ಅದಕ್ಕಿಂತ ಹೆಚ್ಚಿನ ಅವಮಾನಕ್ಕೆ ಅವನನ್ನು ಆಳಾಗಿಸುವ ಕೆಲವು ವಿಚಾರಗಳು ಕಂಡುದರಿಂದ ತಾನು ಮಾಡುತ್ತಿರುವ ಕೆಲಸ ಸರಿಯೆಂದೇ ತೋರಿತು.

' ನಾನು ಯಾಕೆ ಭಯಪಡಬೇಕು ? ತಪ್ಪೆನಿಸುವ ತಂದೆಯನ್ನು ಕಂಡು ನಾನು ಯಾಕೆ ಮರೆಮಾಚಿಕೊಳ್ಳಬೇಕು...? ಈ ಬಗ್ಗೆ ಅವರ ಮನಸ್ಸಿಗೆ ನಾಟುವಂತೆ ವಿಚಾರ ಪ್ರಸ್ತಾ

ಓಸಿ ಅವರನ್ನು ದಾರಿಗೆ ತರಬೇಕು...ಇದು ನನ್ನ ಕರ್ತವ್ಯ...ಹೇಗೆ ಎಲ್ಲಿ ಅವರೊಂದಿಗೆ ಈ ಬಗ್ಗೆ ಮಾತನಾಡುವುದು...? ಮನೆಯಲ್ಲಿ ಮಾತನಾಡಿದರೆ ತಾಯಿಗೆ ವಿಷಯ ಗೊತ್ತಾಗುತ್ತೆ...ಅವರನ್ನು ಹೊರಗೆ ಎಲ್ಲಿಯಾದರೂ ಭೇಟಿಮಾಡಿ ಮಾತನಾಡಬೇಕು... ನನ್ನ ಮಾತನ್ನು ಅವರು ಒಪ್ಪದಿದ್ದರೆ...? ಆಬಗ್ಗೆ ನಂತರ ಆಲೋಚಿಸಿದರಾಯಿತು. ಮೊದಲು ಧೈರ್ಯವಾಗಿ ಈ ವಿಚಾರವನ್ನು ಅವರೊಂದಿಗೆ ಪ್ರಸ್ತಾಪಿಸಬೇಕು...' ಎಂದು ರಾತ್ರಿ ಹಗಲೂ ಮನಸ್ಸಿನಲ್ಲಿ ಚಿಂತೆ ಬೆಳೆದು ತಲೆ ಕೆಟ್ಟು, ಕಡೆಗೆ ಹಿಂದಿನ ರಾತ್ರಿ ಒಂದು ತೀರ್ಮಾನಕ್ಕೆ ಬಂದ.

'ಹೇಗಾದರಾಗಲಿ, ನಾಳೆ ಅವರೊಂದಿಗ ಪ್ರತ್ಯೇಕವಾಗಿ ಸ್ಪಷ್ಟವಾಗಿ ಮಾತನಾಡುವುದು ಸರಿ. ಇದರಲ್ಲಿ ಭಯವೇನು ಬಂತು? ನಾನೇನು ಹಸುಗೂಸೆ? ಐ ಅಮ್ ಆನ್ ಅಡಲ್ಟ್.'

## 3

ಸಮುದ್ರ ತೀರದಲ್ಲಿ ಹೊಸದಾಗಿ ಕಟ್ಟಿದ ಒಳರಸ್ತೆಯಲ್ಲಿ ಮಾರಿಸ್‌ಮೈನರ್ ಕಾರನ್ನು ಸುಂದರಂ ನಿಲ್ಲಿಸಿದರು. ಅವರ ಪಕ್ಕದಲ್ಲಿ ಕುಳಿತಿದ್ದ ವೇಣು ಮೊದಲು ಬಾಗಿಲು ತೆಗೆದು ಹೊರಗೆ ಬಂದ. ಅವನ ನೋಟ ದೂರದ ಸಾಗರವನ್ನು ಶೂನ್ಯವಾಗಿ ನೋಡಿತು... ಗಾಳಿಯಲ್ಲಿ ಹರಿದಾಡುತ್ತಿದ್ದ ಪಂಚೆಯನ್ನು ಎತ್ತಿ ಕಟ್ಟಿಕೊಂಡು ಅವನು ಕಳೆದ ಹತ್ತು ನಿಮಿಷಗಳಿಂದ ಮನಸ್ಸಿನಲ್ಲಿ—ತನ್ನ ತಂದೆಯನ್ನು ಕಾಲೇಜಿನಲ್ಲಿ ಭೇಟಿಯಾಗಿ ಇಲ್ಲಿಗೆ ಬಂದು ಸೇರಿದವರೆಗೆ—'ಹೇಗೆ ಮಾತನ್ನು ಆರಂಭಿಸುವುದು?' ಎಂಬ ದ್ವಂದ್ವ ಭಾವನೆಯಲ್ಲೇ ತೊಳಲುತ್ತಿದ್ದ. ಏನೇ ತಪ್ಪು ಮಾಡಿದ್ದರೂ ಓರ್ವ ತಂದೆಯೊಂದಿಗೆ ಮಗ ಮಾತನಾಡಬಾರದ ರೀತಿ ತಾನು ಆತುರದಲ್ಲಿ ಬುದ್ಧಿಗೆಟ್ಟು ಮಾತನಾಡಬಾರದು ಎಂಬ ಭಯ ಬೇರೆ ಇತ್ತು.

ಕಾರಿನಿಂದ ಇಳಿದ ಸುಂದರಂ ತಮ್ಮ ಕೋಟನ್ನು ತೆಗೆದು ಮಡಿಸಿ ಕಾರಿನ ಸೀಟಿನ ಮೇಲೆ ಹಾಕಿ ಕಾರಿನ ಗಾಜುಗಳನ್ನು ಮೇಲೇರಿಸಿ ಬಾಗಿಲು ಬೀಗ ಹಾಕಿ ಬಂದರು.

ಅವನ ಪಕ್ಕದಲ್ಲಿ ಬಂದು ನಿಂತು ಕೈಗಡಿಯಾರವನ್ನು ನೋಡಿ "ಗಂಟೆ ಇನ್ನೂ ಐದಾಗಿದೆಯಷ್ಟೆ" ಎಂದು ಅವನ ಕಿವಿಯಲ್ಲಿ ಮಾತ್ರ ಬೀಳುವಂತೆ ತಾವೇ ಹೇಳಿಕೊಂಡರು ಸುಂದರಂ.

"ಅದೇ ಇಲ್ಲಿ ಜನಸಂದಣಿಯಿಲ್ಲ"—ಎಂದು ಕೃತಕ ಮಂದಹಾಸದಿಂದ ಅವನೂ ಹೇಳಿದ.

ಸಾಗರ ತೀರದ ಮರಳಿನಲ್ಲಿ ಇನ್ನೂ ನೆರಳು ಇಳಿದಿರಲಿಲ್ಲ.

ಅವರಿಬ್ಬರೂ ಮೌನವಾಗಿ ಮರಳಿನ ಮೇಲೆ ಸಾಗರದೆಡೆ ಹೆಜ್ಜೆ ಹಾಕಿದರು. ಅವರಿಬ್ಬರನ್ನೂ ನೋಡಿದವರಿಗೆ ಯಾರಿಗೂ ಅವರು ತಂದೆ ಮಕ್ಕಳಂತೆ ಕಾಣಿಸುತ್ತಿರಲಿಲ್ಲ. ಅಣ್ಣ ತಮ್ಮಂದಿರಂತೆ, ಗುರು ಶಿಷ್ಯರಂತೆ ಇದ್ದರು. ವದನಾರವಿಂದ ರೂಪುರೇಖೆಗಳಲ್ಲಿ ಇಬ್ಬರಿಗೂ ಹೋಲಿಕೆಯಿತ್ತು. ತಂದೆಯಷ್ಟೇ ಎತ್ತರವಾಗಿದ್ದು ಅವರಿಗಿಂತ ಸ್ವಲ್ಪ ಸಣ್ಣ ಸಣ್ಣವಾಗಿದ್ದುದರಿಂದ ಇನ್ನೂ ಎತ್ತರವಾಗಿ ತೋರುತ್ತಿದ್ದ ಮಗ.

ಅವನು ತಲೆಬಾಗಿ ನಡೆಯುತ್ತಾ ಮರಳಿನಲ್ಲಿ ಅಚ್ಚಾಗುತ್ತಿದ್ದ ತನ್ನ ಹೆಜ್ಜೆಗಳನ್ನೇ ನೋಡುತ್ತಾ ಮುಂದುವರಿದ.

ಮನಸ್ಸಿನಲ್ಲಿದ್ದ ಭಾರ ಕ್ಷಣಕ್ಷಣಕ್ಕೂ ಹೆಚ್ಚಿತು; ಹೃದಯದಲ್ಲಿ ತುಂಬಿಬಂದ ಉದ್ವೇಗ ಕಂಠದಲ್ಲಿ ಬಂದು ನಿಂತಿತು. ಮುಖ ಕೆಂಪುಕೆಂಪೇರಿತು. ತುಟಿಗಳನ್ನು ಕಚ್ಚತೊಡಗಿದ...

ಅವನು ತಲೆಯೆತ್ತಿ ದೂರದ ಸಾಗರದಲೆಗಳ ಕಡೆ ನೋಡಿದಾಗ ಅವನ ಕಣ್ರೆಪ್ಪೆಗಳ ಕೊನೆಗಳಲ್ಲಿ ಅಶ್ರುಬಿಂದುಗಳು ಗಾಳಿಗೆ ಚದುರಿ ನಿಂತುವು...

ತಂದೆ ಮಗನನ್ನು ಆದರದಿಂದ ದೃಷ್ಟಿಸಿದರು. ಒಂದು ಬಾರಿ ಕೆಮ್ಮಿದರು. ಅವನು ತಿರುಗಿ ನೋಡಿದಾಗ ಸಮಾಧಾನಪಡಿಸುವ ಬಗೆಯಲ್ಲಿ ಮಂದಹಾಸ ಬೀರಿದರು. ಅವನ ತುಟಿಗಳು ಕಂಪಿಸಿದುವು.

" ಇಲ್ಲಿ ಕುಳಿತುಕೊಳ್ಳೋಣವೇನು ? " ಎಂದರು ಅವರು.

ಅವನು ಅದಕ್ಕೆ ಉತ್ತರ ಹೇಳದೆ ಸುಮ್ಮನೆ ಕುಳಿತುಕೊಂಡ.

'—ಹೇಗೆ ಪ್ರಾರಂಭಿಸುವುದು ? '

ಅವನು ಅವರ ಮುಖವನ್ನು ದೃಷ್ಟಿಸಿ ನೋಡುವುದೂ ಮತ್ತೆ ತಲೆಬಾಗಿ ಯೋಚಿಸುವುದೂ ಮರಳಿನಲ್ಲಿ ಗೆರೆಗಳನ್ನೆಳೆಯುವುದೂ ಮಾಡುತ್ತಾ ಸ್ವಲ್ಪ ಕಾಲ ಕಳೆದ...

ಅವನು ಯಾವ ವಿಚಾರವನ್ನು ಕುರಿತು ತಮ್ಮೊಡನೆ ಮಾತನಾಡಲು ಬಂದಿದ್ದಾನೆ ಎಂಬುದನ್ನು ಸುಂದರಂ ಅರಿತಿದ್ದರು. ' ಆ ಟೆಲಿಫೋನ್ ಕಾಲ್ ' ಘಟನೆಯ ನಂತರ ಈ ಒಂದು ವಾರ ತಾವು ಅವನನ್ನು ಕಾಣಲೇ ಇಲ್ಲವೆಂಬ ಪ್ರಜ್ಞೆ ಅವರಿಗೂ ಇತ್ತು. ಅವನಿಗೆ ಅದರಿಂದ ಆತಂಕ ಉಂಟಾಗಿದ್ದರೂ ಪ್ರಾಪ್ತವಯಸ್ಕನೆಂಬ ಕಾರಣದಿಂದಾಗಿ ಸಭ್ಯತೆಯ ದೃಷ್ಟಿಯಿಂದ ಭೇಟಿಯಾಗುವ ಪ್ರಸಂಗದಿಂದ ತಪ್ಪಿಸಿಕೊಳ್ಳುತ್ತಿದ್ದಾನೆಂದು ಅವರು ಭಾವಿಸಿದರು.

ಆದರೆ ಈಗ ಆ ವಿಚಾರವಾಗಿ ಅವನು ಬಹಳ ಬಾಧೆಗೆ ಒಳಗಾಗಿ ಅದನ್ನೇ ಕುರಿತು ತಮ್ಮೊಂದಿಗೆ ಮಾತನಾಡಲಿರುವ ಸನ್ನಿವೇಶ ಅವರಿಗೆ ಅಷ್ಟು ಸರಿಯೆನಿಸಲಿಲ್ಲ. ಹಾಗಿದ್ದರೂ ಹೇಡಿಯಂತೆ ಆ ಭೇಟಿಯನ್ನು ತಳ್ಳಿಹಾಕುವುದು ಸರಿಯಲ್ಲ ಎಂಬುದಕ್ಕಾಗಿ ಅವನ ಮುಂದೆ ಅವರೀಗ ಬಂದಿದ್ದರು.

ಏನಾದರಾಗಲಿ, ಅವರು ತಾವಾಗಿ ಮಾತಾಡಲು ಇಚ್ಛೆ ಪಡಲಿಲ್ಲ.

ಅವನು ಥಟ್ಟನೆ ತನ್ನೊಂದಿಗೆ ತಾನೇ ಮಾತನಾಡಿಕೊಳ್ಳುವವನಂತೆ ಗೊಣಗಿದ: "ಐ ಆಮ್ ಸಾರಿ—ಇದು ತುಂಬಾ ಲಜ್ಜಾಸ್ಪದವಾದ ಅವಮಾನಕರ ವಿಚಾರ" ಎಂದ. ಅವರೊಂದಿಗೆ ಅವರನ್ನು ಪ್ರಶ್ನಿಸಿದ: "ನಾನು ಯಾವುದನ್ನು ಕುರಿತು ಹೇಳುತ್ತಿದ್ದೇನೆಂಬುದು ನಿಮಗೆ ಅರ್ಥವಾಯಿತೆ ? "

ಅವರು ಸ್ವಲ್ಪವೂ ಅಳುಕದೆ " ಅರ್ಥವಾಯಿತು " ಎಂದು ತಲೆಯಾಡಿಸಿದರು.

ಅವರಿಗೆ ಯಾವ ಅಳುಕೂ ಇಲ್ಲದಿದ್ದುದನ್ನು ಕಂಡೇ ಅವನಿಗೆ ಆವೇಶವುಂಟಾಯಿತು.

" ನೀವಿಂತಹವರೆಂದು ನಾನು ಕಲ್ಪಿಸಿಕೊಂಡು ಇರಲಿಲ್ಲ..." ಅವನು ಉದ್ವೇಗ ಭರಿತನಾಗಿ ಬಿಗಿಯಾಗಿದ್ದ ತನ್ನ ಕರಗಳನ್ನು ಹಿಸುಕಿಸಿಕೊಂಡ. ಗಾಳಿಯಲ್ಲಿ ತಲೆಗೂದಲು ಹಾರಾಡುತ್ತಿತ್ತು. ಉಕ್ಕೇರುತ್ತಿದ್ದ ಮನಸ್ಸಿನ ಭಾವನೆಗಳನ್ನು ಅಡಗಿಸಿಕೊಂಡು ಹೃದಯ ಬಡಿತ ಜೋರಾಗಲು ನಿಟ್ಟುಸಿರು ಬಿಡತೊಡಗಿದ.

" ವೇಣು ಡೋಂಟ್ ಬಿ ಸಿಲ್ಲಿ... ನೀನೇನು ಇನ್ನೂ ಚಿಕ್ಕ ಹುಡುಗನೆ...? ಸಮಾಧಾನದಿಂದ ಆಲೋಚಿಸು "—ಎಂದು ಅವನ ಭುಜವನ್ನು ತಡವಿದರು ಸುಂದರಂ.

" ಯೆಸ್...ಐ ಆಮ್ ಅನ್ ಅಡಲ್ಟ್" ಎಂದು ಹಲ್ಲು ಕಚ್ಚಿ ರೋಷದಿಂದ ಆಂಗ್ಲದಲ್ಲೇ ನಂತರ ಮುಂದುವರಿಸಿದ :

...ಆ ಅನ್ಯ ಭಾಷೆಯಲ್ಲೇ ತಂದೆ ಮಕ್ಕಳು ಇಂತಹ ವಿಚಾರಗಳನ್ನು ಚೆನ್ನಾಗಿ ಚರ್ಚಿಸಬಹುದು ಎಂದು ಭಾವಿಸಿದನೇನೋ.

" ನಿಮಗೆ ಆ ಟೆಲಿಫೋನ್ ಪ್ರಸಂಗ ನೆನಪಿದೆಯೆ ? ಅಂದಿನಿಂದ ನಾನು ನಿಮ್ಮನ್ನು ಗಮನವಿಟ್ಟು ನೋಡುತ್ತಿದ್ದೇನೆ...ನನ್ನ ತಂದೆ ಹೀಗೆ ಸ್ತ್ರೀಲೋಲರಾಗಿದ್ದಾರೆಂದು ನಾನು ಎಣಿಸಲೇ ಇಲ್ಲ. ಇದು ನಮ್ಮ ಕುಟುಂಬ ಕುರಿತಾದ ಪ್ರಶ್ನೆಯಲ್ಲವೆ...? ನಿಮ್ಮ ವಯಸ್ಸಿಗೂ ಸ್ಥಾನಕ್ಕೂ ಇದು ತಕ್ಕುದೆ...? ಈ ತಾಯಿ ಪೆದ್ದು ನೀವು ಅವರನ್ನು ಬಾಳಿನುದ್ದಕ್ಕೂ ಹೀಗೆಯೇ ವಂಚಿಸಿಕೊಂಡು ಬಂದಿದ್ದೀರಿ..." ಅವನು ಮಾತನಾಡುವಾಗ ಮಧ್ಯೆ ತಲೆಹಾಕದೆ ಸಿಗರೇಟ್ ಸೇದುತ್ತಿದ್ದವರು ಈಗ ಥಟ್ಟನೆ ಉತ್ತರ ಕೊಟ್ಟರು.

" ಪ್ಲೀಸ್ ನಿನ್ನ ತಾಯಿಯನ್ನು ಈ ವಿಚಾರಕ್ಕೆ ಎಳೆಯಬೇಡ. ನಿನ್ನ ಅಭಿಪ್ರಾಯಗಳನ್ನು ಅವು ಎಷ್ಟು ತಪ್ಪು ಒಪ್ಪಾಗಿದ್ದರೂ. ನೀನು ಹೇಳು—ನಾನು ಕೇಳುತ್ತೇನೆ... ನಿನ್ನ ತಾಯಿಯನ್ನು ಈ ವಿಚಾರಕ್ಕೆ ಎಳೆಯಬೇಡ. ನಿನಗಿಂತ ಅವಳನ್ನು ನಾನು ಚೆನ್ನಾಗಿ ಬಲ್ಲೆ. ನಿನಗೆ ನನ್ನ ಬಗ್ಗೆ ತಿಳಿದಿರುವುದಕ್ಕಿಂತ ಹೆಚ್ಚಾಗಿ ಅವಳು ನನ್ನನ್ನು ಅರಿತಿದ್ದಾಳೆ. ನಾವು ಇಪ್ಪತ್ತೈದು ವರ್ಷ ದಾಂಪತ್ಯ ನಡೆಸಿದವರು. ನಮ್ಮ ಕಡೆಗಾಲದವರೆಗೂ ಒಂದಾಗಿಯೇ ಬಾಳ್ವೆ ನಡೆಸುತ್ತೇವೆ...ಮುಂದೆ ಹೇಳು."

" ನೀವು ತಾಯಿಯವರನ್ನು ವಂಚಿಸಿ ದ್ರೋಹವೆಸಗಿ ದಾರಿ ತಪ್ಪಿ ನಡೆಯುತ್ತಿದ್ದೀರಿ. ನೀವು ನನ್ನನ್ನು ಮೋಸಗೊಳಿಸಲಾರಿರಿ...? "

'ನಿನ್ನನ್ನು ಮೋಸಗೊಳಿಸಬೇಕಾದ ಆವಶ್ಯಕತೆಯೇ ನನಗಿಲ್ಲ' ಎಂಬಂತೆ ಅವರು ತಮಗೆ ತಾವೇ ನಕ್ಕರು.

"ಆ ಫೋನ್ ಘಟನೆಯನ್ನು ಮಾತ್ರ ಕುರಿತು ನಾನು ಈ ತೀರ್ಮಾನಕ್ಕೆ ಬರಲಿಲ್ಲ... ಎರಡನೆಯ ಬಾರಿ ನೀವು ಫೋನಿನಲ್ಲಿ ಮಾತನಾಡಿದಿರಲ್ಲ, ಆ ಮಾತನ್ನು ನಾನು ಕೇಳಿಸಿಕೊಂಡೆ...ಅದರ ನಂತರ ರಾತ್ರಿ ಒಂಭತ್ತು ಗಂಟೆಯ ನಂತರ ಕಾರನ್ನು ತೆಗೆದುಕೊಂಡು ಹೋದಿರಿ...ನಿಮ್ಮಿರ್ವರನ್ನು ನಾನು ಚಿತ್ರಮಂದಿರದಲ್ಲಿಯೂ ನೋಡಿದೆ. ಇಷ್ಟರಿಂದ ಒಬ್ಬರ ಬಗ್ಗೆ ಸಂದೇಹಗೊಳ್ಳುವುದೆ...? ಆದುದರಿಂದ ನಿಮ್ಮ ಕೋಣೆ ಹೊಕ್ಕು ನಿಮ್ಮ ಮೇಜು, ಅಲ್ಮೇರಾ, ಎಲ್ಲವನ್ನೂ ಹುಡುಕಿದೆ...ನಿಮ್ಮ ಪ್ರಣಯಪತ್ರಗಳು...ಒಂದು ಫೈಲೇ ಇದೆ...ಅದರಲ್ಲೊಂದು ಇದೋ" ಎಂದು ಅವನು ಉದ್ವೇಗಗೊಂಡು ಜೇಬಿನಿಂದ ಒಂದು ಕಾಗದವನ್ನು ತೆಗೆದು ಅವರೆಡೆ ಬಿಸಾಡಿದ...

ನಂತರ ಅವನು ಬೇರೆ ಕಡೆಗೆ ತಿರುಗಿ ಕಣ್ಣೀರು ಬಿಡತೊಡಗಿದ. ಕಂಠಾ ಕಟ್ಟಿತು.

ಸಾಗರ ತೀರದ ರಸ್ತೆಯಲ್ಲಿ ನೀಲಿಯ ಬಣ್ಣದ ದೀಪಗಳು ಬೆಳಗತೊಡಗಿದುವು. ಮರಳಿನ ಮೇಲೆ ಜನಸಂದಣಿಯಿತ್ತು...ಒಂದು ಚಿಕ್ಕ ಗುಂಪು ಅವರೆಡೆಗೆ ಬರುತ್ತಿತ್ತು. ಆ ಗುಂಪು ಅವರಿದ್ದ ಸ್ಥಳವನ್ನು ಹಾದು ಹೋಗುವವರೆಗೆ ಅವರು ಮೌನವಾಗಿ ಕುಳಿತಿದ್ದರು. ಮತ್ತೆ ವೇಣುವೇ ಮಾತನಾಡಲಾರಂಭಿಸಿದ.

"ನೀವು ನನ್ನನ್ನು ಹೆತ್ತ ತಂದೆ. ನಿಮಗೆ ನಾನು ಇದನ್ನೆಲ್ಲಾ ಹೇಳುವ ಪ್ರಮೇಯ ಬಂದಿತಲ್ಲಾ ಎಂದು ನನಗೆ ವ್ಯಥೆಯಾಗಿದೆ... ಇನ್ನು ಮೇಲಾದರೂ ನೀವು ನಿಮ್ಮ ಲೋಪಗಳನ್ನು ನಿವಾರಿಸಿಕೊಳ್ಳಬೇಕು... ಅದರಿಂದ ಹೇಳುತ್ತಿದ್ದೇನೆ..."

ತದನಂತರ ಏನು ಮಾತನಾಡುವುದೆಂದು ತಿಳಿಯದೆ ಅವನು ಮೌನ ವಹಿಸಿದ. ಸುಂದರಂ ಕೂಡ ಏನೂ ಮಾತನಾಡದೆ ನಿಟ್ಟುಸಿರು ಬಿಟ್ಟು ಆಗಸವನ್ನು ನೋಡತೊಡಗಿದರು... ಇವನೊಂದಿಗೆ ಈ ವಿಚಾರವನ್ನು ಕುರಿತು ತಾನು ಏನು ಮಾತನಾಡುವುದು ಎಂಬುದಕ್ಕಿಂತ, ಏನು ಮಾತನಾಡಬಾರದೆಂದು ಅವರು ಆಲೋಚಿಸುತ್ತಿದ್ದರು.

ಅವನು ಇದ್ದಕ್ಕಿದ್ದಂತೆ ಹಾಗೆ ಅವರ ಕಡೆ ತಿರುಗಿ ಕೇಳಿದ :

..."ತಾತ ಹೇಳಿದ್ದಾರೆ, ನೀವೂ ತಾಯಿಯವರೂ ಪರಸ್ಪರ ಪ್ರೀತಿಸಿ ವಿವಾಹವಾದಿರೆಂದು...ಈ ಪ್ರಣಯ ವ್ಯವಹಾರಗಳೆಲ್ಲಾ ಕಡೆಯಲ್ಲಿ ಈ ರೀತಿಯೇ ಕೊನೆಗೊಳ್ಳುತ್ತದೋ!" ಮನ ಚುಚ್ಚುವಂತೆ ವ್ಯಂಗ್ಯವಾಗಿ ಕೇಳಿ ಅವರನ್ನೇ ದೃಷ್ಟಿಸಿ ನೋಡಿದ.

ಸುಂದರಂ ಸಿಗರೇಟ್ ಸೇದುತ್ತಾ ತಲೆಬಾಗಿಸಿಕೊಂಡಿದ್ದವರು ಇನ್ನೂ ಆಲೋಚನಾ ಮಗ್ನರಾಗಿಯೇ ಇದ್ದರು. ನಿಟ್ಟುಸಿರು ಬಿಟ್ಟು ವೇಣುವಿನ ಮುಖವನ್ನು ನೋಡಿದರು. ಯಾವ ವಿಚಾರವನ್ನು ಕುರಿತೋ ಅವನೊಂದಿಗೆ ಬಹಿರಂಗವಾಗಿ ಮಾತನಾಡಲು ಇಚ್ಛಿಸಿ, 'ವಯಸ್ಸು ಬೇರೆ ಅನುಭವವೂ ಬೇರೆ. ಅನುಭವ ಬೇರೆ; ಅದರಿಂದ ಮೂಡುವ ಪ್ರಜ್ಞೆ

ಬೇರೆ' ಎಂದು ಅವರಿಗೆ ತೋಚಿದುದರಿಂದ ಅವನಿಗೆ ವಿವರಿಸುವ ವಿಷಯುವನ್ನೂ ತೊರೆದು ಬೇರೆ ಮಾತನಾಡಿದರು.

"ಸರಿ, ಈ ಬಗ್ಗೆ ನಿನ್ನನ್ನು ಬಾಧಿಸುವ ವಿಚಾರ ಯಾವುದು ? ಅದನ್ನು ಹೇಳು."

ಅವರು ಹೀಗೆ ಕೇಳಲಾಗಿ ಅವನಿಗೆ ಒಂದೆಡೆ ಕೋಪ, ಮತ್ತೊಂದೆಡೆ 'ಈ ವ್ಯಕ್ತಿಗೇನಾಗಿ ಹೋಯಿತು ?" ಎಂಬ ಪರಿತಾಪವೂ ಉಂಟಾಗಿ ಕಿರುನಗೆಯಿಂದ ಹೇಳತೊಡಗಿದ :

"ಅಪ್ಪಾ... ನೀವು ಓರ್ವ ಪ್ರೊಫೆಸರ್. ಗೌರವಯುಕ್ತ ಕುಟುಂಬದಲ್ಲಿ ಹುಟ್ಟಿದವರು. ನಾಲ್ಕು ಮಕ್ಕಳ ತಂದೆ. ಇಷ್ಟು ವಯಸ್ಸಿನ ನಂತರ ವಿಟನಂತೆ ತಿರುಗುವುದರಿಂದ ನಿಮ್ಮ ಕುಟುಂಬದ ಅಂತಸ್ತು, ಸಾಮಾಜಿಕ ಗೌರವ ಎಲ್ಲಾ ನಾಶವಾಗಿ ಬಿಡುತ್ತದಷ್ಟೆ—ಎಂದು ಪ್ರಾಪ್ತ ವಯಸ್ಕನಾದ ಮಗ ಚಿಂತಿಸುವುದು ತಪ್ಪೆಂದು ಹೇಳುತ್ತೀರೇನು ? ಅದರಲ್ಲಿ ಅವನ ಸಂಬಂಧವೇನೂ ಇಲ್ಲ ಎನ್ನುವಿರಾ ?

ಅವನು ಮಾತನಾಡುವಾಗ ಅವರು ಮಗನ ಮುಖವನ್ನೇ ದೃಷ್ಟಿಸಿ ನೋಡಿದರು. ಅವನ ಮುಖದ ಮೇಲೆ ಒಂದೆಡೆ ಬೆಳಕು ಮತ್ತೊಂದೆಡೆ ಕತ್ತಲು ಬಿದ್ದಿದ್ದರೂ ತನ್ನ ಮುಖವನ್ನು ನೇರವಾಗಿ ನೋಡಲಾಗದೆ ಅವನ ದೃಷ್ಟಿ ಚತುರ್ದಿಕ್ಕಿನಲ್ಲಿ ಚಲಿಸುವುದು ಅವರ ಗಮನಕ್ಕೆ ಬಂದಿತು.

"ವೇಣು... ನೀನು ಪ್ರಾಪ್ತ ವಯಸ್ಕನೆಂದು ಹೇಳುತ್ತೀಯೆ. ಅದು ನಿಜ. ಆದರೆ. ಪ್ರಾಪ್ತ ವಯಸ್ಕನಾದವನಲ್ಲಿರಬಹುದಾದ ಭಾವಗಳಿಲ್ಲವಲ್ಲ...ಮೊದಲನೆಯದಾಗಿ ಓರ್ವ ತಂದೆಯ ಸ್ಥಾನದಲ್ಲಿದ್ದು ಕೊಂಡು ನನ್ನ ಪರ್ಸನಲ್ ವ್ಯವಹಾರಗಳನ್ನು—ಅಂತರಂಗ ವ್ಯವಹಾರಗಳನ್ನು ನಿನ್ನೊಡನೆ ಬಿಡಿಸಿ ಹೇಳಿಕೊಳ್ಳುವುದು ಸರಿಯೆಂದು ನನಗೆ ತೋರುವುದಿಲ್ಲ. ನೀನು ನನ್ನ ಕುಟುಂಬ ಮತ್ತು ಸಾಮಾಜಿಕ ಅಂತಸ್ತುಗಳ ಬಗ್ಗೆ ಚಿಂತೆಪಡುವುದಾಗಿ ಹೇಳುತ್ತಿದ್ದೀಯೆ. ಒಳ್ಳೆಯದು. ನನ್ನ ಆ ಯೋಗ್ಯತೆಗೆ ಒಂದು ಕುಂದೂ ಬರುವುದಿಲ್ಲ. ಅದನ್ನು ಕಾಪಾಡಿಕೊಳ್ಳುವುದರಲ್ಲಿ ನಿನಗಿಂತ ನನಗೆ ಹೆಚ್ಚು ಅಕ್ಕರೆಯಿದೆ. ಅದಕ್ಕೆ ಲೋಪ ಬರುವ ಸಂದರ್ಭ ಬಂದರೆ ಅದನ್ನು ಎದುರಿಸಿ ಸರಿಪಡಿಸಿಕೊಳ್ಳುವ ಸ್ಥಿತಿಯಲ್ಲಿ ನಾನಿದ್ದೇನೆ ಎಂಬುದನ್ನು ನಾನು ನಿನಗೆ ಹೇಗೆ ನಿರೂಪಿಸಲಿ ? ಯಾಕಾದರೂ ನಿರೂಪಿಸಬೇಕು...?"

—ಅವರ ಕಂಠ ತೀರ್ಮಾನಪೂರ್ಣವಾದುದೂ ಗಂಭೀರವಾದುದು ಆಗಿತ್ತು. ಅದರಲ್ಲಿ ಸ್ವಲ್ಪವಾದರೂ ಚಂಚಲತ್ವವೋ ತಪ್ಪುತನವೋ ಇಲ್ಲದೆ ತಾವು ಮಾತನಾಡುವುದನ್ನು ಕೇಳಿ ವೇಣುವಿಗೇ 'ತಾನು ಮಾಡುತ್ತಿರುವುದೇ ತಪ್ಪೋ' ಎಂಬುದಾಗಿ ಹೃದಯ ಮೂಲೆಯೊಂದರಲ್ಲಿ ಭೀತಿ ಹುಟ್ಟಿತು. ಆದರೂ 'ಇಷ್ಟು ವಯಸ್ಸಿನ ನಂತರ ನೈಚ್ಯವಾಗಿ ಒಂದು ಹೆಣ್ಣಿನೊಂದಿಗೆ ಸಂಬಂಧವಿಟ್ಟುಕೊಂಡೂ ಎಷ್ಟು ಧೈರ್ಯದಿಂದ ತನ್ನೊಂದಿಗೆ ಇವರು ವಾಕ್ಚಾತುರ್ಯ ತೋರಿಸುತ್ತಿದ್ದಾರೆ' ಎಂಬ ಭಾವನೆಯುಕ್ಕಿ ಅವನಿಗೆ ಕೋಪ ಬಂತು.

"ನನಗೆ ಯಾಕೆ ನಿರೂಪಿಸಬೇಕೆಂದು ಕೇಳುತ್ತಿದ್ದೀರಲ್ಲವೆ ? ನಾನು ನಿಮ್ಮ ಪತ್ನಿಯ ಮಗ. ನೀವು ಅವರಿಗೆ ದ್ರೋಹ ಮಾಡುತ್ತಿದ್ದೀರಿ" ಎಂದು ಹಲ್ಲು ಕಚ್ಚಿ ಹೇಳಿದ.

"ಉಂ...ಅವಳು ನನ್ನ ಬಗ್ಗೆ ನಿನ್ನೊಂದಿಗೆ ದೂರು ಹೇಳಿದಳೆ, ಏನು ?" ಎಂದು ಅವರು ಸಮಾಧಾನವಾಗಿಯೇ ಕೇಳಿದರು.

"ಇಲ್ಲ..."

"ಮತ್ತೆ ನೀನು ಯಾಕೆ ಎಲ್ಲೆ ಮೀರಿ ನಮ್ಮ ದಾಂಪತ್ಯ ವ್ಯವಹಾರದಲ್ಲಿ ತಲೆಯಿಡುತ್ತಿರುವೆ...?"

"ಐ ಅಮ್ ಯುವರ್ ಸನ್... ನಾನು ನಿಮ್ಮ ಮಗ—ಇದು ನನ್ನ ಕರ್ತವ್ಯ."

"ನೋ ಸನ್ನಿ...ಇದು ನಿನ್ನ ಕರ್ತವ್ಯವಲ್ಲ! ಇದರಲ್ಲಿ ತಲೆಯಿಡುವ ಅಧಿಕಾರ ಒಬ್ಬ ಮಗನಿಗಿಲ್ಲಪ್ಪ!"

ವೇಣು ತುಟಿಗಳನ್ನು ಕಚ್ಚಿಕೊಂಡ. ಅವನಿಗೆ ಅಳು ಬಂದಿತು...ಅವರನ್ನು ಬಾಯಿಗೆ ಬಂದಂತೆ ನಿಂದಿಸಿ ಇನ್ನು ಅವರ ಮುಖಾವಲೋಕನ ಮಾಡದ ಮಟ್ಟಕ್ಕೆ ಬಾಂಧವ್ಯವನ್ನು ಕಡಿದುಕೊಂಡು ಹೊರಟು ಹೋಗೋಣವೆನ್ನಿಸಿತು.

ಅವನ ಕಾತರ ಮತ್ತು ಮನಸ್ಸಿನ ಕಳವಳವನ್ನು ಕಂಡು ಅವರಿಗೆ ವ್ಯಥೆಯುಂಟಾಯಿತು. ತನಗೆ ಸಂಬಂಧವಿಲ್ಲದ, ತಾನು ಭರಿಸಲಾಗದ ವಿಚಾರಗಳನ್ನು ತಲೆಗಂಟಿಸಿಕೊಂಡು ಅವನ್ನು ತೊರೆಯಲಾಗದ ಬಲಹೀನತೆಯಿಂದ ಆ ಎಳೆಯ ಮನಸ್ಸು ಹೀಗೆ ತೊಳಲುತ್ತಿದೆಯಲ್ಲಾ ಎಂದು ಕನಿಕರದಿಂದ ಅವನ ಕರವನ್ನು ಅವರು ಹಿಡಿದುಕೊಂಡರು.

"ವೇಣು..."

ಚಿಕ್ಕ ಬಾಲಕನಂತೆ ಇಷ್ಟವಿಲ್ಲದವನಾಗಿ ಅವರ ಕರವನ್ನು ಒದರಿ ಬಿಡಿಸಿಕೊಂಡ. ಈಗ ಅವನಿಗೆ ಅಳುವೇ ಉಕ್ಕಿ ಬಂತು. ಅದನ್ನು ಅಡಗಿಸಿಕೊಳ್ಳುತ್ತಾ ಅವನು ಹೃದಯ ಕರಗುವಂತೆ ಕೇಳಿದ :

"ಅಪ್ಪಾ...ನನಗೆ ಈ ವಿಚಾರ ಬಹಳ ಅವಮಾನಕರವಾಗಿದೆ...ನೀವು...ಯಾಕೆ... ಹೀಗೆಲ್ಲಾ ವರ್ತಿಸಬೇಕು..."

ಅವರು ತಮ್ಮೊಳಗೇ ನಕ್ಕರು.

"ಮೈ ಬಾಯ್ ವಯಸ್ಸಾದ ಗಂಡಸಾಗಿ ಮೀಸೆ ತಿರುಗಿಸುವ ನೀನು ಹೀಗೆಲ್ಲಾ ಕೇಳಬಹುದೆ ? ನಿನ್ನ ಸದ್ಭಾವನೆ ನನಗೆ ಚೆನ್ನಾಗಿ ಅರ್ಥವಾಗುತ್ತದೆ. ನನ್ನ ಬಗ್ಗೆ ತಪ್ಪಾಗಿ ತೋರಿದರೆ ಅದನ್ನು ಮನಸ್ಸಿನಲ್ಲೇ ಅಡಗಿಸಿಟ್ಟುಕೋ...ಕಾಲಚಕ್ರದಲ್ಲಿ 'ಯಾವುದು ಸರಿ. ಯಾವುದು ತಪ್ಪು—ಯಾವ ಮಟ್ಟಕ್ಕೆ ಯಾವುದು ತಪ್ಪು ಯಾವುದು ಸರಿ' ಎಂದು ನಿನಗೆ ಕ್ರಮೇಣ ಅರ್ಥವಾಗುತ್ತದೆ... ನೀನು ಮಾಡಿದ ತಪ್ಪುಗಳನ್ನೆಲ್ಲಾ ನೀನು ಮಗನೆಂಬ ಅಭಿಮಾನದಿಂದ ನಾನು ಮನ್ನಿಸುತ್ತೇನೆ. ಯೋಚಿಸಿ ನೋಡು... ತಂದೆಯ ವೈಯಕ್ತಿಕ ವಿಚಾರಗಳನ್ನು ತಿಳಿದುಕೊಳ್ಳುವುದಕ್ಕಾಗಿ ಮಗನೇ ಆತನ ಮೇಲೆ ಗೂಢಚರ್ಯೆ ನಡೆಸು

ವುದೂ, ಕಳ್ಳತನವಾಗಿ ಆತನ ಅಂತರಂಗ ಪ್ರವೇಶ ಮಾಡುವುದೂ ಬಹಳ ಅವಮಾನಕರ ವಿಷಯವಲ್ಲವೆ...? ನಾನೇ ನಿನ್ನ ಸ್ಥಾನದಲ್ಲಿದ್ದಿದ್ದರೆ ಈ ಕಾರ್ಯ ಕಾರಣಕ್ಕಾಗಿ ಆಜೀವ ಪರ್ಯಂತ ನಾಚಿಕೆಗೊಳ್ಳುತ್ತಿದ್ದೆ..."

ಅವರು ಅವನನ್ನು ಮನ್ನಿಸಿದಂತೆ, ಅವನು ಮಾಡಿದ ಕೆಲಸಕ್ಕೆ ನಾಚಿಕೆಪಡುವಂತೆ ಹೇಳಿದುದೂ ಅವನಿಗೆ ಅರ್ಥವೇ ಆಗಲಿಲ್ಲ. ಏನಾದರಾಗಲಿ ಮುಂದುವರಿದು ಅವರೊಂದಿಗೆ ಮಾತನಾಡಿ ಅವರನ್ನು ತಿದ್ದುವುದು, ತಮ್ಮ ತಪ್ಪನ್ನು ಅವರು ಅರಿತುಕೊಳ್ಳುವಂತೆ ಮಾಡುವುದು ತನ್ನ ಸಾಮರ್ಥ್ಯಕ್ಕೆ ಮೀರಿದುದು ಎಂದವನು ಅರ್ಥ ಮಾಡಿಕೊಂಡ.

## 4

"ಅಮ್ಮಾ"

ಅವರು ಹೆತ್ತ ಮಕ್ಕಳ ಪೈಕಿ ರಮಣಿಯಮ್ಮಾಳ್ ಅವರನ್ನು ಅಮ್ಮಾ ಎಂದೂ ಸುಂದರಂ ಅವರನ್ನು ಅಪ್ಪಾ ಎಂದೂ ಕರೆಯುವುದು ವೇಣು ಒಬ್ಬನೇ. ಉಳಿದವರೆಲ್ಲಾ 'ಮಮ್ಮಿ' 'ಡ್ಯಾಡಿ' ಎಂದೇ.

ಮಹಡಿಯ ವರಾಂಡದಲ್ಲಿ ಬಂದು ನಿಂತು ವೇಣು "ಅಮ್ಮಾ" ಎಂದು ಕರೆದಾಗ, ರಮಣಿಯಮ್ಮಾಳ್ ಸಾವಕಾಶವಾಗಿ ಆರಾಮ ಕುರ್ಚಿಯಲ್ಲಿ ಕುಳಿತು 'ಜೂಲಿಯನ್ ಹಕ್ಸ್‌ಲಿ' ಬರೆದ ಪುಸ್ತಕವೊಂದನ್ನು ತೆರೆದು ಸ್ವಾರಸ್ಯವಾದ ಪ್ಯಾರಾ ಒಂದನ್ನು ಓದುತ್ತಿದ್ದರು.

ವೇಣು ಆ ಪುಸ್ತಕದ ಮೇಲ್ಭಾಗವನ್ನು ದೃಷ್ಟಿಸಿ ನೋಡಿ ಮನಸ್ಸಿನಲ್ಲಿ ಓದಿಕೊಂಡ:

'ನಾಲೆಡ್ಜ್, ಮೊರಾಲಿಟಿ ಅಂಡ್ ಡೆಸ್ಟಿನಿ.'

"ಅಮ್ಮಾ ನೀವು ಓದುತ್ತಿರುವುದಕ್ಕೆ ಅಡ್ಡಿಯುಂಟುಮಾಡಿದೆನೆ ?"

"ಛಿ, ಛಿ ಇದೇನು ಈ ಫಾರ್ಮಾಲಿಟಿ ? ಬಾ... ಇಲ್ಲಿ ಕುಳಿತುಕೋ..." ಎಂದರು ಅಕ್ಕರೆಯಿಂದ ರಮಣಿಯಮ್ಮಾಳ್.

ವೇಣು, ವರಾಂಡದಲ್ಲಿದ್ದ ಒಂದು ಕುರ್ಚಿಯನ್ನು ಎತ್ತಿ ತಂದು ಅದರ ಮೇಲೆ ಕುಳಿತ.

ಏನು ಮಾತನಾಡುವುದೆಂದೇ ಅವನಿಗೆ ತೋರಲಿಲ್ಲ. ರಮಣಿಯಮ್ಮಾಳ್ ಅವನನ್ನು ವಾತ್ಸಲ್ಯದಿಂದ, ತಮಗೆ ಇಷ್ಟು ದೊಡ್ಡ ಮಗನಿದ್ದಾನಲ್ಲ ಎಂಬುದನ್ನು ಇದ್ದಕ್ಕಿದ್ದಂತೆ ಅರಿತುಕೊಂಡ ಹೆಮ್ಮೆಯಿಂದ ನೋಡಿದರು.

ಅವನು ತಲೆಬಾಗಿಸಿ ಕೈ ಬೆರಳುಗಳ ಉಗುರು ತೆಗೆಯುತ್ತಾ ಏನೋ ಯೋಚಿಸುತ್ತಿದ್ದ:

ಇಷ್ಟು ದಿನಗಳ ನಂತರ ಅವನು ತನ್ನ ಮನಸ್ಸಿನಲ್ಲಿಟ್ಟುಕೊಂಡಿದ್ದ ಯಾವುದೋ ಒಂದು ಅಂತರಂಗವಾದ, ಪ್ರಶ್ನೆಯನ್ನು ಕುರಿತು ತನ್ನೊಡನೆ ಚರ್ಚಿಸುವುದಕ್ಕೋ ಸಲಹೆ ಕೇಳುವುದಕ್ಕೋ ಬಂದಿದ್ದಾನೆ ಎಂದು ಭಾವಿಸಿ ಅವರು ಒಂದು ರೀತಿ ಸಂತೋಷ ಗೊಂಡಿದ್ದರು.

ಏನೇ ಆಗಿರಲಿ, ಅವನು ಮಾತನಾಡುವುದಕ್ಕೆ ಹಿಂಜರಿಯುತ್ತಿದ್ದುದನ್ನು ಕಂಡು ಅವರೇ ಪ್ರಾರಂಭಿಸಿದರು :

" ಏನು ವೇಣು...ಇಲ್ಲಿ ನಿನಗೆ ಲೈಫ್ ತುಂಬಾ ಬೋರ್ ಆಗಿದೆಯೋ ? "

" ಉಂ..." ಎಂದು ತಲೆಯೆತ್ತಿ ನೋಡಿದ ವೇಣು, " ಬೋರ್ ಆಗುತ್ತಿದೆ ಯೆಂದಲ್ಲ...ನನಗೆ ಈ ಲೈಫ್ ಇಷ್ಟವಾಗಲಿಲ್ಲ...ಏನಾದರೂ ನಾನು ಮಾಫ್ಯೂಸಲ್ ಟೈಪ್ ತಾನೆ ? ನೀವೆಲ್ಲಾ ತುಂಬಾ ನಾಗರೀಕವಾಗಿ ಅಲ್ಲ, ನಾಗರೀಕವಾಗಿ—ಬಾಳುವ ರೀತಿ ನನಗೆ ಇಷ್ಟವೆನಿಸಲಿಲ್ಲ..." ಎಂದು ಹೇಳಿ ಮತ್ತೆ ತಲೆಬಾಗಿ ಬೆರಳಿನಿಂದ ಚಿತ್ರ ಬಿಡಿಸತೊಡಗಿದ.

ಸ್ವಲ್ಪ ಹೊತ್ತು ಮೌನದ ನಂತರ ರಮಣಿಯಮ್ಮಾಳ್ ಹೇಳಿದರು :

" ನಿನ್ನ ಆತಂಕವೇನೆಂದು ನನಗೆ ಸರಿಯಾಗಿ ಅರ್ಥವಾಗಲಿಲ್ಲ...ನಾವು ಇಷ್ಟು ವರ್ಷ ಹೇಗೆ ಬಾಳುತ್ತಿದ್ದೇವೋ ಹಾಗೆಯೇ ಇದ್ದೇವೆಂದು ನನ್ನ ನಂಬಿಕೆ. ಹೊಸದಾಗಿ ಹೊಂದಾ ಣಿಕೆಯಿಲ್ಲದ " ಅಲ್ಟ್ರಾ ನಾಗರೀಕತೆ ಯಾವುದೂ ತಲೆಯಿಟ್ಟಂತೆ ನನಗೆ ತೋರಲಿಲ್ಲ... ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳಿದರೆ ತಾನೆ ನನಗೆ ಅರ್ಥವಾಗುವುದು...? " ಎಂದು ಅವನಿಗೆ ಹೇಳುತ್ತಿದ್ದಂತೆ ' ಇವನ ಮನಸ್ಸಿನಲ್ಲಿ ಏನು ಚಿಂತೆ ? ' ಎಂದು ತಿಳಿದು ಕೊಳ್ಳಲು ಅವರೂ ಪ್ರಯಾಸಪಟ್ಟರು.

"ಇಲ್ಲಿಗೆ ಯಾಕೆ ಬಂದೆನಪ್ಪಾ ಎನಿಸುತ್ತಿದೆ ನನಗೆ...ಅನ್ಯರ ಮನೆಯಲ್ಲಿರುವಂತಿದೆ. ಇಲ್ಲಿಯ ರೀತಿ ನೀತಿಗಳು ನನಗೆ ಬಹಳ ಅನ್ಯವೆಂದು ಕಾಣಿಸುತ್ತಿವೆ...ನಿಮ್ಮ ಸಂಬಂಧ ಬಂಧನಗಳೆಲ್ಲಾ ತೋರಿಕೆಯಾಗಿವೆ. ನೀವು ತುಂಬ ಅಸಹಜವಾಗಿ ಜೀವನ ನಡೆಸು ತ್ತಿದ್ದೀರಿ. ನಾನು ಹಿಂತಿರುಗಿ ತಾತನ ಮನೆಗೆ ಹೋಗುವ ಯೋಚನೆಯಲ್ಲಿದ್ದೇನೆ...

ಅವನು ನಿಲ್ಲಿಸಿ ನಿಲ್ಲಿಸಿ ಸ್ಪಷ್ಟವಾಗಿ ಹೇಳಿದುದನ್ನು ಅವರೂ ಸಹನೆಯಿಂದ ಕೇಳಿಸಿ ಕೊಂಡರು.

ನಂತರ ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ಆಗ ಮಧ್ಯಾಹ್ನ—ಗಂಟೆ ಹನ್ನೊಂದು. ಮನೆಯಲ್ಲಿ ಗಲಭೆಯೇನೂ ಇರಲಿಲ್ಲ. ಕೆಳಗೆ ಅಡುಗೆಮನೆಯಲ್ಲಿ ಅಡುಗೆ ಯವಳೂ ನಿದ್ರೆ ಮಾಡುತ್ತಿದ್ದಳು. ಮನೆ ಬೀದಿ ಎಲ್ಲೆಡೆ ನೀರವವಾಗಿತ್ತು.

" ವೇಣು... ಥಟ್ಟನೆ ನಿನಗೆ ಇದೊಂದು ಸಮಸ್ಯೆಯಾಗಿಬಿಟ್ಟ ಕಾರಣವೇನು...? ತಾತನ ಮನೆಯ ಜೀವನಕ್ಕೂ ನಮ್ಮ ಮನೆಯ ವಾತಾವರಣಕ್ಕೂ ಬಹಳ ವ್ಯತ್ಯಾಸ ವಿರಬೇಕೆಂದು ನನಗೂ ಅರ್ಥವಾಗುತ್ತದೆ. ಆದರೆ ನಿನ್ನ ವಯಸ್ಸಿಗೆ ನ್ಯಾಯವಾಗಿ ಆ

ಜೀವನವೇ ' ಬೋರ್ ' ಎನಿಸಬೇಕು... ಸರಿ, ಅಭಿರುಚಿಯೆಂಬುದು ಅಭ್ಯಾಸಬಲದಿಂದ ಪಡೆಯುವ ಪದ್ಧತಿಯಲ್ಲವೆ ? ಆದರೆ ಇದು ನಿನ್ನ ಮನೆಯಲ್ಲವೆ ? ನಿನಗೆ ಇಷ್ಟವಾದ ರೀತಿ ನೀನು ಇಲ್ಲಿ ಜೀವನ ನಡೆಸಲು ಯಾರದಾದರೂ ಅಡ್ಡಿಯಿದೆಯೇನು ? ಏನಿದ್ದರೂ ಏನಿಲ್ಲದಿದ್ದರೂ ಇನ್ನೊಬ್ಬರ ಸ್ವಾತಂತ್ರ್ಯದಲ್ಲಿ ಮತ್ತೊಬ್ಬರು ಪ್ರವೇಶಿಸುವ ಅಧಿಕಾರ ತೋರುವ, ಶಿಷ್ಟತೆಯನ್ನು ಹೊರಿಸುವ ಹಕ್ಕು ನಮ್ಮ ಮನೆಯಲ್ಲಿ ಯಾರಿಗೂ ಇಲ್ಲ... ನಿನಗೆ ಜ್ಞಾಪಕವಿದೆಯೋ ಇಲ್ಲವೋ...? ನಿನ್ನ ತಾತ ಅಜ್ಜಿ ಇಲ್ಲಿಗೆ ಬಂದು ಹಿಂತಿರುಗಿದಾಗ ಅವರೊಂದಿಗೆ ಹೋಗಬೇಕೆಂದು ನೀನು ಹಠಹಿಡಿದೆ... ಅವರಿಗೂ ನಿನ್ನನ್ನು ಕರೆದುಕೊಂಡು ಹೋಗಿ ಸಾಕಿ ಪೋಷಿಸಬೇಕೆಂಬ ಆಸೆ... ನೀನು ಆಸೆಪಟ್ಟುದುದರಿಂದಲೇ ಮನಸಾರ ಕಳುಹಿಸಿಕೊಟ್ಟೆ... ಆ ಮಟ್ಟಕ್ಕೆ ಈ ಮನೆಯಲ್ಲಿ ಮಕ್ಕಳ ಸ್ವಾತಂತ್ರ್ಯಕ್ಕೂ ಸಹ ಎಂದಿಗೂ ಗೌರವವುಂಟು. ನಿನಗೆ ಇಲ್ಲಿ ನಿನ್ನ ಇಷ್ಟದಂತೆ ಇರಲು ಏನು ಅಡ್ಡಿ...? ಉಂ... ಹೇಳು ವೇಣು " ಎಂದು ಅವನ ಮುಖವನ್ನು ನೋಡಿದಾಗ ಅವನು ಮೌನವಾಗಿ ಅವರನ್ನೇ ದೃಷ್ಟಿಸಿ ನೋಡಿದ.

" ಆದುದರಿಂದ ನೀನು ಊರಿಗೆ ಹಿಂತಿರುಗಿ ಹೋಗುತ್ತೇನೆಂದು ಹೇಳುವುದಕ್ಕೆ ಬೇರೇನೋ ಕಾರಣವಿರಬೇಕೆಂದು ನನಗೆ ತೋರುತ್ತೆ... ಏನು, ಹೌದೇನು ? " ಎಂದು ಮಂದಹಾಸದಿಂದ ರಮಣಿಯಮ್ಮಾಳ್ ಕೇಳಿದರು.

"ಹೌದು... ಬೇರೆ ಕಾರಣವಿದೆ..." ಎಂದು ಹೇಳಿ ತನ್ನ ಮನಸ್ಸಿನಲ್ಲಿ ಸೇರಿ ಕೊರೆಯುತ್ತಿದ್ದ ತನ್ನ ತಂದೆಯ ಬಗ್ಗೆ ಸತ್ಯ ವಿಚಾರಗಳನ್ನು ಹೇಳಲು ಪದಗಳು ಸಿಕ್ಕದೆ ಅವನು ತೊಳಲಾಡಿದ.

" ವೇಣು... ಅದಲ್ಲದೆ ನೀನು ಇನ್ನೂ ಏನೇನೋ ಹೇಳುತ್ತೀಯಲ್ಲಾ! ಈ ಜೀವನ ಏನೋ ತೋರಿಕೆ, ಅಸಹಜ ಎಂದು ಹೇಳಿದೆ...ವಿಷಯವೇನು ? ನೀನು ನಮ್ಮ ಬಗ್ಗೆ ಹೀಗೆ ಅವಸರಪಟ್ಟು ಒಂದು ತೀರ್ಮಾನಕ್ಕೆ ಬಂದೆ... ನೀನು ಯಾವುದನ್ನು ತೋರಿಕೆಯೆಂದು ಭಾವಿಸುವೆ! ಎಲ್ಲಾ ಜೀವನದಲ್ಲೂ ಯಾವುದಾದರೂ ಒಂದು ಮಟ್ಟಕ್ಕೆ ಯಾವುದಾದರೊಂದು ತೋರಿಕೆ ಇದ್ದೇ ಇರುತ್ತದೆ. ವೇಣು... ನೀನು ಯಾವುದನ್ನು ಕುರಿತು ಹೇಳುತ್ತಿರುವೆ ? ನಿನ್ನ ಮನಸ್ಸು ಬಹಳ ಆಘಾತಗೊಂಡು ಇಂತಹ ಮಾತು ನಿನ್ನ ಬಾಯಿಂದ ಬರುತ್ತಿದೆಯೆಂದು ನನಗನಿಸುತ್ತದೆ... ಏನು ನಡೆಯಿತು ಹೇಳು...

ಈಗ ಅವನು ಪರಟು ಜೇಬಿನಿಂದ ಕರ್ಚೀಫ್ ತೆಗೆದು ಕಣ್ಣು ಮೂಗುಗಳನ್ನು ಚೆನ್ನಾಗಿ ಒರೆಸಿಕೊಂಡ. ಮುಖ ಕೆಂಪೇರಿ ತಳಮಳಗೊಂಡಿತ್ತು.

" ಅಮ್ಮಾ... ನನಗೆ ತಂದೆಯವರ ನಡತೆ ಹಿಡಿಸಲಿಲ್ಲ..." ಎಂದು ಆಕಾಶವನ್ನೇ ಹರಿದವನಂತೆ ಮುಖ ತಿರುಗಿಸಿಕೊಂಡು ಹೇಳಿದ. ಅವರು ಏನೂ ಉತ್ತರ ಕೊಡಲಿಲ್ಲ. ಆ ಧೈರ್ಯದಿಂದ, ಅವರ ಮುಖವನ್ನು ನೋಡದೆ ಮುಂದುವರಿಸಿದ :

"ನಿಮಗೂ ಅವರಿಗೂ ಮನಸ್ತಾಪ ಬರುತ್ತದೆ, ನಿಮ್ಮ ಕುಟುಂಬದಲ್ಲಿ ಶಾಂತಿ ನನ್ನಿಂದ ಕೆಟ್ಟುಹೋದೀತೆಂದು ನೆನಸಿಯೇ ನಾನು ಇಷ್ಟು ದಿನ ಸಂಕಟಪಡುತ್ತಿದ್ದೆ. ಕೆಟ್ಟುಹೋಗುವ ಒಂದು ಕುಟುಂಬದಲ್ಲಿ ಶಾಂತಿ ಕೆಡದಿರುವುದಕ್ಕೆ ಎಷ್ಟು ಕಾಲವಾದರೂ ಹಿಡಿಸೀತೇನು? ಅವರು ನಿಮಗೆ ದ್ರೋಹವೆಸಗುತ್ತಿದ್ದಾರೆ. ಇದು ನಿಮಗೆ ಗೊತ್ತಿದ್ದೂ ನಾನು ನಿಮ್ಮಲ್ಲಿ ಮರೆಮಾಚಿದರೆ ಆ ದ್ರೋಹಕ್ಕೆ ನಾನೂ ಒಳಗಾದವನೇ ಎಂದರ್ಥ... ಆದುದರಿಂದಲೇ ಈ ಅಪಮಾನಕರವಾದ ಕುಟುಂಬದಲ್ಲಿ ಇರುವುದು ನನಗೆ ಹಿಡಿಸಲಿಲ್ಲ.... ಅವರನ್ನು ನಾನು ತಿದ್ದಬಲ್ಲೆನೆ...? ಆದರೆ ನೀವು ಸರಿಪಡಿಸಿ... ಇದು ನಿಮಗೆ ಸೇರಿದ ವಿಚಾರ... ನಾನು ಹೋಗುತ್ತೇನೆ" ಎಂದು ಸರಸರನೆ ಹೇಳಿ ಇನ್ನು ತಾಯಿಯ ಮುಖವನ್ನು ನೋಡುವುದಕ್ಕೆ ಕೂಡ ಧೈರ್ಯವಿಲ್ಲದೆ ಅವನು ಅಲ್ಲಿಂದ ಓಡಿಹೋಗಬೇಕೆಂದುಕೊಂಡ.

ಅವನ ಮನಸ್ಸಿನಲ್ಲಿ, 'ಅವರು ಅಳುವರೋ ಅಳುತ್ತಲೇ ಅವರ ಬಗ್ಗೆ ಕೂಲಂಕಷ ವಾಗಿ ಏನಾದರೂ ಕೇಳುವರೋ, ಅವಸರಪಟ್ಟು ಆ ದ್ರೋಹವೆಸಗಿದ ಪತಿಯನ್ನು ಶಪಿಸುವರೋ, ತಾನು ಬಹಳ ಕಾಲ ಸಂದೇಹಪಟ್ಟು ಮನಸ್ಸಿನಲ್ಲೇ ಇಟ್ಟುಕೊಂಡು ಚಿಂತೆಪಡುತ್ತಾ ಮಾನಕ್ಕಾಗಿ ಅಂಜಿ ಮರೆಮಾಚಿಟ್ಟಿದ್ದ ವಿಚಾರ ಮಗನಿಗೂ ತಿಳಿದು ಹೋಯಿತಲ್ಲಾ ಎಂದು ಅವಮಾನದಿಂದ ಕಂದಿಹೋಗುವರೋ?'—ಈ ರೀತಿ ಅಂಜಿ ತಪ್ಪು ಮಾಡಿದವನಂತೆ ಅವನು ಅಲ್ಲಿಂದ ತಪ್ಪಿಸಿಕೊಂಡು ಓಡಲು ಯತ್ನಿಸಿದ.

"ವೇಣು" ಎಂದು ಶಾಂತಿಯಿಂದ ಭಾವುಕತನದಿಂದ ಭಾರವಾದ ಕರೆ ಅವನನ್ನು ತಡೆಯಿತು.

ಅವರ ಮುಖದಲ್ಲಿ ಅವನು ನಿರೀಕ್ಷಿಸಿದ ಯಾವ ಪ್ರತಿಕ್ರಿಯೆಯೂ ಇಲ್ಲದೆ ಅವಳು ಕರುಣಾಪೂರ್ಣವಾಗಿ ಮಂದಹಾಸ ಬೀರಿ "ಕುಳಿತುಕೋ" ಎಂದು ಹೇಳಲಾಗಿ ಕುರ್ಚಿಯಿಂದೆದ್ದ ವೇಣು ಮತ್ತೆ ಕುಳಿತುಕೊಂಡ.

"ನೀನು ಏನೋ ನಿನ್ನ ಬಾಳಿನ ವಿಚಾರ ಮಾತನಾಡುವೆಯೆಂದುಕೊಂಡೆ. ನಿನ್ನ ತಂದೆ ಯವರನ್ನು ಕುರಿತಾದ ಪ್ರಶ್ನೆಯಿದು... ಚೆನ್ನಾಗಿದೆ" ಎಂದು ಅವರು ಮೆಲ್ಲನೆ ನಕ್ಕರು.

"ಹಾಗಾದರೆ ನಿಮಗೆ ಈಗಾಗಲೇ ಆ ಬಗ್ಗೆ ಎಲ್ಲಾ ಗೊತ್ತೇನು?" ಎಂದು ಅವನು ಗೊಣಗಿದ.

"ನಾನು ಆ ಬಗ್ಗೆ ತಿಳಿಯಲು ಬಯಸಲಿಲ್ಲ, ವೇಣು..." ಎಂದು ಆಳವಾದ ಚಿಂತ ನೆಯ ಧ್ವನಿಯಲ್ಲಿ ಹೇಳಿದರು.

ಮತ್ತೆ ಮುಂದುವರಿಸಿದರು :

"ನೋಡು, ಅವರು ನಿನ್ನ ತಂದೆಯೆಂಬುದು ಎಷ್ಟು ಸತ್ಯವೋ—ನನ್ನ ಪತಿಯೆಂಬುದು ಎಷ್ಟು ಸತ್ಯವೋ—ಅಷ್ಟೇ ಸತ್ಯವಾದುದು ಅವರು ಪ್ರೊಫೆಸರಾಗಿರುವುದು. ಅವರು ತಿಳಿವಳಿಕಸ್ತರು, ವಿದ್ವಾಂಸರು, ಸಮಾಜದಲ್ಲಿ ಅಂತಸ್ತುಳ್ಳವರು ಅಲ್ಲವೆ?"

ಅವನೇನೂ ಉತ್ತರ ಕೊಡಲಿಲ್ಲ.

ಅವರು ಇನ್ನೂ ಹೇಳಿದರು :

"ನೀನು ಯಾವು ಯಾವುದಕ್ಕೆಲ್ಲಾ ನಿನ್ನ ತಂದೆಯವರ ಬಗ್ಗೆ ಹೆಮ್ಮೆಪಡಬಹುದೋ ಅವನ್ನೆಲ್ಲಾ ಬಿಟ್ಟು ಯಾವುದರ ಬಗ್ಗೆ ನಿನಗೆ ಪೂರ್ಣವಾಗಿ ತಿಳಿಯದೋ, ಯಾವುದು ಬಹು ಅಂತರಂಗ ವಿಷಯವೋ ಅದನ್ನು ಕುರಿತು ಆಳವಾಗಿ ಯೋಚಿಸಿ ವ್ಯಥೆಪಡುವುದು, ಅಪಮಾನವೆಂದು ಭಾವಿಸುವುದು ನಿನಗೆ ಸರಿಯೆನಿಸುವುದೆ ?"

ಅವನಿಗೆ ರೋಷವುಕ್ಕಿ ಬಂದು ಹೇಳಿದ :

"ಪೂರ್ಣವಾಗಿ ತಿಳಿದುಕೊಂಡೆ ನಾನು ಮಾತನಾಡುತ್ತಿದ್ದೇನಮ್ಮಾ. ಐ. ಹ್ಯಾವ್ ಪ್ರೂಫ್ಸ್! ನಾನು ನಿರೂಪಿಸಿ ತೋರಿಸಬಲ್ಲೆ... ಅವರಿಗೆ ಬಂದಿದ್ದ ಟೆಲಿಫೋನ್... ಅವರು ಮಾತನಾಡಿದುದನ್ನು ನಾನು ಸ್ವತಃ ಕೇಳಿದೆ... ಆದಿನ ರಾತ್ರಿ ಥಿಯೇಟರಿನಲ್ಲಿ ಅದೇ ಕೆಲಸವಾಗಿ ಹೋಗಿ ಇದೇ ಕಣ್ಣುಗಳಿಂದ ನೋಡಿದೆ...ಅವರ ಕೋಣೆಯಲ್ಲಿದ್ದ ಡ್ರಾಯರಿನಲ್ಲಿ ಅವರಿಗೆ ಬಂದಿರುವ ಪ್ರಣಯ ಪತ್ರಗಳ ಫೈಲೇ ಒಂದು ಇದೆಯಲ್ಲ. ಅವರ ಮುಖದ ಮೇಲೆ ಅದನ್ನು ಬಿಸಾಡಿದಾಗ ಅದನ್ನು ನಿರಾಕರಿಸಲು ಅವರಿಗಾಗಲಿಲ್ಲ... ಅಮ್ಮಾ."

"ಓಹ್! ಇಟ್ ಈಸ್ ಎ ಷೇಮ್ ಆನ್ ಯು! ಪ್ರೂಫ್ಸ್ ಇದೆಯಂತೆ ಪ್ರೂಫ್ಸ್! ವೇಣು, ಹಿರಿಯಂತಸ್ತಿನವರನ್ನೂ ಪ್ರಾಬಲ್ಯವುಳ್ಳವರನ್ನೂ ಆಕ್ಷೇಪಿಸುವುದೇ ವೃತ್ತಿಯೆಂದುಕೊಂಡ ಪೀತ ಪತ್ರಿಕೆಗಳಿವೆಯಲ್ಲಾ..., ಅವರಲ್ಲಿಯೂ ಅದಕ್ಕೆಲ್ಲಾ ಪ್ರೂಫ್ ಇರುತ್ತದೆ. ಪ್ರೂಫ್ ಇಲ್ಲವೆಂದರೆ ಅದು 'ಪೀತಪತ್ರಿಕೆ'ಯೆಂದು ಗೌರವಸ್ಥರು ತಳ್ಳಿ ಹಾಕುವರೇನು ? ಅದು ಒಬ್ಬರ ಹಿರಿತನ, ಸಾಮರ್ಥ್ಯ ಎಲ್ಲವನ್ನೂ ಬಿಟ್ಟು ಅವರ ಆಂತರಂಗಿಕ ಬಲಹೀನತೆಯನ್ನು ಕುರಿತು ಪ್ರಕಟಿಸುವುದನ್ನು ವೃತ್ತಿಯಾಗಿಟ್ಟುಕೊಂಡಿರುವುದರಿಂದ ಸಮಾಜಕ್ಕಾಗಲೀ ನಾಗರೀಕತೆಗಾಗಲಿ ಕೇಡೇ ಹೊರತು. ಯಾವ ಲಾಭವೂ ಇಲ್ಲ. ಆದುದರಿಂದ ನಾವು ಪೀತಪತ್ರಿಕೆಗಳನ್ನು ಕಂಡರೆ ಜಿಗುಪ್ಸೆಯಿಂದ ದೂರ ಬಿಸಾಡುತ್ತೇವೆ. ಈಗ ನೀನು ಮಾಡಿರುವ ಕೆಲಸಕ್ಕೂ ಅದಕ್ಕೂ ಏನು ವ್ಯತ್ಯಾಸ ಹೇಳು. ನೀನೂ ಅವರಂತೆಯೇ 'ಪ್ರೂಫ್' ಇದೆ ಎನ್ನುತ್ತೀಯೆ...ವೇಣು...ನಿನ್ನ ಬಗ್ಗೆ ನನಗೆ ಬಹಳ ವ್ಯಥೆಯೆನಿಸುತ್ತಿದೆ... ಷೇಮ್, ಇಟ್ ಈಸ್ ಎ ಷೇಮ್ ಆನ್ ಯು!" ಎಂದು ರಮಣಿಯಮ್ಮಾಳ್ ಕಿವಿಗಳನ್ನು ಮುಚ್ಚಿಕೊಂಡರು.

"ನೀನು ನಿಜವಾಗಿ ಹೀಗೆಲ್ಲಾ ಮಾಡಿದೆಯಾ... ? ವೇಣು...ಅಷ್ಟು ಹಿರಿಯರನ್ನು ಎಷ್ಟು ಸಣ್ಣವರನ್ನಾಗಿ ಮಾಡಿಬಿಟ್ಟೆ" ಎಂದು ಹೇಳಿದಾಗ ಮನಮೈಗಳೆರಡೂ ಕಂಪಿಸಿದುವು.

'ಇವರೆಂತಹವರು ! ಎಂತಹ ಪತ್ನಿ? ' ಎಂದು ಅರ್ಥವಾಗದೆ ತೊಳಲಿದ ವೇಣು.

"ಅಮ್ಮಾ—ನಿಮ್ಮ ಒಳ್ಳೆಯದಕ್ಕಾಗಿ. ಈ ಕುಟುಂಬದ ಗೌರವಕ್ಕಾಗಿ, ತಪ್ಪೆಂದು ತಿಳಿದೂ ನಾನು ಅವರ ವಿಚಾರವಾಗಿ ಹಾಗೆ ನಡೆದುಕೊಂಡೆ..." ಎಂದು ಹೇಳಿ ಅವರ ಸ್ಥಿತಿಯನ್ನು ಕಂಡು ಸಮಾಧಾನಪಡಿಸಲು ಯತ್ನಿಸಿದ.

"ವೇಣು...ನನಗೆ ಬಹಳ ವ್ಯಥೆಯಾಗಿದೆಯಪ್ಪಾ... ಅವರನ್ನು ಕುರಿತಾಗಿ ಅಲ್ಲ... ನಿನ್ನನ್ನು ಕಂಡು ನನಗೆ ಬಹಳ ವ್ಯಥೆಯಾಗಿದೆಯಪ್ಪಾ...ನೀನು ಹಾಗೆ ವರ್ತಿಸಬಹುದೆ? ಓರ್ವ ತಂದೆಗು ಬಳಿ ಒಬ್ಬ ಮಗ...ಅಯ್ಯೊ ಕಲ್ಪಿಸಿಕೊಳ್ಳಲೂ ಕಷ್ಟವಾಗಿದೆ ವೇಣು !"

"ಅವರು ನಿಮಗ ದ್ರೋಹ ಮಾಡುತ್ತಿದ್ದಾರೆಂದು ತಿಳಿದೂ..."

"ಇಟ್ ಈಸ್ ಮೈ ಪ್ರಾಬ್ಲಂ!" ಎಂದು ಮಧ್ಯೆ ತಡೆದು ಹೇಳಿದರು : "ಅದು ನನಗೆ ಸಂಬಂಧಿಸಿದ ವಿಷಯ... ನಿನಗೆ ನಮ್ಮ ದಾಂಪತ್ಯ ಕುರಿತಾಗಿ ತಲೆಯಿಡಲು ಏನು ಹಕ್ಕಿದೆ ? ಎಂದು ಜಿಗುಪ್ಸೆಯಿಂದ ಅಲುಗಾಡಿದರು.

"ಹೇಳುತ್ತೇನೆ ಕೇಳು : ನಾವು ಇಪ್ಪತ್ತೈದು ವರ್ಷ ಶಾಂತಿ ಸಮಾಧಾನಗಳಿಂದ ಜೀವನ ನಡೆಸಿದ್ದೇವೆ. ಅಂತ್ಯ ಕಾಲದವರೆಗೆ ಹಾಗೆಯೇ ಬಾಳುತ್ತೇವೆ...ಆದ್ದರಿಂದ ಆ ಶಾಂತಿಯನ್ನು—ಆ ಸಂತೋಷವನ್ನು ಕೆಡಿಸಿಕೊಳ್ಳುವ ಯಾವ ವಿಚಾರಕ್ಕೂ ನಾನು ಒಳಗಾಗುವುದಿಲ್ಲ...ನನಗೂ ಸ್ವಲ್ಪ ಸ್ವಲ್ಪವಾಗಿ ಗೊತ್ತಿದೆ... ಅದರಿಂದೇನಾಯಿತು...? ನನಗಿಂತ ಅವರಿಗೆ ಪ್ರೀತಿ ಪೂರ್ವಕವಾದ ಜತೆ ಯಾರೂ ಇರಲಾರರು... ನೀನು ಹೇಳುತ್ತೀಯಲ್ಲ, ಆ ಬಗ್ಗೆ ನನಗೆ ಮನಸ್ಸಿನಲ್ಲಿ ಆಳವಾದ ಚಿಂತೆಯಿದೆ." ಇದನ್ನು ಹೇಳುವಾಗ ಎಷ್ಟು ಅಡಗಿಸಿಟ್ಟು ಕೊಂಡರೂ ಅಡಗದೆ, ಅವರ ಹೃದಯದಲ್ಲಿ ಕಲ್ಲಾಗಿ ರಹಸ್ಯವಾಗಿ, ಭಾರವಾಗಿ ಬೇರೂರಿದ್ದ ಒಂದು ಗುಟ್ಟು ಕರಗಿಹೋಯಿತು...ನಯನಗಳಲ್ಲಿ ಅಶ್ರುಧಾರೆಯುಂಟಾಯಿತು ಕನ್ನಡಕವನ್ನು ತೆಗೆದು ಒರೆಸಿಕೊಂಡು ಅಲ್ಲಿಂದ ಎದ್ದು ಹೋಗಿ ವರಾಂಡದಲ್ಲಿ ಒಂದು ನಿಮಿಷ ನಿಂತು ತಮ್ಮನ್ನು ತಾನು ಸಮಾಧಾನಪಡಿಸಿ ಕೊಂಡು ಮತ್ತೆ ಮಗನ ಮುಂದೆಯೇ ಬಂದು ಕುಳಿತರು.

"ವೇಣು ನೀನು ಅಭಿಪ್ರಾಯಪಟ್ಟಿರುವಂತೆ ಜೀವನ ಅಷ್ಟು 'ಸಿಂಪಲ್' ಅಲ್ಲಪ್ಪ... ಅದು ತುಂಬಾ ಜಟಿಲವಾದುದು, ಗೊಂದಲಮಯವಾದುದು. ಆ ಜಟಿಲತೆಯಲ್ಲೂ ಆ ಗೊಂದಲದಲ್ಲಿಯೂ ಒಂದು ಕುಟುಂಬವನ್ನು ಹೇಗೆ ಶಾಂತಿಯಿಂದ ಸಂತೋಷದಿಂದ ನಡೆಸುವುದು ಎಂಬುದೇ ಜೀವನ ಕಲೆ... ಸಹನೆ ತಾಳ್ಮೆ ಇಲ್ಲದಿದ್ದರೆ—ಪ್ರೀತಿ ಪ್ರೇಮ ಎಂಬುದಕ್ಕೆಲ್ಲಾ ಅರ್ಥವೇ ಇಲ್ಲ. ನಿನ್ನಂತೆ ನಾನು ವರ್ತಿಸಿದ್ದರೆ ಈ ಸಂಸಾರದ ಶಾಂತಿ, ಅವರ ಗೌರವ ಸರ್ವನಾಶವಾಗಲು ನಾನೇ ಕಾರಣವಾಗಿರುತ್ತಿದ್ದೆ... ನನ್ನ 'ಪೊಸಸಿವ್ ನೆಸ್'ನಿಂದ...ನನ್ನ ಅಂಕೆಯಲ್ಲಿ ಅವರಿರಬೇಕು ಎಂಬುದಕ್ಕಾಗಿ ಈ ಕುಟುಂಬದ ಶಾಂತಿ, ಅವರ ಗೌರವ, ನನ್ನ ಮಕ್ಕಳ ಭವಿಷ್ಯವನ್ನು ಬಲಿಕೊಡುವಷ್ಟಕ್ಕೆ ನಾನು ಸ್ವಾರ್ಥಪರ ಳಾಗುವುದು ಎಷ್ಟು ಹೀನಾಯ... ಹೀಗೆಲ್ಲಾ ಹೇಳುವುದನ್ನು ಕೇಳಿ ನಾನು ಯಾವುದೋ ರಹಸ್ಯವಾದ ಶೋಕವನ್ನು ಅನುಭವಿಸುತ್ತಾ ಬಾಳುತ್ತಿದ್ದೇನೆಂದು ನೀನು ಕಲ್ಪಿಸಿಕೊಳ್ಳ-

ಬೇಡ. ಆದರೆ, ನನ್ನ ಮನಸ್ಸಿನಲ್ಲಿ ಒಂದು ಸಣ್ಣ ಚಿಂತೆ ಇದ್ದೇ ಇದೆ. ಸಂಪೂರ್ಣ ಆನಂದ ವೆಂಬುದು ಅಷ್ಟು ಸುಲಭ ಸಾಧ್ಯವೇನು...? ಮಾತನಾಡಲು ನನಗೆ ಹಕ್ಕಿದೆಯೇ ಇಲ್ಲವೇ ಎಂಬ ಪ್ರಶ್ನೆಯೇ ಇಲ್ಲ... ಆದರೆ ಅದರಿಂದ ಫಲವೇನೆಂದು ಯೋಚಿಸ ಬಾರದೆ ? ಈಗಾದ ನಷ್ಟವೇನೆಂದು ನಾನು ಯೋಚನೆ ಮಾಡಿದೆ ..ನಾನು ಆ ಬಗ್ಗೆ ಮಾತನಾಡದಿದ್ದುದು ಒಂದು ಸಂಸ್ಕಾರದಿಂದ, ವೇಣು... ಹೌದು. ನಾವು ಒಬ್ಬರನ್ನು ಗೌರವಿಸುತ್ತೇವೆಂಬುದರ ಅರ್ಥವೇನು ? ಅವರ ಅಂತರಂಗವನ್ನು—ಪ್ರೈವೆಸಿಯನ್ನು—ತಿಳಿಯಲು ಬಲಾತ್ಕಾರವಾಗಿ ಪ್ರಯತ್ನಪಡದಿರುವುದು. ಒಬ್ಬರ ಬಗ್ಗೆ ಪ್ರೀತಿಯಿಡುವು ದೆಂದರೇನು ? ಅಂತರಂಗವಾದ ಬಲಹೀನತೆಯನ್ನು ನಮಗೆ ಗೊತ್ತಾಗಿದ್ದರೂ ಅವ ರಲ್ಲಿರುವ ಉಳಿದ ಯೋಗ್ಯತೆ ಹಿರಿತನಗಳನ್ನ ಚೆದುರಿಸದೆ, ಆ ಬಲಹೀನವೂ ಅವುಗಳಲ್ಲಿ ಸೇರಿಯೇ ಅವರಾಗಿದ್ದಾರೆ ಎಂದು ನಾವು ತಿಳಿಯಬೇಕು...

"ಓಹ್ ಒಬ್ಬರ ಅಂತರಂಗ ಎಷ್ಟು ಪುನೀತವಾದುದು! ಇಟ್ ಈಸ್ ಸಂಥಿಂಗ್ ಸೇಕ್ರೆಡ್ ವೇಣು. ಇದರಲ್ಲಿ ಎರಡನೆಯವರ ಪ್ರವೇಶ—ಅದು ಯಾರೇ ಆಗಿರಲಿ—ಕಾಡು ಮನುಷ್ಯನ ನಾಗರೀಕತೆಯೇ ಸರಿ...ಅಸಹ್ಯವಾದುದು."

"ಅಮ್ಮಾ—ನೀವು ಅವರ ಪತ್ನಿ."

"ಸೋ ವಾಟ್ ? ಆ ಹಕ್ಕನ್ನು ನಾನು ದುರುಪಯೋಗ ಮಾಡಿದರೆ ಆ ಹಕ್ಕೇ ನನಗಿಲ್ಲವಾದೀತಲ್ಲವೆ ? "

"ನಿಮ್ಮ ವಿಷಯದಲ್ಲಿ ಅವರೂ ಹಾಗೆಯೇ ಇರುತ್ತಾರೇನು ? "

"ಇರುತ್ತಾರೆಂದು ಕೇಳಿದೆಯಾ ? ಹೌದು. ಇದ್ದಾರೆ... ಗಂಡ ತನ್ನ ಪತ್ನಿಯನ್ನೋ, ಪತ್ನಿ ತನ್ನ ಪತಿಯನ್ನೋ ಸಂದೇಹಿಸಲು ಪರಸ್ಪರ ಅಂತರಂಗ ವಿಚಾರಗಳನ್ನು ಎಲ್ಲೆ ಮೀರಿ ಹುಡುಕಾಡುವ ಕಾರಣವಿಲ್ಲ. ಒಂದೇ ಒಂದು ಕಾರಣ. ಅವರು ತಮಗೆ ಆ ಹಕ್ಕು ಇದೆಯೇ ಎಂದು ಅರ್ಥ ಮಾಡಿಕೊಳ್ಳಬೇಕು...

"ಪತಿ, ಪತ್ನಿ, ಪುತ್ರ. ಮಾತೆ, ಪಿತೃ ಎಲ್ಲರೂ ಒಂದು ಸಂಬಂಧಕ್ಕೆ ಒಳಗಾದವರು—ಆದರೆ ಒಬ್ಬೊಬ್ಬರೂ—ಒಂದು—ಸಪರೇಟ್ ಇಂಡಿವಿಜುಯಲ್—ಒಂದು ಪ್ರತ್ಯೇಕ ಯೂನಿಟ್ ಅಲ್ಲವ ? ಪ್ರತಿಪ್ರತ್ಯೇಕ ವ್ಯಕ್ತಿಗೂ ಪ್ರತ್ಯೇಕ ಅಂತರಂಗವೆಂಬುದಿದೆ. ಅದನ್ನು ಗೌರವಿಸಬೇಕು ವೇಣು... ಯಾರ ಮೇಲೆ ನಮಗೆ ಬಹಳ ಗೌರವವೋ ಅವರ ಅಂತರಂಗ ವನ್ನು ನಾವು ಬಹಳ ಜಾಗರೂಕತೆಯಿಂದ ಗೌರವಿಸಬೇಕು...ನಿನ್ನ ತಂದೆಯವರ ಬಗ್ಗೆ ನೀನು ಏನೆಂದು ಭಾವಿಸಿರುವೆ...? ನನ್ನನ್ನು ನೀನು ಕೇಳಿದಂತೆ ಅವರನ್ನು ಕೇಳಲಾದೀತೆ ? ಕಲ್ಪನೆ ಮಾಡುವ ಶಕ್ತಿ ಕೂಡ ನನಗಿಲ್ಲವಪ್ಪ...ಓಹ್ ನೀನೇನು ಮಾಡಿಬಿಟ್ಟೆ?

"ಪರವಾಗಿಲ್ಲ. ನಿನ್ನ ತಂದೆ ತುಂಬಾ ಸ್ಟ್ರಾಂಗ್ ಮ್ಯಾನ್. ಇದನ್ನು ಸೈರಿಸುವರು. ಅವರು ತಮ್ಮ ಬಲಹೀನತೆಗಳನ್ನೂ ದಾಟಿ ಬರಬಲ್ಲರು... ನಿಶ್ಚಯವಾಗಿಯೂ ದಾಟಿ ಬರುತ್ತಾರೆ... ಜೀವನ ಬಹಳ ಜಟಿಲವಾದುದು, ವೇಣು. ಅದನ್ನು ಅರ್ಥಮಾಡಿಕೊಳ್ಳ

ಬೇಕು. ಈ ಪುಸ್ತಕವನ್ನು ಓದಿ ನೋಡು—ನಿನಗೆ ಇಂತಹ ಚಿಂತನೆ ವಿಶಾಲ ದೃಷ್ಟಿಯನ್ನುಂಟುಮಾಡಿಕೊಡುತ್ತದೆ."

ವೇಣುವಿಗೆ ವಿಪರೀತ ಗೊಂದಲವೆನಿಸಿತು.

ಅವನ ಮನಸ್ಸಿನಲ್ಲಿ ತಾತ ಅಜ್ಜಿ ಮಾತ್ರ ಆದರ್ಶ ದಂಪತಿಗಳಾಗಿ ತೋರಿದರು.

ಅವನಿಗೆ ಅರ್ಥವಾಗಲೇ ಇಲ್ಲ: 'ಅವರು ತಾತ ಅಜ್ಜಿಯಾಗಿ ವಿವಾಹವಾಗಲಿಲ್ಲ. ತಾತ ಅಜ್ಜಿಯಾಗಿ ದಾಂಪತ್ಯ ನಡೆಸಲಿಲ್ಲ, ಹೇಗೆ ?

## 5

ಕೆಲವು ದಿನಗಳ ನಂತರ ಒಂದು ಸಾಯಂಕಾಲ. ಕಾಲೇಜಿನಿಂದ ಹಿಂತಿರುಗಿದ ಸುಂದರಂ ಉಡುಪು ಬದಲಾಯಿಸುತ್ತಿದ್ದಾಗ, ಎರಡು ದಿನಗಳ ಹಿಂದೆ ಹೇಳದೆ ಕೇಳದೆ ಮನೆ ಬಿಟ್ಟು ಹೋದ ವೇಣುವಿನಿಂದ ಬಂದ ಕಾಗದವನ್ನು ರಮಣಿಯಮ್ಮಾಳ್ ತಂದು ಕೊಟ್ಟರು. ಅದರಲ್ಲಿ ಮುಖ್ಯವಾದ ಕಡೆಯ ವಾಕ್ಯಗಳಿವು: "ನಾನು ತಾತನ ಮೊಮ್ಮಗನಾಗಿ ಇರಲು ಮಾತ್ರ ಯೋಗ್ಯ. ಬಂದುಬಿಟ್ಟೆ. ನಿಮ್ಮ ಜೀವನ ರೀತಿಯನ್ನು ಅರಿಯದೆ ತಪ್ಪು ಮಾಡಿದ್ದರೆ ಮನ್ನಿಸಿ;

— ಇಂತು ತಮ್ಮವ,
"ವೇಣು"

ಕಾಗದವನ್ನು ಓದಿ ಮುಗಿಸಿ ಅವರಿಬ್ಬರೂ ಪರಸ್ಪರ ಅರ್ಥಪೂರ್ಣವಾಗಿ ದೃಷ್ಟಿಸಿ ನೋಡಿಕೊಂಡರು...

"ಸಂಪ್ರದಾಯವಾದಿಗಳೆಂಬುವರು 70 ವರ್ಷಗಳ ನಂತರದವರಾಗಿರಬೇಕೆಂಬುದೇನೂ ಇಲ್ಲ. 20 ವರ್ಷ ವಯಸ್ಸಿನಲ್ಲೂ ಇರಬಹುದು..." ಎಂದು ಅವರು ನಕ್ಕು ಹೇಳಿದರು.

ರಮಣಿಯಮ್ಮಾಳ್ ಸ್ವಲ್ಪ ಹೊತ್ತು ಅವರ ಮುಖವನ್ನು ನೆಟ್ಟ ದೃಷ್ಟಿಯಿಂದ ನೋಡಿದರು... ಅವರ ಕಣ್ಣುಗಳಲ್ಲಿ ಕೆಂಪಡರಿ ಅಶ್ರುಬಿಂದುಗಳು ಮೂಡಿದುವು...

ಅವರು ತಮ್ಮ ಆಳವಾದ ಸಂಕಟವನ್ನು ಮಂದಹಾಸವನ್ನಾಗಿ ಮಾರ್ಪಡಿಸಿ ಪತಿಯನ್ನು ಕೇಳಿದರು: "ಇನ್ನೂ...ನೀವು...ನೀವು..." ಎಂದು ಕಂಪಿಸಿದ ಅವರ ತುಟಿಗಳು ತಮ್ಮ ಕೆನ್ನೆಗಳಿಗೆ ತಾಕುವಂತೆ ಆಲಂಗಿಸಿಕೊಂಡರು ಸುಂದರಂ.

— ಆ ನಂತರ ನಡೆದುದು ಅವರ ಅಂತರಂಗ ವ್ಯವಹಾರ.

# 4. ಕತ್ತಲನ್ನು ಹುಡುಕಿ . . .

ಹತ್ತು ವರ್ಷಗಳ ಹಿಂದೆ, ಅನಿರೀಕ್ಷಿತವಾಗಿ ಕೆಲಕ್ಷಣಗಳ ಹಿಂದೆ ನಗರದ ಸಂದಣಿಯಲ್ಲಿ ಭೇಟಿಮಾಡಿದ ಪಟ್ಟು ಮತ್ತು ರುಕ್ಕು ಆ ಹೋಟೆಲಿನಲ್ಲಿ ಪ್ರತ್ಯೇಕ ವಿಭಾಗವನ್ನು ಹುಡುಕಿ ಬಂದರು. ಕಾಫಿ ಕುಡಿಯಲು, ಮನ ಬಿಚ್ಚಿ ಮಾತನಾಡಲು ಅದು ಸೌಕರ್ಯವಾದ ಜಾಗ.

ಬಾಳಿನ ದಾರಿಯಲ್ಲಿ ಇಬ್ಬರೂ ಸಂಧಿಸಿ ಒಂದಾಗುವುದು ಎಷ್ಟು ಸಾಧಾರಣವೂ ಸಹಜವೂ ಆಗುತ್ತದೆಯೋ, ಅದೇ ರೀತಿ ಸಹಜವಾಯಿತು ಇಬ್ಬರೂ ಸಂಧಿಸಿ ಅಗಲಿದುದು......

ಈ ಹತ್ತು ವರ್ಷಗಳಲ್ಲಿ ಇದುವರೆಗೆ ಎಷ್ಟೋ ರೀತಿಯ ಸ್ನೇಹಿತೆಯರು ಸಿಕ್ಕಿದ್ದರು. ಜೀವನವೂ ಸಹ ಎಷ್ಟೋ ವಿಧವಾಗಿ ಎಷ್ಟೋ ರೀತಿಯಲ್ಲಿ ಬೇರಾಗಿತ್ತು...ಕಳೆದುಹೋದ ಮೈತ್ರಿಯ ನೆನಪು ಸ್ವಲ್ಪ ಸ್ವಲ್ಪವಾಗಿ ಕರಗಿ – ಅಲ್ಲದೆ ಹೊಸ ಹೊಸ ಜೀವನ ಮಾರ್ಪಾಡುಗಳಲ್ಲಿ, ಪರಿಚಯಗಳಲ್ಲಿ ಮುಚ್ಚಿಹೋಗಿ ಒಳಗೆ ಹುದುಗಿಹೋದ ವೇಳೆಯಲ್ಲಿ ಸ್ವಲ್ಪ ಹೊತ್ತಿಗೆ ಮುಂಚೆ ಇದ್ದಕ್ಕಿದ್ದಂತೆ ಅವರಿಬ್ಬರೂ – ಬಾಳಿನ ದಾರಿಯಲ್ಲಿ ಸಾಧಾರಣ ಸಹಜತೆಯಿಂದಲೇ ನಗರದ ಸಂದಣಿಯ ಮಧ್ಯೆ, ಇದಕ್ಕೆ ಹಿಂದೆ ಕಂಡರಿಯದ ಎಷ್ಟೋ ಹೊಸ ಮುಖಗಳು ಸಾವಿರ ಲೆಕ್ಕದಲ್ಲಿ ನಿಮಿಷಕ್ಕೊಂದರಂತೆ ಅಲೆಯಲೆಯಾಗಿ ಬಂದು ಮರೆಯಾಗುತ್ತಿದ್ದ ಯಾಂತ್ರಿಕ ರೀತಿಯಲ್ಲಿ ಎದಿರು ಬದಿರು ಬರುವಂತೆ ಸಂಧಿಸಿ ಘರ್ಷಣೆಯನ್ನು ತಾಳುವುದಕ್ಕಾಗಿ ನಿಂತು ನೇರವಾಗಿ ಪರಸ್ಪರ ಮುಖ ನೋಡಿದಾಗ ಆ ಭೇಟಿ ಸಂಘಟಿಸಿತು..

ಯಂತ್ರದ ಸಹಜತೆಯಿದ್ದ ಮಾತ್ರಕ್ಕೆ ಮಾನವರು ಯಂತ್ರಗಳಾಗಿಬಿಡುವರೆ...?

ಆ ಭೇಟಿಯಾಗಕೂಡದಾಗಿತ್ತು ಎಂದು ಕೋರಿದವಳಂತೆ ತನಗರಿವಿಲ್ಲದೆ ಮುಖ ತಿರುಗಿಸಿದ ಪಟ್ಟು ಅರೆಕ್ಷಣ ದಿಗ್ಭ್ರಾಂತಿಹೊಂದಿ ನಂತರ ಸರಿಪಡಿಸಿಕೊಂಡು ಆ ಅನಿರೀಕ್ಷಿತ ಭೇಟಿಯ ಸಂತೋಷಭಾವದಿಂದ ತುಂಬಿಹೋದಳು. ಅವಳಿಗಾದುದು ಅಷ್ಟೇ : ಮರುಕ್ಷಣ ಹಿಂದೆ ಆದ ದಿಗ್ಭ್ರಾಂತಿಗಾಗಿ ಅವಳು ಮನಸಾರ ಪಶ್ಚಾತ್ತಾಪಪಟ್ಟಳು.

ಅದನ್ನು ಮಿತಿಮೀರಿದ ಸಂತೋಷ ಉಂಟಾದ ಭಾವಾವೇಗವೆಂದು ರುಕ್ಕು ಭಾವಿಸಿದಳು. ಈ ನಿಮಿಷ ಅದೇ ಸತ್ಯ...

ಇವರಿಬ್ಬರಿಗೂ ಮಾತನಾಡುವ ಶಕ್ತಿಯುಳಿದಿರಲಿಲ್ಲ. ಮೈತ್ರಿಯ ಪಾಶದಿಂದ ಪರಸ್ಪರ ಕರಸ್ಪರ್ಶ ಮಾಡಿಕೊಂಡರು.

'ಪಟ್ಟು...' 'ರುಕ್ಕು...' ಎಂದು ಒಬ್ಬರ ಹೆಸರನ್ನು ಒಬ್ಬರು ಮೌನವಾಗಿ ಉಚ್ಚರಿಸಿಕೊಂಡಾಗ ಪರಸ್ಪರ ಇಬ್ಬರ ಮುಖಗಳಲ್ಲೂ ಹೃದಯ ತುಂಬಿದ ಮಂದಹಾಸ ವಿಕಸಿಸಿ ಕರಗಳ ಜೋಡಣೆಯಲ್ಲಿ ಮೆಟ್ಟಲುಮೆಟ್ಟಲಾಗಿ ಬಲವುಂಟಾಯಿತು.

ಸ್ವಲ್ಪ ಹೊತ್ತು ಗುಂಪಿನಿಂದ ಬೇರಾಗಿ ಒಂದು ಪಕ್ಕಕ್ಕೆ ನಿಂತಿದ್ದ ಇಬ್ಬರೂ ಒಬ್ಬರ ಬಗ್ಗೆ ಮತ್ತೊಬ್ಬರು ಅರ್ಥ ಮಾಡಿಕೊಳ್ಳುವಂತೆ ಕೆಲವು ಮಾತುಗಳನ್ನಾಡಿದರು. ಇಬ್ಬರಲ್ಲಿ ಯಾರಿಗೂ ಅವಸರದ ಕೆಲಸವಿಲ್ಲವೆಂದು ಅರಿತನಂತರ ಸೌಕರ್ಯವಾಗಿದ್ದ ಆ ಹೋಟೆಲಿನಲ್ಲಿ ಮಾತನಾಡಲು ಜಾಗ ಹುಡುಕಿದರು.

ಹೋಟೆಲಿನ ಪ್ರತ್ಯೇಕ ಕೋಣೆಗೆ ಬಂದು ಎದಿರುಬದಿರಾಗಿ ಕುಳಿತನಂತರ ಪರಸ್ಪರ ಸುದೀರ್ಘವಾಗಿ ನಿಧಾನವಾಗಿ ನೋಡಲು ಸಾಧ್ಯವಾಯಿತು; ಅದರೊಂದಿಗೆ ಕನ್ನಡಿಯಲ್ಲಿ ಕಾಣಿಸಿದ ತಮ್ಮ ತಮ್ಮ ಬಿಂಬಗಳನ್ನು ಹೋಲಿಸಿಕೊಂಡು ನೋಡಿದರು.

ಥಟ್ಟನೆ ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಗಟ್ಟಿಯಾಗಿ ನಕ್ಕರು. ಆ ನಗುವಿನ ಕೊನೆಯಲ್ಲಿ ಇಬ್ಬರ ಮುಖದಲ್ಲೂ ಆಳವಾದ ಶೋಕ ಅರಳಿತು.

ಅವರಿಬ್ಬರಲ್ಲೂ ಸಂತಸಕರವಾದ ಮಾರ್ಪಾಡುಗಳು ಏನೂ ಇಲ್ಲ. ರುಕ್ಕುವಿನ – ಸೆರಗಿನಿಂದ ಆವೃತವಾದ – ಕೊರಳು ಶೂನ್ಯವಾಗಿತ್ತು. ಪಟ್ಟುವಿನ ಕೊರಳಲ್ಲಿ ಮೆರುಗಾದ ಕಡಿಮೆ ಬೆಲೆಯ ಮುತ್ತುಮಾಲೆಯಿತ್ತು. ರುಕ್ಕುವಿನ ಹಣೆಯಲ್ಲಿ ಗುಂಡಾಗಿ ಕುಂಕುಮ ಬೊಟ್ಟು; ಪಟ್ಟುವಿನ ಹಣೆಯಲ್ಲಿ ಕೆಂಪುವರ್ಣದ ತಿಲಕ. ಇಬ್ಬರೂ ಉಟ್ಟಿದ್ದುದು ಸಾಧಾರಣವಾದ ವಾಯಿಲ್ ಸೀರೆಗಳು; ಆದರೆ ಉಟ್ಟಿದ್ದ ರೀತಿಯಲ್ಲಿ ಎಷ್ಟು ವ್ಯತ್ಯಾಸ! ಬಣ್ಣಹೋದ ತನ್ನ ನೀಲಿ ಸೀರೆಯನ್ನು ಹೊದ್ದುಕೊಂಡಂತೆ ದೇಹವನ್ನು ಮುಚ್ಚಿದ್ದಳು ರುಕ್ಕು. ಸೆರಗನ್ನು ಸೊಂಟದಿಂದ ತೆಗೆದು, ಕೊರಳ ಹಿಂದೆ ಮುಂದೆ ಹನಿಮೂಡಿದ್ದ ಬೆವರನ್ನು ಒರೆಸಿಕೊಂಡನಂತರ, ತನ್ನ ಕೈಯಲ್ಲಿ ಸುತ್ತಿಟ್ಟುಕೊಂಡಿದ್ದ ಒಂದು ಕಾಗದವನ್ನು ಮೇಜಿನ ಮೇಲಿಟ್ಟಳು. ತಲೆಯ ಮೇಲೆ ಫ್ಯಾನ್ ತಿರುಗುತ್ತಿತ್ತು. ಅವಳು ಅದರ ಗಾಳಿಯ ಕಂಪನ್ನು ಅನುಭವಿಸಿದಳು. ಅವರ ಮುಖ ಶುದ್ಧ ಬಿಳುಪಾಗಿಹೋಗಿತ್ತು.

ಪಟ್ಟುವಿನ ಮುಖ ಅಪ್ಪಿಕೊಂಡಿದ್ದ ಪೌಡರಿನ ಮೇಲೆ ಬೆವರು ಕೂಡಿ ಮುಖವೆಲ್ಲಾ ಕಲೆಯೇರಿತ್ತು. ಅವರು ಉಟ್ಟಿದ್ದ ಕಪ್ಪುವರ್ಣದ ಸೀರೆಯಲ್ಲಿ ಮಿರುಗುವ ಬೆಳ್ಳಿ ಹೂಗಳು ಬೆಳಗಿದುವು. ಪಟ್ಟುವಿನ ತಲೆಯ ಅಲಂಕಾರ ರುಕ್ಕುವಿನ ಜಡೆಯಂತೆ ಓರಣವಾಗಿರಲಿಲ್ಲ...ಕೇಶರಾಶಿ ಹರಡಿ ಹಾರಾಡುವಂತೆ ಬಾಚಲ್ಪಟ್ಟಿತ್ತು; ಕಿವಿಯ ಪಕ್ಕ ನೀಟಾಗಿ ಸುರುಳಿ ಸುತ್ತಲ್ಪಟ್ಟಿತ್ತು. ಕೊರಳ ಬಳಿ ಕೆಳಗಿಳಿದ ರವಿಕೆ; ಹೊಟ್ಟೆಯ ಭಾಗ ಮತ್ತು ಭುಜಗಳು ಹೊರಕಾಣುವಂತೆ ಉಟ್ಟ ಸೀರೆ; ಇವು ಇಬ್ಬರಲ್ಲೂ ಇದ್ದ ವ್ಯತ್ಯಾಸ.

ಎಷ್ಟು ಕೃಶವಾಗಿದ್ದರೂ ಮಾರ್ಪಾಟಾಗದ ಸುವರ್ಣವರ್ಣ. ಇಪ್ಪತ್ತೈದು ವರ್ಷ ಪ್ರಾಯದ ಮುಖ. ಅರಳಿದ ಕಣ್ಣುಗಳು. ಒತ್ತಾದ ಕಪ್ಪು ಕೇಶರಾಶಿ – ಇವು ಇಬ್ಬರಿಗೂ ಒಂದೇ ವಿಧ.

ಪಟ್ಟುವಿಗೆ ಎಂದಿನ ನೀಳ ಗಡ್ಡ ಭಾಗ; ಸುಂದರವಾಗಿ ಕಾಣುವಂತೆ ತೆಳ್ಳನೆ ನಿಡಿದಾದ ಆಕೃತಿ.

ರುಕ್ಕುವಿಗೆ, ಬಾಗಿ ನಿಂತ ಅಧರಗಳು; ಆಕರ್ಷಕ ಮಂದಹಾಸ ಶಿಲೆಯಂತೆ ಕೆತ್ತಿದ ರೂಪ – ಉಳಿದಂತೆ ಬಾಲವಿಧವೆಯ ಸರಳತನ – ಅದೇ ರುಕ್ಕುವಿನ ಎಂದಿನತನ.

ಮಾತನಾಡುವುದು ಬಹಳವಿದ್ದುದರಿಂದ, ಏನು ಮಾತನಾಡುವುದೆಂದು ತಿಳಿಯದೆ ಇಬ್ಬರೂ ಮೌನವಾಗಿ ಒಬ್ಬರನ್ನೊಬ್ಬರು ಅಳೆಯುವಂತೆ, ಹೋಲಿಸಿಕೊಳ್ಳುವಂತೆ ದೃಷ್ಟಿಸಿ ನೋಡಿಕೊಂಡರು.

ರುಕ್ಕು ಪ್ರೀತಿಯಿಂದ ಮಂದಹಾಸ ಬೀರಿ ಮಾತನಾಡತೊಡಗಿದಳು : "ಅಜ್ಜಿ...?" ಎಂದು ರಾಗವೆಳೆದಾಗ ಪಟ್ಟು ಭುಜವೇರಿಸಿ ತುಟಿ ಬಿರಿದಳು : "ಎರಡು ವರ್ಷಗಳಾದುವು."

"ಹಾಗಾದರೆ ನೀನು ಒಬ್ಬಳೇ ಇಲ್ಲಿದ್ದೀಯೇನು?...? ನೀನು ಯಾವಾಗ ಯಾರೊಂದಿಗೆ ಇಲ್ಲಿಗೆ ಬಂದೆ?" ಎಂದು ರುಕ್ಕು ಕಾತರದಿಂದ ಕೇಳಿದರು.

"ಅಜ್ಜಿ ಸತ್ತುಹೋದಮೇಲೆ ಅಲ್ಲಿ ಊರಿನಲ್ಲಿ ನನಗೆ ಯಾರಿದ್ದರು? ನಮ್ಮ ಅಶ್ವತ್ಥಕಟ್ಟೆ ಅತ್ತೆ ನನ್ನನ್ನು ಕರೆದುಕೊಂಡು ಹೋಗಿ ಅವರ ಮನೆಯಲ್ಲಿಟ್ಟುಕೊಂಡಿದ್ದರು...ಜೇನುತುಪ್ಪ ಹರಿಸುವಂತೆ ಮಾತನಾಡಿ ಬೆವರು ಹರಿಯುವಂತೆ ಕೆಲಸ ತೆಗೆಯುವುದರಲ್ಲಿ ಅವರು ಗಟ್ಟಿಗರು. ಅದರಿಂದೇನಾಯಿತು ಎಂದೇ ಇದ್ದೆ...ಎರಡು ವೇಳೆ ಊಟ ಬಟ್ಟೆಗೆ ಮಾತ್ರವಲ್ಲ, ಗೌರವವಾಗಿ ಒಂದು ಕುಟುಂಬದೊಂದಿಗಿದ್ದೇನಲ್ಲ ಅಂತ...ಆದರೆ ಅವರೂ ಗತಿಗೆಟ್ಟವರಾದರು...ಮಾವ ಯಾರಿಗೋ ಜಾಮೀನು ನಿಂತು, ಮೋಸ ಹೋದರಂತೆ...ಎಲ್ಲವೂ ಹೋಯಿತು... ಆಗ ಅತ್ತೆಯ ಬಳಗದವರಾರೋ ಬಂದು 'ಇವಳನ್ನು ನಮ್ಮೊಡನೆ ಕಳುಹಿಸಿ. ಸಿನಿಮಾಕ್ಕೆ ಸೇರಿಸೋಣ ಎಂದು ಕರೆದುಕೊಂಡು ಬಂದರು...ಆಮೇಲೆ ಅದೇನೂ ಸರಿಹೊಂದಲಿಲ್ಲ...ಈಗ ನಾನು ಮತ್ತೊಬ್ಬ ಸ್ನೇಹಿತೆಯೊಂದಿಗೆ ಬೇರೆಯಾಗಿದ್ದೇನೆ" – ಅವಳ ಮಾತು ಯಾರ ಮೇಲೋ ಅಪವಾದ ಹೊರಿಸಿ ಹೇಳುವಂತಿತ್ತು.

ಪಟ್ಟು ಮಾತಿನಲ್ಲಿದ್ದ ಹಿಂದೇಟು ಮತ್ತು ಒಣತನದಿಂದ ಅವಳ ಮಾತಿನಲ್ಲಿ ಸತ್ಯವಿಲ್ಲವೆಂದು ಅರ್ಥಮಾಡಿಕೊಂಡಳು ರುಕ್ಕು.

"ಈಗ ಯಾರೊಡನೆಯೋ ಇದ್ದೇನೆ ಎಂದೆಯಲ್ಲ, ಆ ಸ್ನೇಹಿತೆ ಯಾರು?"

"ಉಂ...ನಿನಗೆ ಗೊತ್ತಿಲ್ಲ" – ಎಂದು, ಕರಾರುವಾಕ್ಕಾಗಿ 'ನೀನು ತಿಳಿದುಕೊಳ್ಳಬೇಕಾದುದೂ ಇಲ್ಲ' ಎನ್ನುವ ಧ್ವನಿಯಲ್ಲಿ ಹೇಳಿದಳು ಪಟ್ಟು.

'ಈ ಹತ್ತು ವರ್ಷಗಳಲ್ಲಿ ನನಗೆ ತಿಳಿಯದ, ನನಗಿಂತ ಅನ್ಯೋನ್ಯವಾದ ಸ್ನೇಹಿತೆಯರು ಇವಳಿಗೆ ಸಿಕ್ಕಿರಬಹುದು. ಸರಿ ಅದರಿಂದೇನಾಯಿತು? ಆದರೆ ಅವಳು ನನ್ನ ಬಗ್ಗೆ ತಿಳಿದಿರ

ಬೇಕೆಂದು ಇವಳಿಗೆ ಅನ್ನಿಸುವುದಿಲ್ಲವೆ? ನಾನೇ ಅವಳ ಬಗ್ಗೆ ಕೇಳುತ್ತಿದ್ದೇನೆ... ಇವಳಿಗೆ ನನ್ನನ್ನು ಭೇಟಿಯಾದುದು ಸಂತೋಷವಲ್ಲವೆ? ಎಂದು ರುಕ್ಕು ಆಲೋಚಿಸುತ್ತಿದ್ದಳು.

"ನಿನ್ನ ತಂದೆಯವರು ಈಗ ಆರೋಗ್ಯವೆ...? ಅವರಿಗೆ ಚಿಕಿತ್ಸೆ ಮಾಡಿಸಲು ತಾನೇ ನೀವಿಬ್ಬರೂ ಊರು ಬಿಟ್ಟು ಇಲ್ಲಿ ಯಾರೋ ಬಂಧುಗಳ ಮನೆಗೆ ಬಂದಿರಿ" ಎಂದು ಪಟ್ಟು ಕೇಳಿದಳು. ತನ್ನ ಬಗ್ಗೆ ಇಷ್ಟು ಜ್ಞಾಪಕವಾಗಿ ವಿಚಾರಿಸುವ ಪಟ್ಟುವನ್ನು ಒಂದು ಕ್ಷಣದಲ್ಲಿ ತಪ್ಪಾಗಿ ತಿಳಿದೆನಲ್ಲಾ ಎಂದು ರುಕ್ಕು ವ್ಯಥೆಪಟ್ಟಳು. ಏನೇ ಆಗಲಿ, ಮರುಕ್ಷಣ ಪಟ್ಟುವಿನ ಮುಖದಲ್ಲಿ ಕಂಡುಬಂದ ಅಸಹಜ ಕಿರುನಗೆಯನ್ನು ನೋಡಿದಾಗ ರುಕ್ಕುವಿಗೆ ತೋಚಿತು : 'ಇವಳು ಎರಡು ಮನಸ್ಸಿನಿಂದ...ಎರಡು ವ್ಯಕ್ತಿತ್ವದಿಂದ... ಇಬ್ಬಗೆ ಕೆಟ್ಟವಳಾಗಿದ್ದಾಳೆ...".

ಆದರೂ ರುಕ್ಕು ಅವಳ ಪ್ರಶ್ನೆಗೆ ಉತ್ತರ ಕೊಟ್ಟಳು :

"ಆಗಲೇ ನಾವು ಬಂದ ಕೆಲವು ದಿನಗಳಲ್ಲಿ ತಂದೆ ಕಾಲವಾದರು..."

— ಆಗ ಹೋಟೆಲ್ ಸರ್ವರ್ ಬಾಗಿಲಲ್ಲಿ ಇಣುಕಿ ನೋಡಿ ಒಳಗೆ ಬಂದ.

"ಏನು ತಿಂಡಿ ಹೇಳೋಣ...?" ಎಂದು ರುಕ್ಕು ಕೇಳಿದಳು.

"ಬರೀ ಕಾಫಿಯಾದರೆ ಸಾಕು..."

"ಚೆನ್ನಾಗಿದೆ...ಇಷ್ಟು ದಿನಗಳ ನಂತರ ಭೇಟಿಯಾದೆವು" – ಎಂದು ಕುತೂಹಲ ನಸು ನಗೆಯೊಂದಿಗೆ 'ಎರಡು ಸ್ಪೆಷಲ್ ಸ್ವೀಟ್ ತನ್ನಿ' ಎಂದು ಸರ್ವರಿಗೆ ರುಕ್ಕು ಹೇಳಿದಳು.

ರುಕ್ಕು ಸರ್ವರಿಗೆ ಆರ್ಡರು ಕೊಟ್ಟ ಅತ್ಯಲ್ಪ ಕಾಲದಲ್ಲೇ ಪಟ್ಟು ಏನೋ ಆಲೋಚಿ ಸುತ್ತಾ ತಲೆಬಾಗಿಸಿಕೊಂಡಿದ್ದಳು.

ಸರ್ವರ್ ಹೋದಮೇಲೆ ಅವಳ ಸ್ಥಿತಿಯನ್ನು ಅನುತಾಪದಿಂದ ಏನೆಂದೇ ಅರ್ಥವಾಗದೆ ದೃಷ್ಟಿಸಿ ನೋಡಿದಳು ರುಕ್ಕು.

ಪಟ್ಟು ಇದ್ದಕ್ಕಿದ್ದಂತೆ ತಲೆಯೆತ್ತಿದಳು. ರುಕ್ಕು ಏನೋ ನೋಡಿ ಮತ್ತೆ ಒಮ್ಮೆ ಒಣ ನಸುನಗೆ ನಕ್ಕಳು... ಮುಖದಲ್ಲಿ ಒಂದು ಅಸಹಜ ತೋರಿಕೆ. "ಉಂ...ನೀನು ಈಗ ಅದೇ...ಆ ಬಂಧುಗಳ ಮನೆಯಲ್ಲೇ ಇದ್ದೀಯೇನು?"

"ಹೌದು, ಆ ಮನೆಯಲ್ಲಿಯೇ ಇದ್ದೇನೆ...ಆದರೆ ಪ್ರತ್ಯೇಕವಾಗಿದ್ದೇನೆ..."

"ಪ್ರತ್ಯೇಕವಾಗಿ? ಹಾಗೆಂದರೆ ಏನಾದರೂ ನೌಕರಿಯಲ್ಲಿರುವೆಯೇನು?" ಎಂದು ಕೇಳುತ್ತಲೇ ರುಕ್ಕುವಿನ ಕರದ ಬಳಿಯೇ ಮೇಜಿನ ಮೇಲಿದ್ದ ಕಾಗದದ ಸುರುಳಿಯನ್ನು ಎತ್ತಿಕೊಂಡು "ಇದನ್ನು ನೋಡಬಹುದೆ?" ಎಂದು ಪಟ್ಟು ಕೇಳಿದಳು.

ಮೆಲ್ಲನೆ ತಲೆಯಾಡಿಸಿ ಅನುಮತಿಯಿತ್ತ ರುಕ್ಕು ಪಟ್ಟುವಿನ ಅಂತರಂಗ ಬಹಿರಂಗ ಅಳೆಯುವಂತೆ ಸುದೀರ್ಘವಾಗಿ ನೋಡಿದಳು.

ಸರ್ವರ್ ಎರಡು ಪ್ಲೇಟುಗಳಲ್ಲಿ ಸಿಹಿ ತಿಂಡಿಯನ್ನು ತಂದಿಟ್ಟ; ಕಾರ ಮತ್ತು ಕಾಫಿ ಹೇಳಿ ರುಕ್ಕು ಅವನನ್ನು ಕಳುಹಿಸಿದಳು.

ಆ ಕಾಗದದ ಸುರಳಿಯನ್ನು ಬಿಚ್ಚಿ ನೋಡಿದ ಪಟ್ಟು ಆತಂಕ ಮತ್ತು ಕಳವಳಗೊಂಡು ಕೈಯಲ್ಲಿ ಬಿಚ್ಚಿ ನೋಡುತ್ತಿದ್ದ ಅಗಲವಾದ ಕಾಗದದ ಮೇಲೆ ತಲೆಯೆತ್ತಿ ರುಕ್ಕುವನ್ನು ನೋಡಿದಳು...

ರುಕ್ಕು ಸಮಾಧಾನವಾಗಿ ನಕ್ಕಳು.

ಆಗ ಅಲ್ಲಿ ಹೆಜ್ಜೆಯ ಸಪ್ಪಳ ಕೇಳಿಸಲಾಗಿ ಅವಸರ ಅವಸರವಾಗಿ ಕಾಗದವನ್ನು ಸುತ್ತ ತೊಡಗಿದಳು. ಅರ್ಧ ಸುತ್ತಿದ ಕಾಗದವನ್ನು ಕೈಯಲ್ಲಿ ಹಿಡಿದೇ ಕಳ್ಳಿಯಂತೆ ಪಟ್ಟು ಕಣ್ಣುಗಳು ಮಾಡಿಕೊಂಡಿದ್ದಳು. ಸರ್ವರ್ ಫಲಾಹಾರವನ್ನು ಮೇಜಿನ ಮೇಲಿಟ್ಟು ಹೊರಗೆ ಹೋದ.

ಅವನತ್ತ ಹೋಗುತ್ತಲೂ ಪಟ್ಟು ಆತುರವಾಗಿ ಕೇಳಿದಳು: "ಏನು ರುಕ್ಕು ಇದು ಅಸಹ್ಯ"?

ರುಕ್ಕು ಅವಳನ್ನು ನೋಡಿ ಹೆಮ್ಮೆಯಿಂದ ನಕ್ಕು ಹೇಳಿದಳು: "ಇದು ಅಸಹ್ಯ ವಾದರೆ, ನೀನು ನಾನು – ಇಡೀ ಪ್ರಪಂಚವೇ ಅಸಹ್ಯವೆನ್ನಬೇಕು... ಅದನ್ನು ಸರಿಯಾಗಿ ನೋಡು...ನೋಡಿದ ಮಾತ್ರಕ್ಕೆ ಭಯಪಡುವೆಯೇಕೆ... ತಿಳಿಯಾದ ಮನಸ್ಸಿನಿಂದ ನೋಡು... ಎಂದಳು.

ಪಟ್ಟು ಮತ್ತೆ ಕಾಗದ ತೆಗೆದು ಚಿತ್ರಗಳನ್ನು ವಿವರವಾಗಿ ನೋಡಿದಳು.

ಅದರಲ್ಲಿ, ಬೆತ್ತಲೆಯಾಗಿ ಒಂದು ಪಕ್ಕಕ್ಕೆ ಬಾಗಿ ಮಂಡಿಯೇರಿಸಿ ಕುಳಿತ ಹೆಣ್ಣಿನ ಚಿತ್ರ.

ಮೊದಲು ನೋಡಿದಾಗ ಅಭ್ಯಾಸವಿಲ್ಲದವರಿಗೆ ಆ ಚಿತ್ರ, ಮನಸ್ಸಿನ ಅಳುಕಿನ ಕಾರಣ ದಿಂದ 'ಛೀ' ಎನಿಸುವಂತಿತ್ತು. ಅದೇ ಚಿತ್ರ ಈಗ ಸ್ವಲ್ಪ ಸಹನೆಯಿಂದ ನೋಡಿದಾಗ – ಕುಳಿತಿದ್ದ ಆ ದೃಶ್ಯ, ಎಡಗಡೆ ಮಂಡಿಯೇರಿಸಿ ಅಗಲಿಸಿದ್ದ ಮೊಣಕಾಲುಗಳ ರೀತಿ. ಸೊಂಟದ ಸುತ್ತ ಸುರುಳಿ ಬಲಗೈಯನ್ನು ನೆಲದಲ್ಲಿ ಊರಿ. ಕೊರಳನ್ನು ವೈಯ್ಯಾರವಾಗಿ ತಿರುಗಿಸಿ, ತೋಳಿನ ಮೇಲೆ ಮುಖ ಬರುವಂತೆ ಇಟ್ಟಿದ್ದ ತಲೆ, ಹೊಟ್ಟೆ, ಎದೆ, ಮುಂದೆ ಬಂದ ಮೈ, ಸುರುಳಿ, ರೇಖೆ, ನೆರಳು – ನೋಡುತ್ತಿದ್ದಂತೆ. ಚಿತ್ರದ ರಚನೆ ಮತ್ತು ಸೌಂದರ್ಯ ಮಾತ್ರವೇ ಅಲ್ಲದೆ, ಆ ರೂಪ ಎದುರುಗಡೆ ಕುಳಿತಿದ್ದ ರುಕ್ಕುವಿನದೇ ಎಂದು ಪಟ್ಟುವಿಗೆ ಅರ್ಥವಾಯಿತು. ಪಟ್ಟು ಎರಡು ಬಾರಿ ಚಿತ್ರದ ವಿಲಾಸವನ್ನು ರುಕ್ಕುವಿನ ಮುಖವನ್ನೂ ಹೋಲಿಸಿ ನೋಡಿದಳು.

"ಇದು ನೀನೇ ತಾನೆ?" ಎಂದು ಪಟ್ಟು ಕೇಳಿದ ಪ್ರಶ್ನೆಗೆ ಹೆಮ್ಮೆಯಿಂದ ತಲೆಯಾಡಿಸಿ ದಳು ರುಕ್ಕು.

"ಇದನ್ನು ಚಿತ್ರಿಸಿದುದು ಗಂಡಸೋ ಹೆಂಗಸೋ?"

ರುಕ್ಕು ಮಂದಹಾಸ ಬೀರಿದಳು: "ಇದನ್ನು ಚಿತ್ರಿಸಿದುದು ಓರ್ವ ಆರ್ಟಿಸ್ಟ್. ಹೀಗೆ ಹೇಳಿದರೆ ನಿನಗೆ ಸಮಾಧಾನವಾಗದಲ್ಲವೆ?" – ಎಂದು ಮತ್ತೆ ನಕ್ಕು "ಗಂಡಸೇ" ಎಂದಳು ರುಕ್ಕು.

"ಇದಕ್ಕಾಗಿ, ನಿನಗೆ ಅವನು ಹಣ ಕೊಡುತ್ತಾನೇನು?"

"ಉಂ... ಕೊಡುತ್ತಾನೆ... ನನಗೆ ಉದ್ಯೋಗ ಯಾವುದು ಎಂದು ಕೇಳಿದೆಯಲ್ಲ. ಇದೇ ಉದ್ಯೋಗ" ಎಂದು ರುಕ್ಕು ಹೇಳುತ್ತಿರಲಾಗಿ, ಪಟ್ಟು ರುಕ್ಕುವನ್ನು ನೆಟ್ಟದೃಷ್ಟಿಯಿಂದ ನೋಡಿದಳು. ಅವಳ ಬೆನ್ನ ಹಿಂದೆ ಕನ್ನಡಿಯಲ್ಲಿ ಕಾಣಿಸುವ ತನ್ನನ್ನು ನೋಡಿಕೊಂಡಳು. ತನಗಿಂತ ಯೌವನ ಮತ್ತು ಸುಗುಣವತಿಯರಾದ ರುಕ್ಕು, ಕೊರಳು ಮತ್ತು ಬೆನ್ನನ್ನು ಹೊರಗೆ ಬರುವಾಗ ಚೆನ್ನಾಗಿ ಮುಚ್ಚಿಕೊಂಡು ಬರುವ ರುಕ್ಕು – ಹೊಟ್ಟೆಯ ಪಾಡಿಗಾಗಿ ಯಾರ ಮುಂದೆಯೋ ಹೋಗಿ ನಿರ್ವಾಣವಾಗಿ ನಿಲ್ಲುತ್ತಿದ್ದಾಳಲ್ಲ" ಎಂದು ಪಟ್ಟುವಿನ ನಯನಗಳಲ್ಲಿ ಅಶ್ರುಧಾರೆ ಬಂದಿತು.

"ಹೌದು... ನೀನೇನು ಮಾಡುತ್ತಿದ್ದೀಯೆ? ಆ ನಿನ್ನ ಸ್ನೇಹಿತೆ ಏನು ಕೆಲಸ ಮಾಡುತ್ತಿದ್ದಾಳೆ ಎಂದು ನಾನು ತಿಳಿಯಬಹುದೆ?" ಎಂದು ರುಕ್ಕು ಕೇಳಲು ಪಟ್ಟುವಿಗೆ ದುಃಖ ಮಿತಿಮೀರಿ ಕಂಠ ಕಟ್ಟಿತು. ತುಟಿಗಳು ಕಂಪಿಸಿದುವು.

— ಪ್ರಾರಂಭದಲ್ಲಿ – ಭೇಟಿಯಾದಾಗ – ತನ್ನಂತಲ್ಲದೆ ರುಕ್ಕು ಗೌರವವಾಗಿ ಬಾಳು ನಡೆಸುತ್ತಿದ್ದಾಳೆ ಎಂದು ಭಾವಿಸಿದ ಪಟ್ಟು, ಅವಳ ಬಳಿ ತನ್ನನ್ನು ಬಹಿರಂಗಪಡಿಸಿಕೊಳ್ಳದೆ ಅಂತರಂಗವಾಗಿ ದೂರದೂರವಾಗಿಯೇ ಮಾತನಾಡುತ್ತಿದ್ದಳು. ಈಗ ತನ್ನಂತೆಯೇ ಇವರು ಗೌರವರಹಿತ ಅಪಮಾನಕರವಾದ ಜೀವನ ನಡೆಸುವವಳು ಎಂದು ಕಂಡಾಗ ಪಟ್ಟುವಿನ ಮನಸ್ಸು ರುಕ್ಕುವಿಗೆ ಸಮೀಪವಾಯಿತು. ಗೌರವವಾಗಿ ಹುಟ್ಟಿದ ತಾವಿಬ್ಬರೂ ಇಷ್ಟು ಕೇವಲ ಪರಿಸ್ಥಿತಿಯಲ್ಲಿ ಸಂಧಿಸಿದ ಕಹಿಯಿಂದಾಗಿ ದಿಕ್ಕೆಟ್ಟ ತನಗೆ ಜೊತೆಯಾಗಿ. ನಾಚಿಕೆಗೇಡಾದ ತನ್ನ ವೃತ್ತಿಗೆ ಸಮನಾಗಿ ತನ್ನೊಡನೆ ಮತ್ತೆ ಕೂಡಿ ಸೇರಿದ ಹಳೆಯ ಮೈತ್ರಿಯ ನವನಿರ್ಮಾಣಕ್ಕಾಗಿ ಅವಳು ದುಃಖಮಿಶ್ರಿತ ಸಂತಸವನ್ನು ಹೊಂದಿದಳು.

ಆದರೂ "ನೀನೇನು ಮಾಡುತ್ತಿರುವೆ?" ಎಂದು ಕೇಳಿದ ರುಕ್ಕುವಿನ ಪ್ರಶ್ನೆಗೆ ಉತ್ತರವನ್ನು ಭಾವಿಸಿಕೊಂಡಾಗ ಪಟ್ಟು ಅಪಮಾನದಿಂದ ತಲೆಬಾಗಿಸಿದಳು.

"ಪಟ್ಟು. ವ್ಯಥೆಯಾಗುವುದೆ? ನಿನ್ನನ್ನು ವ್ಯಥೆಗೊಳಿಸುವಂತಹುದೇನೂ ನಾನು ಕೇಳಲಿಲ್ಲ. ಸಾಧ್ಯವಾದರೆ ನನ್ನ ಕೈಲಾದ ಒತ್ತಾಸೆ ಮಾಡೋಣವೆಂದು ಕೇಳಿದೆ, ಎಲ್ಲಿ ನನ್ನತ್ತ ನೋಡು..." ಎಂದು ಮೇಜಿನುದ್ದಕ್ಕೆ ಕರನೀಡಿ, ಪಟ್ಟುವಿನ ಬಾಗಿದ ಮುಖವನ್ನು ಅದರ ಸೌಂದರ್ಯವನ್ನು ನೋಡುವವಳಂತೆ – ಅವಳ ಸುಂದರ ಗದ್ದವನ್ನು ಮೇಲೆತ್ತಿ ನೋಡಿದಳು ರುಕ್ಕು. ಕಣ್ಣು ಕಪ್ಪಿನಿಂದ ಕಲೆಯಾಗಿ ಕೆಂಪಡರಿ ಅರಳಿದ್ದ ಎವೆಗಳಲ್ಲಿ ಕಣ್ಣೀರು ತುಂಬಿ ನೆನೆದುಹೋಗಿತ್ತು.

ಪಟ್ಟು ಥಟ್ಟನೆ ಮುಖ ಮುಚ್ಚಿಕೊಂಡು ಅತ್ತಳು. ರುಕ್ಕುವಿಗೆ ಅವಳ ಪರಿಸ್ಥಿತಿಯು ಅರಿವಾಯಿತು. ಸ್ವಲ್ಪ ಹೊತ್ತಿನ ನಂತರ ಮುಖವನ್ನೊರೆಸಿಕೊಂಡು, ಬಿಕ್ಕಿ ಬಿಕ್ಕಿ ಪಟ್ಟು ಹೇಳಿದಳು:

"ರುಕ್ಕು, ನಾನು ನನ್ನ ಬಗ್ಗೆ ನಿನ್ನ ಹತ್ತಿರ ಮರಮಾಚಿ ಮಾತನಾಡಿದೆ. ಯಾರೋ ಕುಟುಂಬದವರೊಂದಿಗೆ ಬಂದುದಾಗಿ ಸುಳ್ಳೇ ಹೇಳಿದೆ. ನಮ್ಮ ಊರಿನವನೊಬ್ಬನನ್ನು ನಂಬಿ ಸಿನಿಮಾ ಸೇರಲೆಂದು ನಾನೇ ಅಶ್ವತ್ಥಕಟ್ಟೆಯ ಅತ್ತೆಯ ಹತ್ತಿರ ಹೇಳದೆ ಕೇಳದೆ ಓಡಿಬಂದೆ. ಆ ದ್ರೋಹಕ್ಕೆ ತಕ್ಕುದನ್ನು ಈ ಒಂದು ವರ್ಷದಲ್ಲಿ ಅನುಭವಿಸಿಯಾಯಿತು... ನಾನು ಯಾವ ವೃತ್ತಿ ಮಾಡಿ ಜೀವಿಸುತ್ತಿದ್ದೇನೆಂದು ಹೇಳಿಕೊಳ್ಳಲು ನಾಲಿಗೆ ಬರದು. ಒಂದೊಂದು ನಿಮಿಷವೂ ಆ ಜಾಗದಿಂದ ಓಡಿಹೋಗಲು ಮನಸ್ಸು ಕಾತರಗೊಳ್ಳುತ್ತಿದೆ. ಆದರೆ ಹೋಗುವುದೆಲ್ಲಿಗೆ? ಹೇಳು... ಉಂ... ಹಣೆಬರಹವಿದು, ಹಣೆಬರಹ..." ಎಂದು ಮುಂದೆ ಮಾತನಾಡಲಾಗದೆ ಪಟ್ಟು ನಿಟ್ಟುಸಿರುಬಿಟ್ಟಳು.

ರುಕ್ಕು ಮೌನವಾಗಿ ಏನೋ ಚಿಂತಿಸುತ್ತಾ ತಟ್ಟೆಯಲ್ಲಿದ್ದ ತಿಂಡಿ ತಿನ್ನತೊಡಗಿದಳು. "ಉಂ... ತಿಂಡಿ ತೆಗೆದುಕೋ" ಎಂದು ಪಟ್ಟುವಿಗೆ ಹೇಳಿದಳು. ಇಬ್ಬರೂ ಮೌನವಾಗಿಯೇ ತಿಂಡಿ ತಿಂದು ಮುಗಿಸಿದರು.

ರುಕ್ಕು ಹೇಳಿದಳು: "...ಹಣೆಬರಹವೇ. ಅದಕ್ಕೆ ಯಾರೇನು ಮಾಡಲಾಗುತ್ತೆ? ಹಣೆಬರಹ ನಮ್ಮನ್ನು ಬಡತನದಲ್ಲಿ ಹುಟ್ಟಿಸಿತು. ಅನಾಥರನ್ನಾಗಿ ಮಾಡಿತು. ಒಂದು ವೇಳೆ ಊಟಕ್ಕೂ ಒಂದು ಒಳ್ಳೆಯ ಸೀರೆಗೂ ಕೂಡ ಮಾರ್ಗವಿಲ್ಲದೆ ನಿರ್ಗತಿಕರಾಗಿ ನಿಂತಿದ್ದೇವೆ. ಹಣೆಬರಹದಿಂದ ಓರ್ವ ಹೆಣ್ಣು ಸರಳವಾಗಿರಬಹುದು; ಅಧಃಪತನಕ್ಕೆ ಒಳಗಾಗಬಾರದು. ಹಣೆಬರಹದ ಹೆಸರಿನಲ್ಲಿ ಏನು ಬೇಕಾದರೂ ಮಾಡಿಬಿಡಬಾರದು. ನೀನು ಬಡತನಕ್ಕೆ ಒಳಗಾಗಲು ಹಣೆಬರಹವೇ ಕಾರಣವೆಂದು ಹೇಳು. ಆದರೆ ತುಚ್ಛ ಮಟ್ಟಕ್ಕೆ ಇಳಿಯಲು ಅದು ಕಾರಣವಲ್ಲ; ನೀನೇ ಕಾರಣ!" ಎಂದು ರುಕ್ಕು ನಯವಾಗಿ ಆದರೆ ಸ್ಪಷ್ಟವಾಗಿ ಹೇಳಿದಳು. ಇದನ್ನು ಕೇಳಿ ಪಟ್ಟು ತುಟಿಗಳನ್ನು ಕಚ್ಚಿ ತಪ್ಪು ಮಾಡಿದವಳಂತೆ ತಲೆಬಾಗಿದಳು.

ರುಕ್ಕು ಮುಂದುವರಿಸಿದಳು: "ಬಡತನದಲ್ಲಿ ಒಂದು ಓರಣವಿರಬೇಕು. ಬಲಹೀನವಾದ ದೇಹವನ್ನು ರೋಗಗಳು ಬಂದು ಮುತ್ತುವಂತೆ, ಮನಸ್ಸನ್ನು ಬಲಹೀನಗೊಳಿಸಲು ಎಲ್ಲಾ ಅವಗುಣಗಳೂ ಬರುತ್ತಿವೆ. ಬಡತನದಿಂದ ಮನಸ್ಸು ಬಲಗೊಳ್ಳಬೇಕು; ಕಷ್ಟ ಬಂದಿತೆಂದು ತಪ್ಪಾದ ದಾರಿ ಹಿಡಿದು ಜೀವನವನ್ನು ಅಧಃಪತನಗೊಳಿಸಿಕೊಳ್ಳುವುದರಿಂದ ಕಷ್ಟ ನೀಗುವುದೆ? ಹಾಗೆ ಜಾರುವುದೇ ಕೈಲಾಗದತನವಲ್ಲವೆ, ಅಲ್ಲವೆ? ಇಷ್ಟು ನಾನು ಯಾಕೆ ಹೇಳುತ್ತಿದ್ದೇನೆಂದರೆ ಇಂತಹ ಪರಿಸ್ಥಿತಿಗೆ ನಾನೂ ಒಳಗಾಗಿರಬಹುದು..." ಎಂದು ಏನೋ ಅವಳು ವಿವರಿಸಿದಾಗ, ಸರ್ವರ್ ಪ್ರವೇಶಿಸಿದ...

"ಕಾಫಿ ತರುವುದೇ?" ಎಂದು ಅರ್ಧ ಬಾಗಿಲ ಹಿಂದೆಯೇ ಸರ್ವರ್ ನಿಂತು ಕೇಳಿದ. 'ಹೌದು' ಎಂದು ತಲೆಯಾಡಿಸಿದಳು ರುಕ್ಕು.

ಅದೇ ವೇಳೆಯಲ್ಲಿ ಪಟ್ಟು ಯೋಚಿಸಿದಳು: 'ಒಂದು ಹೆಣ್ಣು ಬಡತನದಲ್ಲಿರಬಹುದು; ಅಧಃಪತನಕ್ಕೆ ಬೀಳಬಾರದೆಂದು ನೀತಿ ಹೇಳುವ ಇವಳೂ ತುಚ್ಛ ಮಟ್ಟದ ಕೆಲಸವನ್ನೇ

ವೃತ್ತಿಯಾಗಿ ಕೈಗೊಂಡಿದ್ದಾಳೆ ಎಂದು ನೆನೆದು ಕೈಯಲ್ಲಿ ಸುತ್ತಿಟ್ಟುಕೊಂಡಿದ್ದ ಚಿತ್ರವನ್ನು ಮತ್ತೊಮ್ಮೆ ಸ್ವಲ್ಪ ಬಿಚ್ಚಿ ದೃಷ್ಟಿಹರಿಸಿ, ತುಟಿಗಳ ಕೊನೆಯಲ್ಲಿ ಮೆಲ್ಲನೆ ನಗೆ ತೇಲಿಸಿದುದನ್ನು ರುಕ್ಕು ಗಮನಿಸಿದಳು. ಆ ಚಿತ್ರವನ್ನು ದೃಷ್ಟಿಸುತ್ತಿದ್ದಂತೆ ಕಹಿಯಾದ ಭಾವದಿಂದ ಪಟ್ಟು ಹೇಳಿದಳು : "ನೀನು ಯಾವಾಗಲೂ ಯಾವುದನ್ನೂ ಕೂಲಂಕಷವಾಗಿ ಆಲೋಚಿಸುವವಳು; ಸಭ್ಯತೆಯುಳ್ಳವಳು; ನನ್ನಂತೆ ಅವಸರದ ಗುಣವುಳ್ಳವಳಲ್ಲ; ಇಷ್ಟು ಹೇಳುವ ನಿನ್ನ ಗತಿಯೂ ಹೀಗೆಯೇ ತಾನೇ ಜಾರಿದೆ?" ಎಂದು ಪಟ್ಟು ಚುಚ್ಚುವಂತೆ ದುಃಖದಿಂದ ತಲೆಯೆತ್ತಿ ರುಕ್ಕುವನ್ನು ನೆಟ್ಟ ದೃಷ್ಟಿಯಿಂದ ನೋಡಿದಳು. ಪಟ್ಟುವಿನ ಅನುಭವಕ್ಕೆ ರುಕ್ಕು ಪಶ್ಚಾತ್ತಾಪಪಟ್ಟು. ಅವಳ ಅಭಿಪ್ರಾಯವನ್ನು ವಿರೋಧಿಸುವಂತೆ ಅಡ್ಡವಾಗಿ ತಲೆಯಾಡಿಸಿದಳು.

"ನಾನು ಪಾಪಜೀವನ ನಡೆಸುತ್ತಿದ್ದೇನೆಂದು ನೀನು ಹೇಳಿದುದಕ್ಕಾಗಿ ನಾನು ವ್ಯಥೆಪಡಲಿಲ್ಲ. ಯಾಕೆ ಗೊತ್ತೆ? ನಾನೂ ಮೊದಮೊದಲು ಇದನ್ನು ಹಾಗೆಯೇ ಭಾವಿಸಿದೆ. ಸಾಧಾರಣ ಮನುಷ್ಯರು ಯಾರಾದರೂ ಮೊದಲು ಹಾಗೆಯೇ ಭಾವಿಸುತ್ತಾರೆ..." ಎಂದು ಹೇಳಿ ನಿಲ್ಲಿಸಿದಾಗ ಸರ್ವರ್ ಕಾಫಿ ತಂದಿಟ್ಟ. ಕಾಫಿಯನ್ನೂ ಬಿಲ್ಲನ್ನೂ ಮೇಜಿನ ಮೇಲಿಟ್ಟು ಅವನು ಹೊರಟುಹೋದಮೇಲೆ – ತನ್ನ ಮನಸ್ಸಿನಲ್ಲಿದ್ದ – ತನ್ನ ವೃತ್ತಿ ತುಚ್ಛವಾದುದಲ್ಲ ಗೌರವಯುಕ್ತವಾದುದೇ – ಎಂಬ ಸ್ಪಷ್ಟ ತೀರ್ಮಾನವನ್ನು ಪಕ್ವವಾಗಿ ಇವಳಿಗೆ ತಿಳಿಯುವಂತೆ ಹೇಳಲು ಸಾಧ್ಯವಾಗದೆ ಮಾತುಗಳನ್ನು ಹುಡುಕುತ್ತಾ ರುಕ್ಕು ಮೌನವಹಿಸಿದಳು. ಕೆಲವು ಕ್ಷಣಗಳ ಕಾಲ ಎಡಗೈಯಿಂದ ಕಣ್ಣು ಮತ್ತು ಎವೆಗಳನ್ನು ಸೇರಿಸಿ ಮುಚ್ಚಿಕೊಂಡಳು.

ರುಕ್ಕು ಅಳುತ್ತಿದ್ದಾಳೇನೋ ಎಂಬ ಭೀತಿಯಿಂದ ಅವಳನ್ನೇ ನೋಡುತ್ತಾ ಕುಳಿತಳು ಪಟ್ಟು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ರುಕ್ಕು ಮಂದಹಾಸ ಬೀರಿ ಹೇಳಿದಳು : "ನೀನು ನನ್ನ ಬಗ್ಗೆ ಮರೆಮಾಚಿ ಮರೆಮಾಚಿ ನನ್ನ ಬಳಿ ಮಾತನಾಡಿದೆಯೆಂದು ಹೇಳಿದೆಯಲ್ಲವೆ? ಆದರೆ ನಾನು ನಿನ್ನ ಬಳಿ ಏನೂ ಮುಚ್ಚಿಡಲಿಲ್ಲ... ನಾನು ಕೈಗೊಂಡಿರುವ ವೃತ್ತಿ ತುಚ್ಛವಾದುದೆಂದು ನನ್ನ ಮನಸ್ಸಿಗೆ ಅನಿಸಿದ್ದರೆ ಈ ಚಿತ್ರವನ್ನು ನೀನು ನೋಡುವುದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಅದರಲ್ಲಿರುವುದು ನಾನೇ ಎಂದು ಒಪ್ಪಿಕೊಳ್ಳುತ್ತಲೂ ಇರಲಿಲ್ಲ. ನಾನು ಗೌರವವಾಗಿಯೇ ಜೀವನ ನಡೆಸುತ್ತಿದ್ದೇನೆ – ಆದರೆ ಪ್ರಾರಂಭದಲ್ಲಿ... ನನಗೆ...ಈಬಗ್ಗೆ ಮಾತು ಬಂದಾಗಲೇ ಮೈ ಉರಿದಂತಾಯಿತು ಅಳು ಬಂದಿತು" ಎಂದು ಹೇಳುವಾಗ ರುಕ್ಕುವಿನ ಕಂಠ ತಗ್ಗಿತು. ಮಾತು ತೊದಲಿತು.

ಸ್ವಲ್ಪ ಮೌನವಾಗಿ ಕಾಫಿಯನ್ನು ಆರಿಸಿ ಒಂದು ಗುಟುಕು ಕುಡಿದ ಮೇಲೆ ಸ್ಪಷ್ಟ ಕಂಠದಿಂದ ರುಕ್ಕು ಮಾತನಾಡತೊಡಗಿದಳು.

"ತಂದೆಯವರು ತೀರಿಹೋದಮೇಲೆ ನಾನೂ ನಿನ್ನಂತೆ ಅನಾಥಳಾದೆ. 'ಊರಿಗೆ ಹೋಗಿ ಪರಿಚಯಸ್ಥರಾದವರ ನಾಲ್ಕು ಮನೆಯಲ್ಲಿ ಕೆಲಸ ಮಾಡಿ ಕಾಲ ತಳ್ಳು. ನಗರದಲ್ಲಿ

ನಿನಗೆ ಏನಿದೆ ಅಂತ ಆ ಮನೆಯವರು ಚುಚ್ಚಿ ಮಾತನಾಡಿದವರು ಆ ಮನೆಯಲ್ಲಿ. ಅದು ನನಗೆ ಗೊತ್ತು; ಆ ಊರಿನಲ್ಲಿಯೂ ನನಗೇನಿಲ್ಲ ಅಂತ ಆಗಲೇ ನನಗೆ ಅರಿವಾದುದು. 'ಆತುರಪಟ್ಟು ಎಂಟನೆಯ ಕ್ಲಾಸಿನಲ್ಲಿ ವಿದ್ಯಾಭ್ಯಾಸ ನಿಲ್ಲಿಸಿದೆನಲ್ಲಾ ಅಂತಹ ಸಂದರ್ಭ ಗಳಲ್ಲಿ ತಾನೇ ಶ್ರಮಿಸಿ ಬಾಳುವ ಅನಾಥೆಯಾದ ವಯಸ್ಸು ಬಂದ ಹೆಣ್ಣಿಗಾಗಿ ಪ್ರಪಂಚ ರಹಸ್ಯವಾಗಿ ಓಡಿ ಬಂದು ಮಾಡುವ ಒತ್ತಾಸೆಯೇ – ನಿನಗೆ ಸಿಕ್ಕಿರುವ ವೃತ್ತಿ. ಒಂದು ಬಾರಿ ಒಂದು ಎಕ್ಸಿಬಿಷನ್ನಿನಲ್ಲಿ ಒಂದು ಸ್ಟಾಲಿನಲ್ಲಿ ಉದ್ಯೋಗಕ್ಕೆ ಹೋದೆ. ದಿನಕ್ಕೆ ಎರಡು ರೂಪಾಯಿ ಸಂಬಳ ಎಂದಾಗ ನನಗೆ ತಣ್ಣೀರೆರಚಿದಂತಾಯಿತು. ಅಲ್ಲಿ ನನಗೆ ಕೆಲಸವೇನೂ ಇಲ್ಲ. ಬಂದವರು ಕೇಳುವ ಅವಶ್ಯಕವಾದ ಅನಾವಶ್ಯಕವಾದ ಪ್ರಶ್ನೆಗಳಿಗೆ ನಗುಮುಖ ದಿಂದ ಉತ್ತರ ಹೇಳಿಕೊಂಡಿರಬೇಕು.

"ನಾನು ಕೆಲಸಕ್ಕೆ ಹೋದದ್ದು ಒಂದು ಪೌಡರ್ ಸ್ನೋ ಸ್ಟಾಲ್. ಮೊದಲ ದಿನ ಸೇಲ್ಸ್‌ಮ್ಯಾನೇಜರ್ ನನ್ನನ್ನು ಕರೆದು ಹೇಳಿದರು – 'ನಮ್ಮ ಪೌಡರ್ ಮತ್ತು ಸ್ನೋ ಬೇರೆಯವರು ಉಪಯೋಗಿಸುವ ಮೊದಲು ನಾವು ಉಪಯೋಗಿಸಿ ತೋರಬೇಕು. ಆದ್ದರಿಂದ ನಾನು ಅಲಂಕಾರ ಮಾಡಿಕೊಂಡೆ. ಇದನ್ನು ನೋಡಿ ನನ್ನ ಬಂಧುಗಳು ದೋಷಾರೋಪಣೆ ಮಾಡಿದರು. ಆಮೇಲೆ ಆ ಮನೆಯ ಮಾಲೀಕನೊಡನೆ ಒಂದು ಕೋಣೆಯನ್ನು ಕೇಳಿ ಬಾಡಿಗೆಗೆ ತೆಗೆದುಕೊಂಡು ಪ್ರತ್ಯೇಕವಾಗಿ ವಾಸಿಸುವುದೆಂದು ತೀರ್ಮಾನ ಮಾಡಿದೆ.

"ಎರಡು ತಿಂಗಳು ಎಕ್ಸಿಬಿಷನ್ ಮುಗಿಯುವವರೆಗೆ ನನ್ನ ಜೀವನದಲ್ಲಿ ಏನೂ ಕಷ್ಟ ವಾಗಲಿಲ್ಲ. ಅದು ಮುಗಿಯುವ ಮೊದಲನೆಯ ದಿನ ಆ ಸೇಲ್ಸ್ ಮ್ಯಾನೇಜರ್ ನನ್ನ ಬಳಿ ಬಂದು ಬಹಳ ಆದರದಿಂದ ನನ್ನ ಬಗ್ಗೆ ವಿಚಾರಿಸಿದರು. ವಯಸ್ಸಿನಲ್ಲಿ ನನಗೆ ತಂದೆಯ ರೀತಿಯಿಂದ ಇದ್ದುದರಿಂದ ನನ್ನ ನಿರಾಧಾರ ಪರಿಸ್ಥಿತಿಯನ್ನು ಅವರೊಂದಿಗೆ ಹೇಳಿದೆ. ಅವರು ಒಂದು ವಿಳಾಸ ಕೊಟ್ಟು ಮಾರನೆಯ ದಿನ ಅಲ್ಲಿ ಬಂದು ಭೇಟಿ ಯಾಗಲು ಹೇಳಿದರು. ಮಾರನೆಯ ದಿನ ನಾನು ಅಲ್ಲಿ ಹೋದಾಗ... ಉಹುಂ...ಏನು ಹೇಳಲಿ. ಅವರು ನನಗೆ ತೋರಿದ ದಾರಿ ಈಗ ನೀನು ಇರುವೆಯಲ್ಲ ಆ ವೃತ್ತಿಯೇ. ನಾನು ಆಲೋಚಿಸಿದೆ... 'ಇದೇನೇ ಜೀವನಮಾರ್ಗ. ಇದೊಂದೇ ದಾರಿಯೆ? ಬಾಳುವು ದಕ್ಕೆ ಅನ್ಯ ಮಾರ್ಗವೇ ಇಲ್ಲವೆ' ಎಂದುಕೊಂಡೆ. ಬಾಳುವುದಕ್ಕೆ ಹೀಗೂ ಒಂದು ಮಾರ್ಗ ವಿದೆಯೆ? ಬೇರೆ ಮಾರ್ಗ ಕಾಣಲಿಲ್ಲ. ಹಸಿವಿನಿಂದ ಅನಾಥ ಹೆಣವಾಗಿ ಸಾಯುವು ದಾದರೂ ಚಿಂತೆಯಿಲ್ಲ, ಈ ಮಾರ್ಗ ಬೇಡ ಎಂದು ಹೊರಬಂದೆ" – ಎಂದು ಹೇಳಿ ಆರಿ ಹೋದ ಕಾಫಿಯನ್ನು ಒಂದೇ ಗುಟುಕಿಗೆ ಕುಡಿದಳು ರುಕ್ಕು.

"ನಾನಿರುವ ಮನೆಯ ಮಹಡಿಯ ಮೇಲೆ ಒಂದು ಕುಟುಂಬವಿತ್ತು" ಎಂದು ಹೇಳುವಾಗ ಅವಳ ಕಂಠದಲ್ಲಿ ಯಾವ ಮಾರ್ಪಾಡೂ ಮುಖದಲ್ಲಿ ಅರಳುವಿಕೆಯೂ ಕಣ್ಣುಗಳಲ್ಲಿ ಪ್ರಕಾಶವೂ ಮೂಡಿದುದನ್ನು ಪಟ್ಟು ಗಮನಿಸಿದಳು.

"ನಾನು ಕಷ್ಟಪಡುವಾಗಲೆಲ್ಲಾ, ನಿರಾಧಾರವಾಗಿ ಕಣ್ಣೀರು ಬಿಟ್ಟಾಗಲೆಲ್ಲಾ, ಆ ಬಂಧುಗಳು ಚುಚ್ಚುಮಾತುಗಳಿಂದ ನನ್ನನ್ನು ಬಾಧಿಸಿದಾಗಲೆಲ್ಲಾ, ಮೇಲ್ಮನೆಯವರು ನನ್ನನ್ನು ನೋಡುವ ರೀತಿಯಲ್ಲಿ ನನಗೆ ಸಮಾಧಾನವೆನಿಸುತ್ತಿತ್ತು. ಅವರು ನನಗೆ ಸಹಾಯ ಮಾಡಬಲ್ಲರೆಂದು ಮಾಡುತ್ತಾರೆಂದೂ ತೋರಿತು. ಅಂದು ಸೇಲ್ಸ್ ಮ್ಯಾನೇಜ ರನ್ನು ಕಂಡು ಹೃದಯ ಬಿರಿದು ಹಿಂತಿರುಗಿ ಬಂದಾಗ ದಾರಿಯಲ್ಲಿ ಅವರನ್ನು ನೋಡಿದೆ... ನನ್ನ ನಂಬಿಕೆಗೆ ಸರಿಯಾಗಿ ಅವರು ಸಹಾಯ ಮಾಡಲು ಮುಂದಾದರು... 'ನೀವೆಲ್ಲಿ ಹೋಗಿ ಬರುತ್ತೀದ್ದೀರೆಂಬುದನ್ನು ನಾನು ಬಲ್ಲೆ' – ಎಂದು ಅವರು ನನ್ನೊಂದಿಗೆ ಮಾತ ನಾಡಲಾರಂಭಿಸಿದರು. 'ಅಯ್ಯೋ, ದೇವರೆ ನನ್ನ ಬಗ್ಗೆ ಅನ್ಯಾಯವಾಗಿ ಇವರು ತಪ್ಪು ಅಭಿಪ್ರಾಯ ಪಡುವಂತಾಯಿತಲ್ಲ' ಎಂದು ನೆನೆಸಿಕೊಂಡಾಗ ನನಗೆ ಅಳುವನ್ನು ತಡೆಯಲಾಗಲಿಲ್ಲ...

"ಆದರೆ ಅವರು ನಗುತ್ತಲೇ ಹೇಳಿದರು. 'ಅದರಿಂದ ತಪ್ಪೇನೂ ಇಲ್ಲ – ನಿಮಗೆ ತಿಳಿಯದೆ ಹೋಗಿದ್ದೀರಿ; ತಿಳಿದೊಡನೆ ಮನಸ್ಸು ಒಪ್ಪದೆ ಹಿಂತಿರುಗಿ ಬಂದುಬಿಟ್ಟಿರೆಂಬು ದನ್ನು ಬಲ್ಲೆ. ಇನ್ನು ಮುಂದೆ ಏನು ಮಾಡುತ್ತೀರಿ? ಎಂದು ಕೇಳಿದರು... ನನ್ನ ಬಗ್ಗೆ ಅಷ್ಟು ಅಕ್ಕರೆಯಿಂದ ನನ್ನನ್ನು ಅವರು ಕಾಯುತ್ತಲೇ ಬಂದಿದ್ದಾರೆಂದು ತಿಳಿದು'ನೀವು ಹೇಳಿದಂತೆ ಮಾಡುತ್ತೇನೆ' ಎನ್ನಬೇಕೆಂದು ತೋರಿತು. ಆದರೆ ಏನು ಹೇಳಲೂ ನನಗೆ ಆಗಲಿಲ್ಲ – ಮಾತನಾಡದೆ ನಿಂತೆ. ಅವರೇ ಮಾತನಾಡಲಾರಂಭಿಸಿದರು: 'ನಿಮ್ಮನ್ನು ನಿಮ್ಮ ಮನಸ್ಸನ್ನು, ತಿಳುವಳಿಕೆಯನ್ನು ನಾನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ; ಹೇಳಿದರೆ – ನಿಮಗೆ ಬಹಳ ಆಶ್ಚರ್ಯವೆನಿಸಬಹುದು. ಯಾವುದನ್ನೂ ತಪ್ಪಾಗಿ ಭಾವಿ ಸುವುದಿಲ್ಲವೆಂದು ನನ್ನ ನಂಬಿಕೆ. ನಾಳೆ ಬೆಳಿಗ್ಗೆ ನನ್ನೊಡನೆ ಬರುವುದಾದರೆ ನಿಮ್ಮನ್ನು ಒಂದು ಗೌರವವಾದ ಉದ್ಯೋಗದಲ್ಲಿ ಸೇರಿಸಬಯಸುತ್ತೇನೆ' ಎಂದು ಅವರು ಹೇಳಿದಾಗ, ನನ್ನ ಬಾಳಿಗೇ ಬೆಳಕು ಬಂತೆಂದು ಸಂತೋಷಪಟ್ಟೆ......" ಎಂದು ರುಕ್ಕು ಎದೆ ಬಿರಿಯು ವಂತೆ ನಿಟ್ಟುಸಿರು ಬಿಟ್ಟಳು.

ಆಗ ಮತ್ತೆ ಸರ್ವರ್ ಬಂದು ಇಣುಕಿ ನೋಡಿದ, "ಪಟ್ಟು, ಇನ್ನೊಂದೊಂದು ಕಾಫಿ ಹೇಳೋಣವೆ?"

"ನನಗೆ ಬೇಡ..." ಎಂದು ಪಟ್ಟು ನಿರಾಕರಿಸಲು, "ಕಾಫಿಗಾಗಿ ಅಲ್ಲ... ಇನ್ನು ಸ್ವಲ್ಪ ಹೊತ್ತು ಇಲ್ಲೇ ಇದ್ದು ಮಾತನಾಡಬಹುದು... ಅದೂ ಅಲ್ಲದೆ ಮೊದಲು ತಂದಿಟ್ಟ ಕಾಫಿ ಬಹಳ ಆರಿಹೋಗಿತ್ತು – ಒನ್ ಬೈ ಟೂ ಕುಡಿಯಬಹುದಲ್ಲ" – ಎಂದು ಅವಳೊಂದಿಗೆ ಹೇಳಿ ಸರ್ವರ್‌ಗೆ ಆರ್ಡರ್ ಕೊಟ್ಟಳು.

"ಮಾರನೆಯ ದಿನ ಅವರೊಂದಿಗೆ ಅವರು ಕರೆದೊಯ್ದ ಜಾಗಕ್ಕೆ ಹೋದೆ... ಅದುವರೆಗೆ ನನಗೆ ಗೊತ್ತಿರಲಿಲ್ಲ ಅವರು ಬಹಳ ದೊಡ್ಡ 'ಆರ್ಟಿಸ್ಟ್' ಎಂದು. ಆ ಸ್ಥಳವೇ ಒಂದು ಪುನೀತವಾದ ದೇವಾಲಯದಂತೆ ಇತ್ತು. 'ಚಿತ್ರಶಿಲ್ಪಕಲಾ ಶಾಲೆ' ಎಂದು

ಹೆಸರು ಕೇಳಿದ್ದೀಯಾ...? ನಾನು ಹೋಗಿದ್ದು ಅಲ್ಲಿಗೆ. ಹೊರ ವರಾಂಡದಲ್ಲಿ ಹತ್ತಿಪ್ಪತ್ತು ವಿದ್ಯಾರ್ಥಿಗಳು ಮೇಣದಲ್ಲಿ ಪ್ರತಿಮೆಗಳನ್ನು ಮಾಡುತ್ತಿದ್ದರು... ಒಳಗೆ ಒಂದು ಹಾಲ್‌ನಲ್ಲಿ 'ಕ್ಲಾಸ್' ನಡೆಯುತ್ತಿತ್ತು. ನನ್ನನ್ನು ಮೇಲಿನ ಮಹಡಿಗೆ ಕರೆದುಕೊಂಡು ಹೋದರು. ಅಲ್ಲಿ ಗೋಡೆಗೆ ಹಾಕಿದ್ದ ಚಿತ್ರಗಳನ್ನು ನೋಡಿ ನನಗೆ ಮೈ ಕಂಪಿಸಿತು...

"— 'ಇವನ್ನು ನೋಡುತ್ತಿರಿ' – ಎಂದು ಹೇಳಿ ಅವರು ಕೆಳಗೆ ಹೋದರು. ನಾನು ಆ ಹಾಲ್‌ನಲ್ಲಿ ಎಲ್ಲ ಕಡೆ ಸುತ್ತಿ ನೋಡಿದೆ. ಮಧ್ಯೆ ಒಂದು ದೊಡ್ಡ ರಂಗವಿತ್ತು. ಅದರ ನಾಲ್ಕು ಕಡೆ – ಮೇಲೆ ದೊಡ್ಡ ಲೈಟುಗಳು... ಅದು ಸುತ್ತುವ ರಂಗ; ಅದರ ಸುತ್ತಲೂ ಸ್ಟಾಂಡ್‌ಗಳು, ಪಕ್ಕದಲ್ಲಿ ಸ್ಟೂಲಿನ ಮೇಲೆ ಚಿತ್ರರಚನೆಗೆ ಬೇಕಾದ ವರ್ಣಗಳು, ಪೆನ್ಸಿಲ್ ಬ್ರಷ್ – ಏನೇನೋ ಇದ್ದುವು. ಆ ಚಿತ್ರಗಳೆಲ್ಲಾ ಈಗ ನೀನು ನೋಡಿದೆಯಲ್ಲಾ ಇದಕ್ಕಿಂತಲೂ ದೊಡ್ಡ, ವರ್ಣರಂಜಿತ – ಇದ್ದಲಿನಿಂದ ಹಾಕಿದ ರೇಖೆಗಳು – ಹೆಣ್ಣು ಗಂಡು ಚಿತ್ರಗಳು. ಎಲ್ಲವೂ ನಿರ್ವಾಣ ರೀತಿಯಲ್ಲೇ ಅಲಂಕರಿಸಿದ್ದುವು... ಅವುಗಳಲ್ಲಿ ಆಭಾಸವಿದ್ದುದಾಗಿ ಆಗ ತೋರಿದುದು ಭ್ರಮೆಯೆಂದು ಈಗ ಅರ್ಥವಾಗುತ್ತಿದೆ. ಆದರೆ ಆಗ ನನಗೆ ಏನೂ ಅರ್ಥವಾಗಲಿಲ್ಲ. ಚಿತ್ರವೊಂದರ ಕೆಳಗೆ ಒಂದು ಪಕ್ಕಕ್ಕೆ "ರುದ್ರ" ಎಂದು ಬರೆದಿತ್ತು. ಹೌದು, ಅವರ ಹೆಸರು ಅದೇ...

"ಸ್ವಲ್ಪ ಹೊತ್ತಿಗೆಲ್ಲಾ – ಎರಡು ಕೈಗಳಲ್ಲೂ ಐಸ್ ಹಾಕಿದ ಕೂಲ್ ಡ್ರಿಂಕ್ಸ್ ತೆಗೆದುಕೊಂಡು ನನ್ನನ್ನು ನೋಡಿ ಮಂದಸ್ಮಿತರಾಗಿಯೇ ಅವರು ಬಂದರು. ನನಗೆ ಅವರನ್ನು ತಪ್ಪಾಗಿ, ಅಸಹ್ಯವಾಗಿ ಎಣಿಸಲಾಗಲಿಲ್ಲ......

"ಅವರು ನನ್ನ ಕೈಯಲ್ಲಿ ಒಂದು ಗ್ಲಾಸು ಕೊಟ್ಟು ತಮ್ಮ ಕೈಯಲ್ಲಿದ್ದುದನ್ನು ಹಿಡಿದುಕೊಂಡೇ ಕುಡಿಯುತ್ತಾ ಅಲ್ಲಿದ್ದ ಚಿತ್ರಗಳ ಕಡೆ ಗಮನಹರಿಸಿದರು... 'ಇವರೆಲ್ಲಾ ನಿಮ್ಮಂತೆಯೇ ಗೌರವಸ್ಥರಾದ ಹೆಣ್ಣುಮಕ್ಕಳು' ಎಂದರು... ನಾನು ಉತ್ತರವೇನೂ ಕೊಡಲಿಲ್ಲ... ಅವರು ಮುಂದುವರಿಸಿ ಹೇಳಿದರು : 'ಇದು ಒಂದು ದೇವಾಲಯದಂತೆ. ಇಲ್ಲಿ ಸೌಂದರ್ಯವೇ ದೇವರು. ಪ್ರಕೃತಿಯೇ ಸೌಂದರ್ಯ. ಸುಂದರವಾದ ಪಶುವಿಗೋ, ನವಿಲಿಗೋ, ಗೂಳಿಗೋ ಜಿಂಕೆಗೋ ಹತ್ತು ಮೊಳದ ಬಟ್ಟೆ ಸುತ್ತಿದರೆ ಅವುಗಳ ಸೌಂದರ್ಯ ಎಷ್ಟು ಆಭಾಸವಾಗಿ ಪರಿಣಮಿಸುತ್ತದೆಯೆಂದು ಕಲ್ಪನೆ ಮಾಡಿಕೊಂಡು ನೋಡಿ...'

"— ...ಮಾನವನ ಸೌಂದರ್ಯಕ್ಕಿಂತ ಅವನು ತೊಡುವ 'ಉಡುಗೆ' – ಸುಂದರವಾಗಿಬಿಟ್ಟಿತಲ್ಲ...ಉಡುಗೆಗೆ ಪ್ರತ್ಯೇಕ ಸೌಂದರ್ಯವಿದೆ... ಇಲ್ಲಿ ಅದಕ್ಕೇ ಒಂದು ತರಗತಿ ಇದೆ. ಅಲ್ಲಿ ಡಿಜೈನ್, ಎನ್‌ಗ್ರೇವಿಂಗ್ ಎಲ್ಲಾ ಅಭ್ಯಸಿಸುತ್ತಾರೆ ಮಾನವನ ಸೌಂದರ್ಯವೆಂಬುದು ಉಡುಗೆಯ ಸೌಂದರ್ಯವಲ್ಲ... ಇನ್ನೂ ಹೇಳಬೇಕೆಂದರೆ ಉಡುಗೆ ತೊಡುಗೆ, ಆಭರಣ – ಶೃಂಗಾರಗಳು ಆಭಾಸವೇ ಸರಿ... ಸೌಂದರ್ಯವನ್ನು ಕೆಡಿಸುವ ಕೃತ್ಯಕ್ಕೆ

ಹೆಸರೇ ಆಭಾಸವಲ್ಲವೆ? ಹೀಗೆ ನಾನು ಹೇಳುವರಿಗೂ ನೀವು ಒಂದು ವಿಚಾರವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಈ ನಿರ್ಣಯಗಳೆಲ್ಲಾ ಕಲಾಪ್ರಭೆಯ ಮುಂದೆ... ಈ ಹಾಲ್‌ನಲ್ಲಿನ ಪುನೀತನಕ್ಕೆ ಹೊರಗಾಗದು. ಹೊರಗಾಗಲೂ ಬಾರದು.

"ಕಲಾವಿದರ ಹೃದಯ ಪ್ರಭೆಯಿಂದ ಕೂಡಿದುದು. ಜಗತ್ತಿನ ಹೃದಯ ಕಪಟತನ, ಮೋಸ ಮತ್ತು ಸುಳ್ಳಿನಿಂದ ತುಂಬಿದುದು. ಈ ಸೌಂದರ್ಯದ ಹೆಸರಿನ ಪ್ರಕಾಶವನ್ನು ಆ ನಯನಗಳು ತಾಳಲಾರವು. ಆದುದರಿಂದ ಕಳ್ಳಮನಸ್ಸುಳ್ಳವರಿಗೆ ಸೌಂದರ್ಯದ ರಸಾಸ್ವಾದನೆಯ ಅರಿವಾಗುವುದಿಲ್ಲ. ಇಲ್ಲಿ ಸೌಂದರ್ಯ ಆರಾಧನೆಗೆ ಅವಶ್ಯಕವೆನಿಸಿಕೊಳ್ಳುತ್ತದೆ – ಅಲ್ಲಿ 'ಆವಶ್ಯಕ' ಎಂದರೆ ಎಲ್ಲಾ ಆಭಾಸಗಳೂ – ಅದು ಆವಶ್ಯಕವೆಂದರೆ – ಅಲ್ಲಿ 'ಸುಂದರವಾಗಿ ಬಿಡುತ್ತವೆ; ಚೆನ್ನಾಗಿ ಆಲೋಚಿಸಿ ನೋಡಿ...ನಿರ್ವಾಣವೆಂದರೆ ಆಭಾಸವೆ? ಯೋಚಿಸಿ ನೋಡಿ. ನಿಮ್ಮ ದೇಹದ ಸೌಂದರ್ಯವನ್ನು ನೀವು ರಸಿಕತನದಿಂದ ಕಂಡಿಲ್ಲವೆ ಒಬ್ಬರೇ...ಅದರಲ್ಲಿ ಆಭಾಸವಿದೆಯೆಂದು ಅಭಿಪ್ರಾಯಪಡುವಿರೇನು? ಇಲ್ಲವಲ್ಲ... ಆ ಏಕಾಗ್ರ ಚಿಂತನೆಯನ್ನು ನಿಮ್ಮ – ಪ್ರಪಂಚದ – ಕಲಾವಿದ ಮಾಡುತ್ತಾನೆ...ಆ ನಂತರ 'ನಾನು – ನೀನು' ಎಂಬ ಭೇದವಿಲ್ಲ'. ನಿತ್ಯವಲ್ಲದ ಅಸತ್ಯ ಸೌಂದರ್ಯದಿಂದ ನಿರಂತರವಾದ ಒಂದು ಪ್ರತಿಮೆಯನ್ನು ರೂಪಿಸಲು ಕಲಾವಿದ ಸೌಂದರ್ಯವನ್ನು ಬಳಸಿಕೊಳ್ಳುತ್ತಾನೆ. ನಿಜವಾಗಿ ಕಾಣುವ ನಿಮ್ಮ ದೇಹಸೌಂದರ್ಯ ನಿರಂತರವಲ್ಲದ ಒಂದು ಸುಳ್ಳು. ಸುಳ್ಳಾಗಿ ಕಾಣುವ ಈ ಚಿತ್ರ ಶಾಶ್ವತವಾದ – ನಿತ್ಯವಾದ ಸತ್ಯ. ನೀವು ಭಗವಂತನ ಸೃಷಿ. ಆದರೆ ಭಗವಂತ ಸೃಷ್ಟಿಸಲಾದುದು ಸುಳ್ಳಾದುದನ್ನೇ. ಅದರಿಂದ ಸತ್ಯವನ್ನು ಬೆಳೆಸಿದುದು ಮಾನವನ ಕರಗಳು ... ಮಾನವನು ಸೃಷ್ಟಿಸಿದ ಕಲೆಯೇ ಸತ್ಯ... ಹೀಗೆ ಮಹತ್ತರವಾದ ಕೃತಿಯಲ್ಲಿ ಅಲ್ಪ ಭಾವನೆಗಳಿಗೆ ಎಡೆಯೇ ಇಲ್ಲ. ಆ ಅಲ್ಪ ವಿಷಯಗಳಲ್ಲಿ ಸಾರವೂ ಇಲ್ಲ. ಅದೆಲ್ಲಾ ಬೆಂಕಿಯಲ್ಲಿ ಬಿದ್ದ ತರಗೆಲೆಯಂತೆ.

'ಇದೋ ಈ ರಂಗದ ಮೇಲೆ ನೀವೇರಿದ ತಕ್ಷಣ ಪ್ರಕೃತಿಯ ಒಂದು ಅಂಶವಾಗಿ ಬದಲಾವಣೆ ಹೊಂದುತ್ತೀರಿ. ಆಗ ನಿಮಗೆ ಉಡುಗೆ ಇರಬಹುದು ಇಲ್ಲದೆಯೂ ಇರಬಹುದು. ಅದು ತರಗೆಲೆಯಲ್ಲ. ಇಲ್ಲಿ ಸೌಂದರ್ಯವೇ ಉಡುಗೆ. ಕಲಾವಿದನ ಕರ್ತವ್ಯ ಅದರ ಮೇಲೆ ಆಸೆಪಡುವುದಲ್ಲ. ಆ ಸುಳ್ಳಿನಿಂದ ಸತ್ಯವನ್ನು ಪಡೆಯುವುದು ಅವನ ಕರ್ತವ್ಯ. ಆಗ ಲಿಂಗಭೇದ ತೊಲಗಿಹೋಗುತ್ತದೆ. ನೀವು ಏನೂ ಅರಿಯದ ಮಗುವಿನಂತೆ ಕುಳಿತುಕೊಂಡೋ ಮಲಗಿಕೊಂಡೋ ಇರುತ್ತೀರಿ. ಮಗು ನಿರ್ವಾಣವಾಗಿಯೇ ಇರುತ್ತದೆ. ಅದು ಆಭಾಸವಲ್ಲ. ನಿಮ್ಮ ಚಿತ್ರವನ್ನು ರಚಿಸುವ ಕಲಾವಿದರಲ್ಲಿ ಯಾರಾದರೊಬ್ಬರು ಪೂರ್ಣ ಕಲೆಗಾರನಾಗದೆ ಆಭಾಸವಾದ ಭಾವ ಹೊಂದಿದರೆ ತಾನೆ ಏನು? ಯಾವ ಹೆಸರಿನಲ್ಲಿ ತಾನೆ ಜಗತ್ತಿನಲ್ಲಿ ತಪ್ಪು ನಡೆದಿಲ್ಲ? ಮಗುವನ್ನು ನೋಡಿ ಕೆಲವು ವಕ್ರಮನಸ್ಸಿನವರು ಆಭಾಸರಸಾಸ್ವಾದನೆಯಲ್ಲಿ ತೊಡಗಬಹುದು. ಅದು ಮಗುವಿಗೆ ಸೇರಿದ ಪ್ರಶ್ನೆ

ಯಲ್ಲ. ಮಗುವನ್ನು ಯಾವ ರೀತಿಯಿಂದಲೂ ಅದು ಬಾಧಿಸುವುದೂ ಇಲ್ಲ. ಬಾಧೆ ಯೆಲ್ಲಾ ಅವನಿಗೇ...'

"— ಹೀಗೆ ಬಹಳ ಹೊತ್ತು ಅನೇಕ ವಿಚಾರಗಳನ್ನು ಅವರು ವಿವರಿಸಿದರು. ನಾನು ಏನೊಂದು ಮಾತೂ ಆಡಲಿಲ್ಲ. ಆದರೆ ಬಂದಾಗ ಇದ್ದಂತೆ ಬಾಗಿದ ತಲೆಯೊಂದಿಗೆ ನಿಲ್ಲದೆ, ತಲೆಯೆತ್ತಿ ಅಲ್ಲಿದ್ದ ಚಿತ್ರಗಳನ್ನು ನೋಡಿದೆ. ಮನಸ್ಸಿನಲ್ಲಿ ನಾಚಿಕೆಯೆನಿಸಲಿಲ್ಲ. ಆ ಸೌಂದರ್ಯ ನನಗೆ ಹಿಡಿಸಿತು.

"ಕಡೆಯಲ್ಲಿ ಅವರೆಂದರು: 'ಇದು ಒಂದು ವೃತ್ತಿಯಲ್ಲ... ಇದು ಉನ್ನತ ಕಲಾರಾಧನೆ. ಆದುದರಿಂದಲೇ ಅಂತಹ ಉನ್ನತ ಕೆಲಸಕ್ಕೆ ನಿಮ್ಮನ್ನು ಉಪಯೋಗಿಸಿಕೊಳ್ಳಬೇಕೆಂದು ಬಯಸಿದೆ. ಇದಕ್ಕೆ ನಾವು ಕೊಡುವ ಹಣ ಕಲಾವಿದನೊಬ್ಬನಿಗೆ ಸಲ್ಲಿಸುವ ಸನ್ಮಾನವೇ ಹೊರತು ಬೆಲೆಯಾಗಲಿ, ಸಂಬಳವಾಗಲಿ ಅಲ್ಲ. ಇವನ್ನು ನೀವು ಅರ್ಥ ಮಾಡಿಕೊಂಡು 'ಮಾಡೆಲ್' ಆಗಿ ಇರಲು ಸಮ್ಮತಿಯಿದ್ದರೆ ಇರಬಹುದು. ಇಲ್ಲದಿದ್ದರೆ ಇಲ್ಲಿ ಬೇರೆ ಏನಾದರೂ ಒಂದು ಉದ್ಯೋಗಕ್ಕೆ ಏರ್ಪಡಿಸೋಣವೆಂದು ಕರೆದುಕೊಂಡು ಬಂದೆ. ಈಗ ಇಲ್ಲದಿದ್ದರೂ ಕೆಲವು ದಿನಗಳಲ್ಲಿ ಈ ಕಲೆಯನ್ನು ಅರ್ಥಮಾಡಿಕೊಂಡು ಈ ಕಲೆಗೆ ಸಹಾಯ ಮಾಡಬಲ್ಲಿರಿ, ಎಂದಾಗ ಒಂದು ಕ್ಷಣ ಕೂಡ ನಿಧಾನಿಸದೆ 'ಈ ಕಲೆಗೆ ನಾನು ಸಹಾಯಮಾಡಬಲ್ಲೆನಾದರೆ ಅದನ್ನು ಹೆಮ್ಮೆಯಿಂದ ಪರಿಗಣಿಸಿ ಮಾಡೆಲ್ ಆಗಿರುತ್ತೇನೆ" ಎಂದು ಹೇಳಿದೆ.

— ಆಗ ಕಾಫಿ ಬಂದಿತು. ಅದನ್ನು ಮೇಜಿನ ಮೇಲಿಟ್ಟು ಸರ್ವರ್ ಮೊದಲು ತಂದ ಬಿಲ್ಲನ್ನು ತೆಗೆದುಕೊಂಡು ತಿದ್ದಿ ಇಟ್ಟ. ರುಕ್ಕು ಹಳೆಯ ನೆನಪುಗಳ ಬಗ್ಗೆ ಸರಪರನೆ ಮಾತನಾಡಿ ಬೆವರಿಟ್ಟಳು. ಕಾಫಿಯನ್ನು ಆರಿಸಿ ಅರ್ಧಮಾಡಿ ಪಟ್ಟುವಿಗೆ ಲೋಟ ಕೊಟ್ಟು ಸಾಸರ್‌ನಲ್ಲಿ ಹಾಕಿದಳು. ಏನೂ ಅರ್ಥವಾಗದೆ ದಿಗ್ಭ್ರಮೆಗೊಂಡವಳಂತೆ ಆಳವಾದ ಚಿಂತನೆಯಲ್ಲಿ ಕುಳಿತಿದ್ದಳವಳು. ಪಟ್ಟುವಿನ ಮನದಲ್ಲಿ ತುಂಬಿದ ಸತ್ಯವಾದ, ಪುನೀತವಾದ ಅಭಿಪ್ರಾಯಗಳು ಹೇಳಲ್ಪಟ್ಟು ಮಾತಿಲ್ಲದಂತೆ ಮಾಡಿದುವು. ತನ್ನಂತೆ ರುಕ್ಕುವನ್ನೂ ತುಚ್ಛವಾಗಿ ಭಾವಿಸಿ ಮಾತನಾಡಿದುದಕ್ಕೆ ವ್ಯಥೆಪಟ್ಟಳು. ಹಾಗೆ ಮಾತನಾಡಿದಾಗಲೂ ತನ್ನ ಮೇಲೆ ಬೇಸರಗೊಳ್ಳದ ರುಕ್ಕುವಿನ ದೊಡ್ಡತನವನ್ನು ಎಣಿಸಿ ಆಶ್ಚರ್ಯಗೊಂಡಳು. ಎಲ್ಲಕ್ಕೂ ಮೇಲಾಗಿ ಅವಳ ಪ್ರತ್ಯೇಕ ಸ್ವಂತ ಪ್ರಶ್ನೆಗಳು ಮನದಲ್ಲಿ ಕುದಿದೇಳುತ್ತಿದ್ದುವು. ಇವಳನ್ನು ಸಂಧಿಸಿದ ಮೇಲೆ ಮತ್ತೆ ಆ ಕತ್ತಲೆಯ ತುಚ್ಛ ಕೋಣೆಗೆ ಹಿಂತಿರುಗಿ ಹೋಗುವುದನ್ನು ನೆನೆಸಿ ತನ್ನ ಹಣೆಬರಹಕ್ಕೆ ಒಂದು ಬಾರಿ ಜೋರಾಗಿ ಅಳಬೇಕೆನಿಸಿತು. ಆ ಭಾವವನ್ನು ನುಂಗಿಕೊಂಡುದರಿಂದ ಅವಳ ಮುಖ ಕೆಂಪಡರಿ ಕೊರಳ ನರಗಳು ಉಬ್ಬಿ ಕಣ್ಣುಗಳಲ್ಲಿ ಅಶ್ರುಬಿಂದುಗಳು ಮೂಡಿದುವು.

ಕಾಫಿಯನ್ನು ಕುಡಿಯುತ್ತಾ ರುಕ್ಕು ಹೇಳಿದಳು: "ಏನೋ ಒಂದು ಪುನೀತಭಾವನೆಯಿಂದ ಧೈರ್ಯವಾಗಿ ಒಪ್ಪಿದೆನೇ ವಿನಃ ಮೊದಲನೆಯ ದಿನ ಹತ್ತು ಹದಿನೈದು

ಕಲಾವಿದರ ಮಧ್ಯೆ, ರಂಗದ ಮೇಲೆ ಹೋದೆ. ಲೈಟುಗಳು ಆನ್ ಆದುವು. ಉಡುಪನ್ನು ಕಳಚುವಂತೆ ಹೇಳಿದಾಗ ತತ್ತರಿಸಿದೆ. ಓಡಿಹೋಗಿಬಿಡಬೇಕೆನಿಸಿತು. ಆದರೆ ಅದೂ ಸಾಧ್ಯವಾಗಲಿಲ್ಲ. ಹೆಜ್ಜೆ ಮುಂದಿಡಲಾಗಲಿಲ್ಲ... ಆ ಸಮಯದಲ್ಲಿ ಅವರು ಹೇಳಿದ ಮಾತುಗಳನ್ನು ನೆನೆಸಿಕೊಂಡೆ.

"...ಇಲ್ಲಿ ಸೌಂದರ್ಯವೇ ಉಡುಪು; ಒಂದು ಮಹತ್ತರ ಕೃತಿಯಲ್ಲಿ ಅಲ್ಪವಾದ ಭಾವನೆಗಳಿಗೆ ಎಡೆಯಿಲ್ಲ. ಆ ಅಲ್ಪ ವಿಷಯಗಳಿಗೆ ಇಲ್ಲಿ ಯಾವ ಅರ್ಥವೂ ಇಲ್ಲ. ಬೆಂಕಿಯಲ್ಲಿ ಬಿದ್ದ ತರಗೆಲೆಯಂತೆ ಅವೆಲ್ಲಾ...ಇದೋ ಈಗ ರಂಗದ ಮೇಲೆ ನೀವೇರಿದ ತಕ್ಷಣವೆ ಪ್ರಕೃತಿಯ ಒಂದು ಅಂಶವಾಗಿ ಬದಲಾವಣೆ ಹೊಂದುತ್ತೀರಿ – ಎಂಬ ಮಾತು ಗಳನ್ನು ಪೂರ್ಣ ಮನಸ್ಸಿನಿಂದ ತೆಗೆದುಕೊಂಡ ಮೇಲೆ ನನ್ನ ದೇಹದಲ್ಲಿ ಕಂಪನ ಕಡಿಮೆ ಯಾಯಿತು. ನನ್ನ ಕೆಲಸವನ್ನು ಕುರಿತು ನನಗೆ ನಾಚಿಕೆಯಾಗಲಿ ಅವಮಾನವಾಗಲಿ ಇಲ್ಲ ಅವರು ಹೇಳಿದುದು ನಿಜ. ಇದು ತುಚ್ಛವಾದ ವೃತ್ತಿಯಲ್ಲ ಉನ್ನತವಾದ ಕಲಾರಾಧನೆ ಎಂದು ರುಕ್ಕು, ಮುಂದೆ ಮಾತನಾಡುವ ಆಲೋಚನೆಯಲ್ಲಿ ಮೌನವಹಿಸಿದಳು.

ಇಷ್ಟು ಹೊತ್ತು ಮಾತನಾಡದಿದ್ದ ಪಟ್ಟು ಥಟ್ಟನೆ ಹೊಸ ಬಟ್ಟೆಯನ್ನು ಹರಿದಂತೆ ಒಂದು ಮಾತನ್ನು ಚುಚ್ಚುವಂತೆ ಒತ್ತಿ ಹೇಳಿದಳು: "ಎಲ್ಲಾ ಹೊಟ್ಟೆಯ ಪಾಡಿಗಾಗಿ ತಾನೆ?"

"ಕಲೆ – ಅದು – ಇದು – ಹಾಗೆ ಹೀಗೆಂದು ನೀನು ಏನು ಹೇಳಿದರೂ ಹೊಟ್ಟೆ ತಾನೆ ನಿನ್ನನ್ನು ಕರೆದೊಯ್ದು ಅಲ್ಲಿ ನಿರ್ವಾಣವಾಗಿ ನಿಲ್ಲಿಸುವುದು...? ...ಉಂ...ನೀನು ಅದನ್ನೇ ಗೌರವತನವೆಂದು ಹೇಳಬಹುದು. ಅದೇ ಕಾರಣದಿಂದ ನಾನೂ..." ಎಂದು ಮುಂದೆ ಹೇಳಬೇಕೆಂದುದನ್ನು ನುಂಗಿಕೊಂಡಳು ಪಟ್ಟು.

"ಹೌದು, ನೀನು ಕತ್ತಲಲ್ಲಿ ನಿಂತಿದ್ದೀಯೆ! ನಾನು ಬೆಳಕಿನಲ್ಲಿ ನಿಂತಿದ್ದೇನೆ. ಬೆಳಕಿಗೂ ಕತ್ತಲಿಗೂ ವ್ಯತ್ಯಾಸವಿದೆಯೆಂದು ಹೇಳಿದರೆ ಸಾಕೆ? ಇದಕ್ಕೆ ಅದು ಪೂರಕವಾದುದೇ ಅಲ್ಲವೆ? ಆದುದರಿಂದಲೇ ಒಂದು ಗೌರವವಾದುದು ಇನ್ನೊಂದು ತುಚ್ಛ. ಅದು ಸರಿ 'ಎಲ್ಲಾ ಹೊಟ್ಟೆಯ ಪಾಡಿಗಾಗಿ' ಎಂದೆ. ಎಲ್ಲಾ ಒಂದೇ ಎಂಬ ತೀರ್ಮಾನ ಮಾಡಿ ಬಿಡಬೇಡ. ಕಲೆಗಾರ ಹೊಟ್ಟೆಗಿಲ್ಲದೆ ಸೊರಗಿ ಹೋಗಬಹುದು, ಇಲ್ಲವೇ ಅವನು ಕಲೆಯ ಮೂಲಕ ಕೋಟ್ಯಾಂತರ ರೂಪಾಯಿಗಳನ್ನು ಸಂಪಾದಿಸಬಹುದು. ಆದರೆ ಅವನು ಕಲಾಸೃಷ್ಟಿ ಮಾಡುವುದು ಅದಕ್ಕಾಗಿ ಅಲ್ಲ. ನನ್ನನ್ನು ಯಾರೂ ಕಡ್ಡಾಯಪಡಿಸಲಿಲ್ಲ. ಯಾರನ್ನಾದರೂ ತೃಪ್ತಿಪಡಿಸುವುದಕ್ಕೋಸ್ಕರ ಆ ಕೆಲಸ ನಾನು ಮಾಡಲಿಲ್ಲ. ಹಾಗೆ ಮಾಡಲಾಗದಮ್ಮ! ಅದರ ಅಂತರ್ಯವನ್ನು ಅರ್ಥಮಾಡಿಕೊಳ್ಳಬೇಕು. ಆಗಲೇ ಅದು ಸಾಧ್ಯ.

"ಈಗ ನಾನು ಅಲ್ಲೇ ಉದ್ಯೋಗ ವಹಿಸಿದ್ದೇನೆ. ಈಗಲೂ 'ಮಾಡೆಲ್' ಆಗಿ ಹೋಗಿ ನಿಲ್ಲುವುದರಲ್ಲಿ ನನಗೆ ಅಪಾರ ಆನಂದವಿದೆ. ಅದು ಎಂದೂ ಇರುತ್ತದೆ. ಕಾರಿನಲ್ಲಿ

ಬಂದಿಳಿದು 'ಮಾಡೆಲ್' ಆಗಿ ಬಂದು ನಿಲ್ಲುವ ಶ್ರೀಮಂತಿಕೆಯುಳ್ಳವರೂ ಇದ್ದಾರೆ. ನಿನಗೆ ಹೊಟ್ಟೆಯ ಪಾಡೇ ಸಮಸ್ಯೆಯೆನಿಸಿದರೆ ಕಲೆ ನಿನ್ನ ಹೊಟ್ಟೆಯನ್ನು ತುಂಬಬಲ್ಲದು. ಆದರೆ ಕಲೆಯ ಗುರಿ ಕಲಾವಿದನ ಹೊಟ್ಟೆಯನ್ನು ತುಂಬುವುದಲ್ಲ" ಎಂದು ರುಕ್ಕು ಹೇಳುತ್ತಿರಲಾಗಿ ಪಟ್ಟು ಕಣ್ಣೀರಿಡುತ್ತಾ ಅಳತೊಡಗಿದಳು. "ನನಗೇನು ಗೊತ್ತು. ಅಜ್ಞಾನದಿಂದ ನಾನು ಏನಾದರೂ ಹೇಳಿದ್ದರೆ ಮನ್ನಿಸು ರುಕ್ಕು..." ಎಂದು ಅವಳು ಪರಿತಾಪದಿಂದ ಕೇಳಿದಳು. ರುಕ್ಕು ಅವಳ ಕರಗಳನ್ನು ಒತ್ತಿ ಹಿಡಿದು "ಅಯ್ಯೋ ಪೆದ್ದೇ... ಏನು ಮಾತನಾಡುತ್ತಿರುವೆ? ನಿನಗೆ ಸರಿಯಾಗಿ ಅರ್ಥವಾಗುವಂತೆ ಹೇಳುವು ದಕ್ಕಾಗಿ ಇಷ್ಟು ವಿವರಿಸಿದೆ. ನಿನ್ನ ಬಗ್ಗೆ ನನಗೆ ಜಿಗುಪ್ಸೆಯಾಗುವುದೇನು?" ಎಂದು ನಯವಾಗಿ ಹೇಳಿ ನಸುನಕ್ಕಳು.

"ನೀನು ಮದುವೆಯ ಬಗ್ಗೆ ಯೋಚಿಸಲೇ ಇಲ್ಲವೆ?" ಎಂದು ಮಾತನ್ನು ಬದಲಾಯಿ ಸಿದಳು ಪಟ್ಟು. ರುಕ್ಕು ಒಂದು ನಿಮಿಷ ತಡೆದು ಹೇಳಿದಳು: "ಇಲ್ಲ... ಹಾಗೆ ತಕ್ಕ ವ್ಯಕ್ತಿಯೊಬ್ಬರನ್ನು ನಾನು ಸಂಧಿಸಿಯೇ ಇಲ್ಲ."

ರುಕ್ಕುವಿನ ಮಾತು ಮತ್ತು ಪರಿಸ್ಥಿತಿಯನ್ನು ಕಂಡ ಪಟ್ಟುವಿಗೆ ಒಳಗೊಳಗೇ ಹೆಮ್ಮೆಯೆನಿಸಿತು.

"ಸರಿ, ನನ್ನೊಂದಿಗೇ ಬಂದಿರು ನೀನೂ. ಈ ವೃತ್ತಿಯನ್ನು ನೀನು ಸರಿಯಾಗಿ ಅರ್ಥ ಮಾಡಿಕೊಂಡರೆ ನಾಳೆಯೇ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ನಿನಗೆ ಇಷ್ಟವೆ?" ಎಂದು ಕೇಳಿದಳು ರುಕ್ಕು.

ಕೆಳಗೆ ಜಾರಿದ ಹೆಣ್ಣು ಜನ್ಮವಾದ ತನ್ನ ಎದಿರೇ ಪುರುಷವಾಸನೆಯೇ ಇಲ್ಲದ, ಪ್ರಕಾಶಮಾನವಾದ ಕನ್ಯಾಮಣಿಯಾಗಿ ತನ್ನ ಮುಂದೆ ನಿಂತು ಸಹಾಯ ಮಾಡಲೆಂದು ಊರುಗೋಲಿನಂತೆ ಕೈಯಿತ್ತ ಆ ಕರೆಯನ್ನು, ಪಟ್ಟು ನಿರಾಕರಿಸಲಾಗಲಿಲ್ಲ.

ಪುನೀತವಾದುದೂ ಉನ್ನತವಾದುದೂ ಆದ ಆ ಚಿತ್ರ, ಶಿಲ್ಪಕಲಾ ಶಾಲೆಯಲ್ಲಿ ಮಹಡಿಯ ವಿಶಾಲ ಅಂಗಳದಲ್ಲಿ ಭಯದಿಂದ ನಾಚಿಕೆಯಿಂದ ತಲೆಬಾಗಿ ನಡೆದಳು ಪಟ್ಟು.

ತಲೆಕೂದಲು ಬೆಳ್ಳಗಾಗಿ ದಪ್ಪ ಫ್ರೇಂ ಕನ್ನಡಕ ಹಾಕಿದ ನಿಡಿದಾದ ಜುಬ್ಬಾದೊಂದಿಗೆ ಇಳಿದು ಬಂದ ಅವರು – ಪ್ರೊಫೆಸರ್ ರುದ್ರ' ಆಕೆಯನ್ನು ಮಂದಹಾಸದಿಂದ ಸ್ವಾಗತಿಸಿ ಒಳಗೆ ಕರೆದೊಯ್ದರು. ಆ ರಂಗದ ಒಂದಿನ ಸ್ಕ್ರೀನ್ ಹಿಂದೆ ಹೋಗಿ ತನ್ನ ಉಡುಪನ್ನು ಕಳಚಿ ಅಲ್ಲಿದ್ದ ನಿಡಿದಾದ ಅಂಗಿಯನ್ನು ತೊಟ್ಟುಕೊಳ್ಳಬೇಕೆಂದು ರುಕ್ಕು ಅವಳಿಗೆ ಹೇಳಿದಳು.

ಅದರಂತೆ ಅವಳು ಸ್ಕ್ರೀನ್ ಹಿಂದೆ ಮರೆಯಾಗುತ್ತಲೂ ಹೊರಗೆ ಗಂಟೆ ಬಾರಿಸಲ್ಪಟ್ಟಿತು.

ದಢ ದಢ ಎಂದು ಮಹಡಿಯ ಮೆಟ್ಟಲುಗಳ ಮೇಲ ವಿದ್ಯಾರ್ಥಿಗಳು ಬರುವ ಶಬ್ದ ಕೇಳಿಸಿತು. ಸ್ಕ್ರೀನ್ ಹಿಂದೆ ನಿಂತಿದ್ದ ಪಟ್ಟು ತಲೆಯೆತ್ತಿ ನೋಡೆಯ ಮೇಲಿದ್ದ ಕೆಲವು

ಚಿತ್ರಗಳನ್ನು ನೋಡಿದಳು. ಅವಳ ಕಣ್ಣುಗಳು ಮುಚ್ಚಿದುವು. ಆ ಚಿತ್ರಗಳು ಸುಂದರ ವಾಗಿ ಇರುವುದನ್ನು ಕಂಡರೂ 'ಅಂತಹ ಸೌಂದರ್ಯ, ಯೋಗ್ಯತೆ ತನ್ನ ದೇಹಕ್ಕಿಲ್ಲ' ಎಂಬ ಆತಂಕಭಾವದಿಂದ ಅವಳ ಮನ ಮುದುರಿತು. ರುಕ್ಕುವನ್ನು ನೆನೆಸಿಕೊಂಡಳು. 'ಪುನೀತವಾದ ತನ್ನ ದೇಹವನ್ನು ಕುರಿತಾಗಿ ಅವಳಿಗಿರುವ ಹೆಮ್ಮೆ ತನಗಿಲ್ಲವಲ್ಲ' ಎಂದು ಅನಾವಶ್ಯಕವಾಗಿ ವ್ಯಥಿತಳಾದಳು ಪಟ್ಟು.

ಆಗ ಅವರು ಸ್ಕ್ರೀನ್ ಬಾಗಿಲನ್ನು ಮೆಲ್ಲನೆ ತಟ್ಟಿ ಶಬ್ದ ಮಾಡಿದರು.

ಅವಳು ತನ್ನ ಉಡುಪನ್ನು ಕಳಚಿ ಗೌನನ್ನು ಎತ್ತಿ ಹಾಕಿಕೊಳ್ಳುವಾಗ ಮಹಡಿಯ ಪಕ್ಕದಿಂದ ಪ್ರಕಾಶಮಾನವಾಗಿ ಲೈಟುಗಳು ಹತ್ತಿದುವು. ಅವಕ್ಕೆ 'ಷೇಡ್' ಗಳನ್ನು ಹಾಕಿ ನೆರಳು ಬೆಳಕು ಸರಿಬರುವಂತೆ ಏರ್ಪಾಡು ಮಾಡುತ್ತಿದ್ದರು.

'ಅಯ್ಯೋ ಇಷ್ಟು ಬೆಳಕೆ?' ಎಂದು ಕಳವಳಗೊಂಡು ನಿಂತಳು ಪಟ್ಟು. ಸ್ಕ್ರೀನ್‌ನ ನಡುವಿನಿಂದ ಹೊರಕ್ಕೆ ಒಂದು ಕಣ್ಣಿನಿಂದ ನೋಡಿದಳು. ಇಪ್ಪತ್ತು ಮಂದಿಗೂ ಮೀರಿ ಗಂಡಸರು ಕುಳಿತಿದ್ದರು.

ಪಟ್ಟುವಿನ ಶರೀರದಲ್ಲಿ ನಡುಕ, ಮನಸ್ಸಿನಲ್ಲಿ ಆತಂಕವೂ ಹೆಚ್ಚಿದುವು. 'ಆ ರೀತಿ ನಿಲ್ಲಲು ತನ್ನಿಂದ ಆಗದು, ಆ ಶಕ್ತಿ ತನಗಿಲ್ಲ' ಎಂದು ತೀರ್ಮಾನವಾಗಿ ಕಂಡುಬಂದಿತವಳಿಗೆ. ಪ್ರಕಾಶಮಾನವಾಗಿ ಲೈಟುಗಳನ್ನು ಹೊಂದಿಸಿದ ಮೇಲೆ ಮತ್ತೊಮ್ಮೆ ಅವರು ಬಾಗಿಲು ತಟ್ಟಿದರು. – ಅವಳು ಹೊರಗೆ ಬಂದಳು...

ಒಳಗೆ ಹೋಗುವಾಗ ತೊಟ್ಟಿದ್ದ ಉಡುಪನ್ನೇ ಮತ್ತೆ ಧರಿಸಿ ತಲೆಬಾಗಿಸಿಕೊಂಡು ಅವಳು ಹೊರಗೆ ಬಂದಳು.

"ನನ್ನನ್ನು ಕ್ಷಮಿಸಿ... ನನ್ನಿಂದ" ಎಂಬ ಮಾತುಗಳನ್ನು ಯಾರಿಗೂ ಅರ್ಥವಾಗದಂತೆ ಹೇಳಿ ಅವಳು ಬಿರಬಿರನೆ ಆ ತರಗತಿಯ ಕೋಣೆಯಿಂದ ಹೊರಗೆ ಬಂದು ಮಹಡಿಯ ಮೆಟ್ಟಿಲುಗಳನ್ನು ಇಳಿದಾಗ ಕೆಳಗೆ ನಿಂತಿದ್ದ ರುಕ್ಕುವನ್ನು ನೋಡಿದಳು.

"ಪಟ್ಟು, ಪಟ್ಟು" ಎಂದು ಕರೆಯುತ್ತಾ ಓಡಿಬಂದಳು ರುಕ್ಕು.

"ನನ್ನನ್ನು ಕ್ಷಮಿಸು ರುಕ್ಕು... ನಾನು ಹೋಗುತ್ತೇನೆ... ನನ್ನಿಂದಾಗಲಿಲ್ಲ... ಬೆಳಕು ತುಂಬಿಹೋಗಿದೆ..." ಎಂದು ಹೇಳಿಕೊಂಡೇ ಪಟ್ಟು ಓಡಿದಳು.

"ಓ ಆಗಲಿಲ್ಲವೆಂದರೆ ಪರವಾಯಿಲ್ಲ. ಈಗ ನೀನು ಎಲ್ಲಿಗೆ ಹೋಗುತ್ತಿಯೆ?" ಎಂದು ರುಕ್ಕು ಅವಳನ್ನು ತಡೆದಳು.

"ನಾನು ಹೋಗುತ್ತೇನೆ... ನನ್ನ ಹಣೆಬರಹವಿದ್ದಂತೆ" ಎಂದು ರುಕ್ಕುವಿನ ಮುಂದಿನ ಮಾತಿಗೂ ಕಾಯದೆ ಕಾಂಪೌಂಡಿನಿಂದಾಚೆ ಬೀದಿಯಲ್ಲಿ ಓಡಿದಳು ರುಕ್ಕು.

ಅವಳ ಹಿಂದೆ ಅನುಸರಿಸಿ ಹೋಗಲಿದ್ದ ರುಕ್ಕುವಿನ ಎದಿರು ಅವರು – ರುದ್ರ – ಬಂದರು.

"ಪ್ಲೀಸ್ ಹೆಲ್ಪ್ ಅಲ್ಲಿ ವಿದ್ಯಾರ್ಥಿಗಳೆಲ್ಲಾ ಕಾಯುತ್ತಿದ್ದಾರೆ. ನೀವಾದರೂ ಬರಬೇಕು" ಎಂದು ಕರೆಯುತ್ತಲೂ ರುಕ್ಕು ಮಹಡಿ ಹತ್ತಿ ಮೇಲೆ ಹೋದಳು.

ಸ್ವಲ್ಪ ಹೊತ್ತಿನ ನಂತರ ಸೌಂದರ್ಯವನ್ನೇ ಆರಾಧಿಸುವ ಆ ಕಲಾಸನ್ನಿಧಿಯಲ್ಲಿ ಎರಡು ಕಡೆಯಿಂದ ಬೆಳಗುವ ಬೆಳಕಿನ ಪ್ರವಾಹದಲ್ಲಿ ಸೌಂದರ್ಯವನ್ನೇ ಉಟ್ಟು ಬಹು ಮಂದಿಯ ಮುಂದೆ ತನ್ನ ಸುಂದರ ದೇಹವನ್ನು ಪ್ರದರ್ಶಿಸಿ ನಿಂತಿದ್ದಳು ರುಕ್ಕು.

ಅದೇ ವೇಳೆಯಲ್ಲಿ ಕತ್ತಲನ್ನು ಹುಡುಕಿ — ಆ ಮರೆಯಲ್ಲಿ ಯಾರೊಂದಿಗೋ ತನ್ನನ್ನು ಮರೆಸಿಕೊಳ್ಳಲು ನಗರದ ಒಂದು ಕತ್ತಲು ಭಾಗವನ್ನು ಹುಡುಕಿ ಓಡುತ್ತಿದ್ದಳು ಪಟ್ಟು.

# 5. ಗುರುಪೀಠ

ಅವನು ದಾರಿಯಲ್ಲಿ ಹೆಜ್ಜೆ ಹಾಕುತ್ತಿದ್ದಾಗ ದುರ್ನಾತ ಬಡಿಯಿತು. ಅವನು ಭಿಕ್ಷೆಗಾಗಿಯೋ ಅಥವಾ ಮನರಂಜನೆಗಾಗಿಯೋ ಸಂತೆಯಲ್ಲಿ ತಿರುಗಾಡುತ್ತಿದ್ದಾಗ ಅವನನ್ನು ನೋಡಿದ ಮಾತ್ರದಿಂದಲೇ ಎಲ್ಲರೂ ಅಸಹ್ಯಪಟ್ಟುಕೊಂಡು ಓಡಿಸಿದರು. ಅವನನ್ನು ಓಡಿಸಲೋಸುಗವೇ ಕೆಲವು ಮಂದಿ ಏನೋ ಪಾಪದ ಕೆಲಸವಿದೆಂದುಕೊಳ್ಳುತ್ತಾ ಭಿಕ್ಷೆ ನೀಡಿದರು.

ಅವನು ಸೆರೆಮನೆಯಿಂದ ಬಂದಿರುವುದಾಗಿ ಕೆಲವು ಮಂದಿ ಮಾತನಾಡಿಕೊಂಡರು. ಹುಚ್ಚಾಸ್ಪತ್ರೆಯಿಂದ ಕಳುಹಿಸಲ್ಪಟ್ಟವನೆಂದೂ ಕೆಲವರು ಹೇಳಿದರು.

ಆದರೆ ಈಗ ಅವನು ರೋಗಿಷ್ಟನೂ ಅಲ್ಲ ಹುಚ್ಚನೂ ಅಲ್ಲ ಎಂದು ಅವನನ್ನು ನೋಡಿದವರು ಅರ್ಥಮಾಡಿಕೊಂಡರು. ಅದೇ ನಿಜಾಂಶವಾಗಿತ್ತು. ಸೋಮಾರಿತನ ಮತ್ತು ಆತ್ಮಗೌರವವಿಲ್ಲದೆ, ಈ ವೇಷ ಅಸಹ್ಯವಾಗಿದೆಯೆಂದು ಅರ್ಥವಾಗದಷ್ಟು ಮಟ್ಟಿಗೆ ಅವನಲ್ಲಿ ಸಂಸ್ಥಾಪಿತವಾಗಿಹೋಗಿದ್ದ ತಾಮಸತನದ ಉಚ್ಚಸ್ಥಾಯಿಯಲ್ಲಿ ಅವನು ಹೀಗೆ ತಿರುಗುತ್ತಿದ್ದ. ಹಸಿವಾಗುವುದೋ ಇಲ್ಲವೋ ತನ್ನ ಕೈಗೆ ಸಿಕ್ಕಿದುದನ್ನೂ ಪರರ ಕೈಯಲ್ಲಿರುವುದನ್ನೂ ತಿನ್ನಬೇಕೆಂಬ ಬಯಕೆ ಅವನ ಕಣ್ಣುಗಳಲ್ಲಿ ಅಲೆದಾಡುತ್ತಿತ್ತು. ಒಂದು ಮಗು ಊಟ ಮಾಡುವುದನ್ನು ಸಹ ನಾಯಿಯಂತೆ ನಿಂತು ನೋಡುವ. ಅವರೂ ಅವನನ್ನು ನಾಯಿಯನ್ನು ಬೆದರಿಸಿ ಓಡಿಸುವಂತೆ ಓಡಿಸುವರು. ಆರೀತಿ ಅವರು ಓಡಿಸಿ ಅವನು ಅಲ್ಲಿಂದ ಹೆಜ್ಜೆ ಕಿತ್ತಾಗ ಪರರು ಊಟಮಾಡುವುದನ್ನು ತನ್ನ ದೃಷ್ಟಿಯಿಂದ ಎಂಜಲುಗೊಳಿಸಿ ಬರುತ್ತಿದ್ದ. ಅವನು ಯಾವಾಗಲೂ ಏನಾದರೂ ತಿಂದುಕೊಂಡೇ ಇರುತ್ತಿದ್ದ. ದವಡೆಯಲ್ಲೂ ಹಲ್ಲುಗಳ ಮಧ್ಯೆಯೂ ಅವನು ತಿನ್ನುವ ಆಹಾರ ಅಲ್ಲಲ್ಲಿ ಸಿಕ್ಕಿ ಒಣಗಿಹೋಗಿತ್ತು. ಯಾರಾದರೂ ಬೀಡಿ ಚುಟ್ಟಾ ಸೇದುತ್ತಿದ್ದರೆ ಅವಕ್ಕೂ ಅವನು ಕೈನೀಡುತ್ತಿದ್ದ. ಅವರು ಸೇದಿ ಬಿಸಾಡುವವರೆಗೆ ಕಾದಿದ್ದು ಆಮೇಲೆ ಅವನ್ನಾಯ್ದುಕೊಂಡು ಅವರನ್ನು ಅಪಮಾನಗೊಳಿಸುವ ರೀತಿಯಲ್ಲಿ ಅವನು ಸೇದುತ್ತಿದ್ದ.

ಸಂತೆಗೆ ಬಂದ ಗ್ರಾಮಾಂತರ ಹೆಣ್ಣುಗಳು ಮಕ್ಕಳಿಗೆ ಹಾಲು ಕೊಡುವಾಗ, ಬಾಗಿ ನಿಂತಾಗ ಉಡುಪು ಮೇಲೇರಲು ಇವನು ಕಾಮಾತುರದಿಂದ ನಾಚಿಕೆಯಿಲ್ಲದೆ ಅವರನ್ನು ಕಂಡು ಆನಂದಪಡುತ್ತಿದ್ದ.

ಅವನಿಗೆ ದೇಹದಾರ್ಢ್ಯವೂ ಆರೋಗ್ಯವೂ ಇದ್ದುವು. ಆದರೂ ಯಾವಾಗಲೂ ರೋಗಿಷ್ಟನಂತೆ ವೇಷಹಾಕುವುದು ಅವನಿಗೆ ಅಭ್ಯಾಸವಾಗಿಬಿಟ್ಟಿತ್ತು. ವಯಸ್ಸು ನಲವತ್ತು

ವರ್ಷಗಳಿರಬಹುದು. ಕಠಿಣವಾಗಿ ಶ್ರಮಿಸದಿದ್ದುದರಿಂದಲೂ ಚಿಂತೆಗಳಾವುದೂ ಇಲ್ಲದುದರಿಂದಲೂ ಅವನ ದೇಹ ಗೂಳಿಯಂತೆ ಬೆಳೆದಿತ್ತು. ಯೌವನ, ದೇಹದಾರ್ಢ್ಯ ಮತ್ತು ಆರೋಗ್ಯವೂ ಪ್ರಕೃತಿದತ್ತವಾಗಿತ್ತು ಅವನಿಗೆ. ಅದಕ್ಕಾಗಿ ಅವನು ತನ್ನನ್ನು ತಾನೇ ಶಪಿಸಿಕೊಳ್ಳುವಂತೆ ಚರಂಡಿ ನೀರಿನಲ್ಲಿ ಹುಡುಕಿ ತಿನ್ನುವ ಹಂದಿಯಂತೆ ತಿರುಗಾಡುತ್ತಿದ್ದ.

ಸಂತೆಯ ಪ್ರದೇಶಕ್ಕೂ ರೈಲ್ವೆ ಕಂಬಿಗಳಿಗೂ ಮಧ್ಯೆ ಕೊಳದ ತೀರದಲ್ಲಿದ್ದ ಛತ್ರದಲ್ಲಿ ಕುಳಿತು ಅಲ್ಲಿ ಸ್ನಾನಮಾಡುವ ಹೆಂಗಸರನ್ನು ನೋಡುವುದು ಅವನಿಗೆ ವಿನೋದವಾದ ಕಾಲಹರಣ. ಆದರೆ ಒಂದು ದಿನವಾದರೂ ತಾನೂ ಸ್ನಾನಮಾಡಬೇಕೆಂದು ಅವನಿಗೆ ತೋಚಿದುದೇ ಇಲ್ಲ. ಉಳಿದ ವೇಳೆಯಲ್ಲಿ ಅವನು ಆ ಜಗುಲಿಯ ಮೇಲೆ ಅಸಹ್ಯವಾಗಿ ಮಲಗಿ ನಿದ್ರಿಸುತ್ತಿದ್ದ. ಕೆಲವುವೇಳೆ ಹಗಲುಹೊತ್ತು ಸಹ ನಿದ್ರಿಸುವ ಭಾವದಲ್ಲಿ ಬೇಕೆಂದೇ ಉಡುಪನ್ನು ಕಳಚಿ ಬೀದಿಯಲ್ಲಿ ಸಂಚರಿಸುವವರನ್ನು ದಿಗ್ಭ್ರಮೆಗೊಳಿಸಿ ತನ್ನೊಳಗೆ ತಾನೇ ಆನಂದಿಸುತ್ತಿದ್ದ.

ಎರಡು ದಿನಗಳ ಹಿಂದೆ ರಾತ್ರಿ ಮೆಲ್ಲನೆ ಮಳೆ ಸುರಿಯುತ್ತಿದ್ದ ವೇಳೆ. ಭಿಕ್ಷುಕಿಯೋರ್ವಳು ಆ ಛತ್ರದ ಜಗುಲಿಯ ಮೇಲೆ ಬಂದು ಮಲಗಿದಳು. ಅವಳಿಗೆ ಏನೇನೋ ಆಸೆ ತೋರಿಸಿ ಕಡೆಯಲ್ಲಿ ತಾನೇ ಮುಂದಾಗಿ ಅವಳನ್ನು ಕೂಡಿಕೊಂಡ. ತದನಂತರ ಅವಳು ಇವನ ಮೇಲೆ ಸೇಡು ತೀರಿಸಿಕೊಂಡ ಆನಂದದಿಂದ ತನ್ನ ಸೊರಗಿದ ಬೆರಳುಗಳನ್ನು ತೋರಿಸಿ 'ನಾನು ರೋಗಿಷ್ಟೆ' ಎಂದು ನಕ್ಕಳು. ಅದರಿಂದ ಬೇಸರಗೊಳ್ಳುವ ಭಾವ ಕೂಡ ಇಲ್ಲದೆ ಅವನು ಜಡಗೊಂಡಿದ್ದ. ಏನಾದರೂ ಅವಳು ಇವನ ಭಯದಿಂದ ಎರಡು ದಿನ ಆಕಡೆ ಬರಲೇ ಇಲ್ಲ. ಇವನು ಅವಳನ್ನು ಹುಡುಕಿಕೊಂಡು ಹಿಂದಿನ ದಿನ ರಾತ್ರಿಯೆಲ್ಲಾ, ಚಿತ್ರಮಂದಿರದ ಬಳಿ, ಪೇಟೆಯಲ್ಲಿ ಸಂತೆಯಲ್ಲಿ, ಊರಿನ ಬೀದಿಗಳಲ್ಲೂ ಕಾರ್ತಿಕಮಾಸದ ನಾಯಿಯಂತೆ ಅಲೆದಾಡಿದ.

ಮನುಷ್ಯ ರೂಪ ಹೊತ್ತಿದ್ದರೂ ಅವನಲ್ಲಿ ನೆಲೆಯೂರಿದ್ದ ತಾಮಸತನದಿಂದ, ಸೋಮಾರಿತನವೇ ಸುಖವೇ ಸುಖವೆಂದು ತಿಳಿದುಕೊಂಡಿದ್ದ. ಬುದ್ಧಿಯಿಂದ, ಕಾತರದಿಂದ ಅಲ್ಲಿಂದಿಲ್ಲಿ ತಿರುಗಾಡುವ ಬೀದಿ ನಾಯಿಯಂತೆ ಅಲೆದಾಡುತ್ತಿದ್ದ. ಹಸಿವು, ದೇಹದ ಹಸಿವು ಎಂಬ ವಿಹಾರ ಉಪಬಾಧೆಗಳಲ್ಲಿ ಸಿಕ್ಕಿ ಅಲೆಯುವ ವೇಳೆಯು ಹೊರತು ಉಳಿದ ವೇಳೆ ಅವನು ಆ ಛತ್ರದ ಜಗುಲಿಯ ಮೇಲೆ ನಿದ್ರೆಮಾಡಿಕೊಂಡಿರುತ್ತಿದ್ದ.

ಬೆಳಗಿನ ವೇಳೆ; ಉದಯಕಾಲವಲ್ಲ. ಸಂತೆಗೆ ಹೋಗುವ ಮಂದಿ. ರೈಲು ಹತ್ತಿ ಪಕ್ಕದ ಊರಿಗೆ ವಿದ್ಯಾಭ್ಯಾಸಕ್ಕಾಗಿ ಹೋಗುವ ವಿದ್ಯಾರ್ಥಿಗಳೂ ತುಂಬಿ ಆ ಬೀದಿಯೇ ತೀವ್ರ ಸಂದಣಿಯಿಂದ ಕೂಡಿತ್ತು. ಫಳಾರೆಂದು ಬಿಸಿಲು ಕಾಯುತ್ತಿರಲಾಗಿ ಕೊಳೆ ಮತ್ತು ಅಲ್ಲಲ್ಲಿ ಹರಿದುಹೋದ ಪಂಚೆಯನ್ನು ಕಳಚಿ ತಲೆಯಿಂದ ಕೆಳಗಿನವರೆಗೆ ಹೊದೆದುಕೊಂಡ. ಅದರೊಳಗೆ ಗರ್ಭದಲ್ಲಿ ಶಿಶುವಿನಂತೆ ಮೊಳಕಾಲುಗಳನ್ನು ಮಡಿಸಿಕೊಂಡು ಕೈಗಳಿಂದ

ಪಾದಗಳನ್ನು ಬಿಗಿಯಾಗಿ ಹಿಡಿದು ಬಾಯಿಂದ ಎಂಜಲು ಸುರಿಯುತ್ತಿರಲು ನೊಣ ಮುತ್ತಿರುವುದೂ ತಿಳಿಯದೆ ಅವನು ಮೈಮರೆತು ಮಲಗಿದ್ದ. ಬೀದಿಯಲ್ಲಿ ಸಂದಣಿ, ಶಬ್ದ ಯಾವಾಗಲೋ ಒಮ್ಮೆ ಅವನ ನಿದ್ರೆಯನ್ನು ಕೆಡಿಸಿತು. ಆದರೂ ಅವನು ಎಚ್ಚರ ಗೊಳ್ಳಲು ಇಚ್ಛೆಪಡಲಿಲ್ಲವಾದುದರಿಂದ ನಿದ್ರೆಯಲ್ಲೇ ಲೀನವಾಗಿದ್ದ.

— ಇದೇ ಸೋಮಾರಿತನ. ನಿದ್ರೆ ದೇಹಕ್ಕೆ ಅವಶ್ಯಕ. ಆದರೆ ಅನಾವಶ್ಯಕವಾದ ನಿದ್ರೆಯಿಂದ ಸೋಮಾರಿತನ ಬರುತ್ತದೆ. ಈ ಜಡತ್ವವನ್ನು ಸುಖವೆಂದು ಭಾವಿಸುವುದೇ ತಾಮಸತನ.

ಶೀಘ್ರವೇ ಬಿಸಿಲೇರಿ ಅವನಿಗೆ ತಾಕಿತು. ಅವನು ಬೀದಿಗೆ ಬೆನ್ನು ತಿರುಗಿಸಿ ಗೋಡೆಯ ಮಗ್ಗುಲಿಗೆ ಮಲಗಿದ್ದ. ಛತ್ರದ ಗೋಡೆಯ ನೆರಳು ಸ್ವಲ್ಪಸ್ವಲ್ಪವಾಗಿ ಮೊಟಕಾಗತೊಡ ಗಿತು. ಮೊದಲು ಬಿಸಿಲುಬಿದ್ದು ಅವನ ಪಕ್ಕೆಗೂ ನೆಲಕ್ಕೂ ಮಧ್ಯೆ ನುಗ್ಗಿತ್ತು. ಅವನ ಜಡದೇಹ ಅದನ್ನು ನಿಧಾನವಾಗಿ ಅರಿತುಕೊಂಡಿತು. ಬಿಸಿಲಿನ ಶಾಖವನ್ನು ಅರಿಯುವ ಭಾವ ಜಡವಾಗಿರಲು ಅವನು ಬೆಟ್ಟದ ಸರ್ಪದಂತೆ ಅಸಹ್ಯವಾಗಿ ಹೊರಳಿದ. ಶಿಖೆ ಯಿಂದ – ಆ ಬಿಸಿಲಿನ ತಾಪ ಬಿದ್ದ ಜಾಗದಿಂದ ಸರಿಯಲು ಎಷ್ಟು ಕಡಿಮೆ ಪ್ರಯತ್ನ ಅವಶ್ಯಕವೋ ಅಷ್ಟು ಮಾತ್ರ ಜರುಗಿ ಮಲಗಿದ. ಸ್ವಲ್ಪ ಹೊತ್ತಿನಲ್ಲಿ ಬಿಸಿಲು ಮತ್ತೆ ಅವನನ್ನು ತಾಕಿತು. ಅವನ ಮಂದಬುದ್ಧಿಗೂ ಕೋಪವೇರಿ ನಿದ್ರೆಯಿಂದ ಎಚ್ಚರ ಗೊಂಡ. ಆದರೂ ಅವನು ಎದ್ದೇಳಲಿಲ್ಲ. ಇನ್ನೂ ಸ್ವಲ್ಪ ಸರಿದು ಗೋಡೆಗೆ ಓರೆಯಾಗಿ ಮಲಗಿದ.

ಎದಿರುಗಡೆಯಿದ್ದ ಟೀ ಅಂಗಡಿಯಿಂದ ಟೀ ತಯಾರಿಸುವ ಚಟುವಟಿಕೆ ಅರಿವಿಗೆ ಬಂದಿತು. ಅಷ್ಟಕ್ಕೇ ತಾನು ಟೀ ಕುಡಿಯುವವನಂತೆ ಕಲ್ಪನೆ ಮಾಡಿಕೊಂಡ.

ಮತ್ತೆ ಬಿಸಿಲು ಅವನನ್ನು ಬಿಡದೆ ಸುಟ್ಟಿತು. ಇನ್ನು ಮುಂದಕ್ಕೆ ಅವನು ಬರದಂತೆ ಗೋಡೆ ತಡೆಯಿತು. ಒಂದು ಕಡೆ ಗೋಡೆ, ಇನ್ನೊಂದು ಕಡೆ ಗೋಡೆ ಮಧ್ಯೆ ಸಿಕ್ಕಿಕೊಂಡು ಅವನು ಕೋಪದಿಂದ ಎದ್ದು ಕುಳಿತ. ಅವನ ಕಣ್ಣುಗಳಿಗೆ ಬಿಸಿಲು ಬಡಿಯಿತು. ಒಂದು ಕಣ್ಣನ್ನಂತೂ ತೆರೆಯಲೇ ಆಗಲಿಲ್ಲ. ಗೀಜು ತುಂಬಿ ರೆಪ್ಪೆಗಳು ಅಂಟಿಕೊಂಡಿದ್ದುವು.

ಅವನು ಒಂದು ಕೈಯಿಂದ ಕಣ್ಣನ್ನು ಉಜ್ಜಿಕೊಳ್ಳುತ್ತಾ ಮತ್ತೊಂದು ಕೈಯಿಂದ ತಲೆ ದಿಂಬಿನಲ್ಲಿ ಶೇಖರಿಸಿ ಇಟ್ಟಿದ್ದ ತುಂಡುಬೀಡಿಗಳಲ್ಲಿ ಒಂದನ್ನು ಎತ್ತಿದ. ಬೀಡಿಯನ್ನು ಹಚ್ಚಿಕೊಂಡು ಹೊಗೆಬಿಟ್ಟಾಗ ಅರೆಕಣ್ಣಿನ ನೋಟದಲ್ಲಿ ಬಹಳ ಸಮೀಪವಾಗಿ ಯಾರೋ ನಿಂತಂತೆ ಮುಖ ಮಾತ್ರ ಕಾಣಿಸಿತು. ಹೊಗೆಯನ್ನು ಪೂರ್ತಿ ಬಿಟ್ಟು ಕಣ್ತೆರೆದು ನೋಡಿದ.

ಎದಿರಾಗಿ ಒಬ್ಬ ನಮಸ್ಕರಿಸುತ್ತಾ ಮೈಬಾಗಿ ಇವನಲ್ಲಿ ಭಕ್ತಿ ತೋರುವವನಂತೆ ನಿಂತಿದ್ದ. ಇವನಿಗೆ ಸಂದೇಹವಾಗಿ ತನ್ನ ಹಿಂದೆ ಗೋಡೆಯ ಮೇಲೆ ಯಾವುದಾದರೂ ದೇವರ ವಿಗ್ರಹವೋ ಚಿತ್ರವೋ ಇದೆಯೇನೋ ಎಂದು ಹಿಂತಿರುಗಿ ನೋಡಿ ಪಕ್ಕಕ್ಕೆ

ಸರಿದು ಕುಳಿತು. ಈ ವರ್ತನೆಯಿಂದ ಅಪೂರ್ವವಾದ ಅಂಶವೊಂದನ್ನು ಸಂಕೇತವಾಗಿ ಅರ್ಥಮಾಡಿಕೊಂಡು ಬಂದಾತ ರೋಮಾಂಚಗೊಂಡು ಪರವಶನಾಗಿ ನಿಂತ.

ಅವನಿಗೆ ಇಪ್ಪತ್ತು ವರ್ಷ ವಯಸ್ಸಿರಬಹುದು. ಮುಖದಲ್ಲಿ ನವಿರಾದ ಗಡ್ಡ ಮೀಸೆ ಮೂಡಿ ಕುತ್ತಿಗೆಯ ಹಿಂದೆ ಕೂದಲು ಬೆಳೆದಿತ್ತು. ಹಿರಿದಾದ ನಯನಗಳು, ಅರೆಮುಚ್ಚಿದ ದೇಹ, ಕಂಕುಳಲ್ಲಿ ಒಂದು ಟವಲು, ಹಣೆಯಲ್ಲಿ ವಿಭೂತಿ ಧರಿಸಿ ಯುವ ಶಿವಭಕ್ತನಂತಿದ್ದ.

'ಇವನೇಕೆ ನನಗೆ ನಮಸ್ಕರಿಸುತ್ತಾ ನಿಂತಿದ್ದಾನೆ? – ಹುಚ್ಚೋ?' ಎಂದುಕೊಂಡ. ತನ್ನೊಳಗೇ ನಕ್ಕ.

"ಏನಪ್ಪಾ ಇಲ್ಲಿ ಬಂದು ನಮಸ್ಕಾರ ಮಾಡುತ್ತಿದ್ದೀಯೆ? ಇದು ದೇವಸ್ಥಾನವಲ್ಲ – ಛತ್ರ. ನನ್ನನ್ನು ಸಾಧು ಸನ್ಯಾಸಿಯೆಂದು ಭಾವಿಸಿದೆಯೇನು? ನಾನು ಭಿಕ್ಷುಕ..." ಎಂದ ಜಗುಲಿಯ ಮೇಲಿದ್ದವ.

"ಓಹ್...ದೇವಸ್ಥಾನವೆಂದು ಯಾವುದೂ ಇಲ್ಲ...ಎಲ್ಲಾ ಛತ್ರಗಳೇ ಸಾಧು ಸನ್ಯಾಸಿ ಗಳೆಂದು ಯಾರೂ ಇಲ್ಲ. ಎಲ್ಲರೂ ಭಿಕ್ಷುಕರೇ" ಎಂದು ಅವನು ಹೇಳಿದುದನ್ನು ತತ್ವವಾಕ್ಯಗಳೆಂದು ಇವನು ಮತ್ತೆ ಮತ್ತೆ ಹೇಳುತ್ತಾ ಹೊಸ ಹೊಸ ಅರ್ಥಗಳನ್ನು ಕಂಡುಕೊಂಡ ಬೀದಿಯಲ್ಲಿ ನಿಂತವನು.

"ಸರಿ, ಸರಿ ಇವನು ಸರಿಯಾದ ಹುಚ್ಚನೇ' – ಎಂದುಕೊಂಡು ಜಗುಲಿಯ ಮೇಲಿದ್ದವ.

ಬೀದಿಯಲ್ಲಿದ್ದವನು ಇವನಲ್ಲಿ ವಿಜ್ಞಾಪಿಸಿಕೊಳ್ಳುವವನಂತೆ "ಸ್ವಾಮಿ" ಎಂದು ಸಂಬೋಧಿಸಿದ.

ಇವನಿಗೆ ನಗು ತಾಳಲಿಲ್ಲ. ಬಂದ ನಗುವಿನ ಬಹುಭಾಗವನ್ನು ಅಡಗಿಸಿಕೊಂಡು ಮಂದಹಾಸ ಬೀರಿದ.

"ನನ್ನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸುವ ಕೃಪೆ ಮಾಡಬೇಕು. ತಮಗೆ ಸೇವೆ ಸಲ್ಲಿಸುವುದರಲ್ಲಿ ಕರೆದಾಗ ಓಡಿ ಬರಲು ನನಗೆ ಅವಕಾಶ ಕೊಟ್ಟು ಅನುಗ್ರಹಿಸಬೇಕು."

ಜಗುಲಿಯ ಮೇಲಿದ್ದವನಿಗೆ ಏನೂ ಅರ್ಥವಾಗಲಿಲ್ಲ. "ಸರಿ, ಈಗ ಒಂದು ಟೀ ತೆಗೆದುಕೊಂಡು ಬಾ" ಎಂದ.

ಆ ಆಜ್ಞಾಪನೆಯಿಂದ ತನ್ನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದ ಸಂತಸಗೊಂಡು ಸೊಂಟ ದಲ್ಲಿ ಸಿಕ್ಕಿಸಿಕೊಂಡಿದ್ದ ಚಿಲ್ಲರೆಯನ್ನು ಬಿಚ್ಚುತ್ತಾ ಓಡಿದ ಬಂದಾತ. ಅವನ ಕೈಯಲ್ಲಿದ್ದ ಕಾಸುಗಳನ್ನು ದೃಷ್ಟಿಮಾತ್ರದಿಂದ ಲೆಕ್ಕಹಾಕಿದ 'ಗುರು', ಓಡುತ್ತಿದ್ದವನನ್ನು ಕೈತಟ್ಟಿ ಕರೆದು, "ಹಾಗೆಯೇ ಬೀಡಿಯನ್ನೂ ತೆಗೆದುಕೊಂಡು ಬಾ" ಎಂದು ಹೇಳಿದ.

ಅವನು ಟೀ ಅಂಗಡಿಗೆ ಹೋಗಿ ಕಣ್ಮರೆಯಾಗಲು ಶಿಷ್ಯನಾಗಿ ಅವನು ಬಂದು ಅಂಟಿ ಕೊಂಡುದನ್ನು ನೆನೆದು ನೆನೆದು ನಕ್ಕ ಗುರು. 'ಸರಿಯಾದ ಹುಡುಗ ಸಿಕ್ಕಿದ. ಇವನು ಅದೇ ಭಾವದಲ್ಲಿರುವಂತೆ ನೋಡಿಕೊಳ್ಳಬೇಕು. ಜಗುಲಿಯನ್ನು ಬಿಟ್ಟೇಳಿಯದೆ ಇಲ್ಲೇ ಸುಖ ವಾಗಿರಬಹುದು. ಭಿಕ್ಷೆಗಾಗಿ ಇನ್ನು ನಾನು ಅಲೆದಾಡಬೇಕಾಗಿಲ್ಲ. ಅದೇ ಶಿಷ್ಯನಿದ್ದಾನಲ್ಲ...

ತೆಗೆದುಕೊಂಡು ಬಾ ಎಂದರೆ ತರುತ್ತಾನೆ. ಆದರೆ ಸಂಪಾದಿಸಿಕೊಂಡು ಬರುತ್ತಾನೆ... ಇಲ್ಲದಿದ್ದರೆ ಭಿಕ್ಷೆಯೆತ್ತಿಕೊಂಡು ಬರುತ್ತಾನೆ.... ನನಗೆಂತಹ ಅದೃಷ್ಟ ಬಂದು ಬಡಿದಿದೆ... ಎಂದು ಆನಂದತುಂದಿಲನಾದ ಗುರು.

ಸ್ವಲ್ಪ ಹೊತ್ತಿಗೆಲ್ಲಾ ಶಿಷ್ಯ ಟೀ ಮತ್ತು ಬೀಡಿಯನ್ನು ತಂದು ಎರಡು ಕೈಗಳಲ್ಲೂ ನೈವೇದ್ಯ ಅರ್ಪಿಸುವವನಂತೆ ಗುರುವಿನ ಎದಿರು ನಿಂತ.

ಗುರು ಅವನನ್ನು ನೋಡಿ ಪ್ರಯತ್ನಪೂರ್ವಕ ನಕ್ಕ. ಅವನ ಕೈಯಲ್ಲಿದ್ದ ಟೀ, ಬೀಡಿಯನ್ನು 'ತನಗೆ ಸೇರಿದುದು. ಇದಕ್ಕಾಗಿ ಯಾಚಿಸಬೇಕಾದುದಿಲ್ಲ' ಎಂಬ – ಹಕ್ಕು ಬಾಧ್ಯತೆಯ ಭಾವದಿಂದ ಮೊದಲಬಾರಿಗೆ ನೋಡಿದ. ಅದನ್ನು ತೆಗೆದುಕೊಳ್ಳುವುದರಲ್ಲಿ ಅವನು ಅವಸರ ತೋರಿಸಲಿಲ್ಲ. ತಾನು ಶಿಷ್ಯನನ್ನು ವಂಚಿಸುವುದಾಗಿ ನೆನೆದು ಚಮತ್ಕಾರದಿಂದ ವರ್ತಿಸುವಂತೆ ಪೀಠಿಕೆಯಾಗಿ ಹೇಳಿದ :

"ನನ್ನನ್ನು ನೀನು ಕಂಡುಹಿಡಿದುಬಿಟ್ಟೆ. ನೀನು ನಿಜವಾದ ಶಿಷ್ಯ. ನನ್ನನ್ನು ನೀನು ಈ ದಿನ ಮಾತ್ರ ಸಂಧಿಸಿದೆ. ಆದರೆ ನಾನು ನಿನ್ನನ್ನು ಬಹಳ ದಿನಗಳಿಂದ ನೋಡುತ್ತಿದ್ದೇನೆ. ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ಅದಕ್ಕ ನೀನು ಉತ್ತರ ಕೊಡಬೇಕು. ಅದರಿಂದಾಗಿ ನನಗೇನೂ ತಿಳಿಯದೆಂದು ಭಾವಿಸಬಾರದು. ನನಗೆಲ್ಲಾ ಗೊತ್ತು ತಿಳಿದಿದ್ದರೂ ಕೆಲವನ್ನು ಕೇಳಿಯೇ ತಿಳಿದುಕೊಳ್ಳಬೇಕು."

ಈ ಮಾತುಗಳನ್ನು ಕೇಳಿ ಎರಡು ಕರಗಳಲ್ಲೂ ಟೀ ಮತ್ತು ಬೀಡಿಯನ್ನು ಹೊತ್ತು ನಿಂತ ಶಿಷ್ಯ ಕೈಮುಗಿದು ಬಾಗಲಾಗದೆ ದೃಷ್ಟಿ ಮತ್ತು ಮುಖಭಾವದಿಂದಲೇ ತನ್ನ ವಿಧೇಯತೆಯನ್ನು ಪ್ರಕಟಿಸಿಕೊಂಡ.

"ನೀನು ಯಾರು? ಯಾವ ಊರು? ಹೆಸರೇನು? ನೀನು ಎಲ್ಲಿಗೆ ಬಂದೆ? ನಾನೇ ಗುರುವೆಂದು ನಿನಗೆ ಹೇಗೆ ತಿಳಿಯಿತು...? ಟೀ ಆರಿಹೋಯಿತೇನು? ಕೊಡು" ಎಂದು ಅದನ್ನು ತೆಗೆದುಕೊಂಡು ಕುಡಿಯುತ್ತಲೇ ಶಿಷ್ಯನು ಹೇಳಿದ ಉತ್ತರವನ್ನು ನಿಧಾನವಾಗಿ ತಲೆಯಾಡಿಸುತ್ತಾ ಕೇಳಲಾರಂಭಿಸಿದ.

"ಗುರುವೇ... ನಾನೊಬ್ಬ ಅನಾಥ. ಅದೋ ಅಲ್ಲಿ ಮುರುಗನ ದೇವಸ್ಥಾನವಿದೆಯಲ್ಲಾ, ಅಲ್ಲಿ ಅಡುಗೆಮನೆಯಿದೆ. ಅಲ್ಲಿ ನೀರು ತಂದುಕೊಡುವ ಕೆಲಸ. ಅಲ್ಲಿರುವ ಅಡುಗೆಭಟ್ಟರು ಮೂರು ವೇಳೆ ಊಟ ಹಾಕಿ ದಿನದ ಖರ್ಚಿಗೆ ನಾಲ್ಕಾಣೆ ಕೊಡುತ್ತಾರೆ. ನನಗೆ ಬಾಳುವೆಯಲ್ಲಿ ಬೇಸರ ಬಂದುಬಿಟ್ಟಿತು. ಈ ಬಾಳಿಗೆ ಅರ್ಥವಿಲ್ಲ ಎಂದು ಅರಿತೂ ದೇಹವನ್ನು ಹೊತ್ತು ತಿರುಗುವ ಭಾರವನ್ನು ತಾಳಲಾರದೆ ಹೋದೆ... ದುಃಖಕ್ಕೆ ಬಂಧನವೇ ಮೂಲವೆಂದು ತಿಳಿದವರು ಹೇಳುತ್ತಾರೆ. ನನಗೆ ಯಾವ ವಿಧವಾದ ಬಂಧನವೂ ಇಲ್ಲ...ಆದರೂ ನನಗೆ ಕಷ್ಟ ತಪ್ಪಿದ್ದಲ್ಲ...ಯಾವ ದಾರಿಯಲ್ಲಿ ಮೋಕ್ಷವೆಂದು ನನಗೆ ಅರ್ಥವಾಗಲಿಲ್ಲ... ನಿನ್ನೆ ನನಗೆ ಕನಸು ಬಿತ್ತು. ಅದರಲ್ಲಿ ನೀವು ಪ್ರಸನ್ನರಾಗಿ 'ಈ ಛತ್ರವೇ ಗುರುಪೀಠ.

ಇಲ್ಲಿ ಬಾ'–ಎಂದು ಆಜ್ಞಾಪಿಸಿದಿರಿ...ಗುರುವೇ ನೀವು ಕೇಳುತ್ತಿದ್ದೀರೆಂದು ಹೇಳು ತ್ತಿದ್ದೇನಷ್ಟೆ. ತಮಗೆ ತಿಳಿಯದುದೇನಿದೆ? ಉದಯಕಾಲದಿಂದ ಸನ್ನಿಧಾನದಲ್ಲಿ ಕಾಯು ತ್ತಿದ್ದೆ. ನನ್ನ ಭಾಗ್ಯ, ಈಗ ತಮ್ಮ ಕಟಾಕ್ಷ ಬಿತ್ತು..."

"ಊಂ–ಉಂ..." ಎಂದು ಮೀಸೆಯನ್ನು ತಿದ್ದಿಕೊಂಡೇ, ಅವನು ಹೇಳುವುದನ್ನು ಕೇಳುತ್ತಿದ್ದ ಗುರು ಬರಿದಾದ ಲೋಟವನ್ನು ಕೈಗಿತ್ತರು.

ಶಿಷ್ಯ ಅದನ್ನು ತೆಗೆದುಕೊಂಡು ಟೀ ಅಂಗಡಿಗೆ ಕೊಡಲು ಹೋದ. 'ಭಗವಂತ ಈ ಯುವಕನನ್ನು ಬಹಳ ಪರೀಕ್ಷೆ ಮಾಡುತ್ತಿದ್ದಾನೆ' ಎಂದುಕೊಂಡು ಗುರು ಅವನ ಬಗ್ಗೆ ಪರಿತಾಪಪಟ್ಟು, ನಕ್ಕ. 'ಉಂ...ಅದರಿಂದ ನನಗೇನಂತೆ. ನನಗೊಬ್ಬ ಶಿಷ್ಯ ದೊರೆತ' ಎಂದು ತೃಪ್ತಿಯುಂಟಾಯಿತು.

ಶಿಷ್ಯ ಹಿಂತಿರುಗಿ ಬಂದ ಮೇಲೆ ಹೆಸರೇನೆಂದು ಕೇಳಿದ. ಅವನು ಉತ್ತರ ಹೇಳುವುದ ರೊಳಗಾಗಿ ತನಗೆ ತಿಳಿದಿದ್ದ ಕೆಲವು ಹೆಸರುಗಳನ್ನು ನೆನಪಿಸಿಕೊಂಡು ಗುರು ಮಂದಹಾಸ ಬೀರಿದ. ಇವನು ಹೇಳುವ ಮೊದಲೇ ಆ ಹೆಸರನ್ನು ತಾನು ಹೇಳಬಲ್ಲೆನಾದರೆ ಈ ನಾಟಕ ದಲ್ಲಿ ಅದು ಎಷ್ಟೊ ಅದ್ಭುತವಾದ ಲೀಲೆಯಾದೀತು ಎಂದು ಭಾವಿಸಿ ಮುಗುಳ್ನಕ್ಕ. ಆ ಮುಗುಳ್ನಗೆಯಿಂದ ಉತ್ತರ ಕೊಡಲು ಶಿಷ್ಯ ಸ್ವಲ್ಪ ಹಿಂಜರಿದ.

ಆಗ ಗುರು ಹೇಳಿದ: "ಹೆಸರನೇನೆಂದು ಒಂದು ಪ್ರಶ್ನೆ ಕೇಳಿದರೆ–ಒಬ್ಬೊಬ್ಬ ಒಂದೊಂದು ಉತ್ತರ ಹೇಳುತ್ತಾನೆ ನೋಡು? ಒಂದು ಪ್ರಶ್ನೆಗೆ ಎಷ್ಟು ಉತ್ತರ" ಎಂದು ಏನೋ ತತ್ವ ವಿಚಾರ ಹೇಳುವವನಂತೆ ಬಡಬಡಿಸಿದ. ಶಿಷ್ಯ, ಅದನ್ನು ಕೇಳಿ ಅದು ಮಹತ್ತರ ಜ್ಞಾನಸೂತ್ರವೆಂದು ಆಶ್ಚರ್ಯಪಟ್ಟ.

"ಸರಿ, ನಿನ್ನ ಹೆಸರೇನೆಂದು ನೀನು ಹೇಳಬೇಡ. ನಾನು ಗುರು. ನೀನು ಶಿಷ್ಯ...ನನ್ನ ಹೆಸರು ಗುರು. ನಿನ್ನ ಹೆಸರು ಶಿಷ್ಯ. ನೀನು ನನ್ನನ್ನು 'ಗುರುವೇ, ಗುರುವೇ' ಎಂದು ಕರೆಯಲು ಪ್ರಾರಂಭಿಸಿಬಿಟ್ಟೆ... ನಾನು ನಿನ್ನನ್ನು 'ಶಿಷ್ಯ, ಶಿಷ್ಯ' ಎಂದು ಕರೆಯುತ್ತೇನೆ ಏನು, ಸರಿತಾನೆ...?' ಎಂದು ಮಾತನಾಡುತ್ತಲೇ ಇದ್ದ ಗುರು.

'ಎಲ್ಲವೂ ಒಂದೇ ಹೆಸರೇ?' ಎಂಬ ಆ ಮಾತಿನಲ್ಲಿಯೂ ಏನೋ ಅರ್ಥವನ್ನು ಕಂಡುಕೊಂಡ. ಶಿಷ್ಯನ ದೃಷ್ಟಿ ಮಿರುಗಿತು.

'ನಾನೇನು ಹೀಗೆ ಮಾತನಾಡುತ್ತಿದ್ದೇನೆ...' ಎಂದು ಗುರು ತನ್ನೊಳಗೇ ಎಚ್ಚರಗೊಂಡು ಹೀಗೆಯೇ ಅವರು ಸಂಭಾಷಣೆಯಲ್ಲಿದ್ದರು.

ಮಧ್ಯಾಹ್ನ–ರಾತ್ರಿ ಆ ಶಿಷ್ಯ ಅಡುಗೆಮನೆಯಿಂದ ತನಗೆ ದೊರಕಿದ ಚಿತ್ರಾನ್ನ, ಸಕ್ಕರೆ ಪೊಂಗಲ್ ಮುಂತಾದುವನ್ನು ಭಯಭಕ್ತಿಯಿಂದ ಪ್ರೀತಿಯಿಂದ ತಂದು ಈ ಗುರುವಿಗೆ ಅರ್ಪಿಸಿದ. ಅಷ್ಟು ರುಚಿ, ಸುವಾಸನೆ, ಪುನೀತತನ, ಪ್ರೀತಿ, ಉಪಚಾರಗಳಿಂದ ಕೂಡಿದ ಅಮೃತವನ್ನು ಗುರು ತನ್ನ ಜನ್ಮದಲ್ಲಿ ಕಂಡಿರಲಿಲ್ಲ. ಮಿತಿಮೀರಿದ ಆಸೆಯಿಂದ

ತನ್ನ ವರ್ತನೆಯನ್ನೂ ಮರೆತು ಆಹಾರವನ್ನು ಎತ್ತೆತ್ತಿ ಭುಜಿಸುವುದನ್ನು ಶಿಷ್ಯ ಪ್ರೇಮಮಯನಾಗಿ ನೋಡುತ್ತಿದ್ದ.

ಗುರುವಿಗೆ ಏನೋ ಕಾರಣದಿಂದ ಕಣ್ಣೀರು ತುಂಬಿಬಂತು. ಶಿಷ್ಯ ಕುಡಿಯುವ ನೀರನ್ನು ಎತ್ತಿಕೊಟ್ಟ.

ಮಾರನೆಯ ದಿನ ಬೆಳಿಗ್ಗೆ ಅದೇ ರೀತಿ ಜಗುಲಿಯ ಬಳಿಗೆ ಬಂದು ಕಾದು ನಿಂತಿದ್ದ ಶಿಷ್ಯ. ಗುರುವಿಗೆ ಟೀ ಮತ್ತು ಬೀಡಿಯನ್ನು ತೆಗೆದುಕೊಂಡು ಬಂದು. ನಂತರ ಅವನನ್ನು ಕೊಳದ ಬಳಿಗೆ ಕರೆದೊಯ್ದು ಉಡುಪನ್ನು ಒಗೆದುಕೊಟ್ಟ. ಸ್ನಾನ ಮಾಡಿಸಿ ಕರೆದುಕೊಂಡು ಬಂದ.

ನೆತ್ತಿಯ ಮೇಲೆ ಸೂರ್ಯ ಬರುವವರೆಗೆ ಗುರುವಿಗೆ ಹಸಿವಾಗುವವರೆಗೆ – ಅವರು ಕೊಳದಲ್ಲಿ ಈಜಾಡಿ ಸ್ನಾನ ಮಾಡಿದ್ದರು.

"ಸ್ನಾನ ಸುಖವಾಗಿಯೇ ಇದೆ. ಆದರೆ ಸ್ನಾನ ಮಾಡಿ ಪ್ರಯೋಜನವೇನು...ಸ್ನಾನ ಮಾಡುತ್ತಿದ್ದಂತೆ ಕೊಳೆ ಸೇರುತ್ತಲೇ ಇರುತ್ತದೆಯಲ್ಲ...? ಅದು ಹಾಗೆಯೇ ಹಸಿವಾಗುತ್ತೆ... ಊಟ ಮಾಡುತ್ತೇವೆ... ಮತ್ತೆ ಹಸಿವಾಗುತ್ತದಲ್ಲವೆ... ಸ್ನಾನ ಮಾಡುತ್ತಿದ್ದಂತೆ ಕೊಳೆ ಸೇರುತ್ತಲೇ ಇರುತ್ತದೆ. ಕೊಳೆಯಾಗುತ್ತಿದ್ದಂತೆ ಸ್ನಾನಮಾಡಬೇಕು. ಹಸಿವಾದಂತೆ ಊಟ ಮಾಡಬೇಕು... ಊಟ ಮಾಡುತ್ತಾ ಹಸಿವಾಗುತ್ತೆ... ಏನು ವಿಚಿತ್ರ" ಎಂದು ಹೇಳಿ ಗುರು ನಕ್ಕ. ನಗುತ್ತಲೇ ಇದ್ದಾಗ "ಏನಿದು, ನಾನು ಹೀಗೆಲ್ಲಾ ಮಾತನಾಡುತ್ತಿದ್ದೇನೆ?" ಎಂದು ನೆನೆದು ಭಯಪಟ್ಟು ಥಟ್ಟನೆ ಮಾತು ನಿಲ್ಲಿಸಿದ.

ಶಿಷ್ಯನು ಅವನು ಹೇಳಿದುದನ್ನು ಕೈಕಟ್ಟಿಕೊಂಡು ಕೇಳಿದ.

ಅಂದು, ಅದರ ಮರುದಿನ, ತದನಂತರ ಒಂದೊಂದು ದಿನವೂ ಪ್ರತಿದಿನ ಪ್ರಾತಃಕಾಲ ಟೀ ಮತ್ತು ಬೀಡಿ ತೆಗೆದುಕೊಂಡು ಬಂದು, ಮಧ್ಯಾಹ್ನ ಕೊಳಕ್ಕೆ ಕರೆದೊಯ್ದು ಉಡುಪು ಒಗೆದು, ಸ್ನಾನಮಾಡಿಸಿ, ಆಹಾರ ತಂದು ಗುರುವನ್ನು ಏಕಾಂತವಾಗಿ ಬಿಡದೆ ಅವನು ಬೀದಿಯಲ್ಲಿ ಅಲೆಯುದಂತೆ ಈ ಶಿಷ್ಯ ಸದಾಕಾಲ ಅವನೊಂದಿಗೇ ಇದ್ದ. ಅವನು ಮಾತನಾಡುವ ಎಲ್ಲಾ ವಾಕ್ಯಗಳಲ್ಲೂ ಅವನೇ ಹೊಸದಾಗಿ ಅರ್ಥಮಾಡಿಕೊಳ್ಳುವವನಂತೆ ಹಲವು ವಿಧವಾದ ಅರ್ಥಗಳನ್ನು ಅರಿತು ಶಿಷ್ಯ ಪುಳಕಾಂಕಿತನಾಗುತ್ತಿದ್ದ. ಸಂತೆಗೆ ಬರುವ ಕೆಲವರು ಛತ್ರದ ಜಗುಲಿಯ ಮೇಲೆ ವಿಶ್ರಾಂತಿಗೆಂದು ನಿಂತಾಗ ವಿಚಿತ್ರವಿದು ಎಂದುಕೊಂಡರು.

ಕೆಲವರು ಗುರುವಿನ ಗುರುತನ್ನು ಅರಿತು 'ಇವನು ಯಾರೋ ಸಿದ್ಧಪುರುಷನಿರಬೇಕು' ಎಂದು ಆಗ ತಿಳಿದವನಂತೆ ' ಅಂತಹವರು ಈರೀತಿ ಹರಿದ ಉಡುಪನ್ನು ಉಟ್ಟು, ಕೊಳೆಯನ್ನು ಹೊತ್ತು ಎಂಜಲು ಹುಡುಕಿ ಅಲೆಯುತ್ತಾರೆ ' ಎಂದು ತನ್ನ ಬಗ್ಗೆ ತನಗೇ ತಿಳಿಯದುದನ್ನು ಅರಿವುಮಾಡಿಕೊಟ್ಟರು! ಅದನ್ನು ಅರಿತುಕೊಳ್ಳಲು ಪಕ್ವ ಮನಸ್ಸಿರಬೇಕು, ಆ ಪಕ್ವತನ ಈ ಶಿಷ್ಯನಿಗೆ ಇರುವುದಾಗಿಯೂ ಹೇಳಿ ಶಿಷ್ಯನನ್ನು ಹೊಗಳಿದರು.

ಅದರಲ್ಲಿ ಕೆಲವರು ಹೀಗೆಲ್ಲಾ ತಿಳಿಯದೆ ಈ ಸಿದ್ಧಪುರುಷನನ್ನು ಹೇಸಿಗೆಯಿಂದ ಓಡಿಸಿದುದಕ್ಕಾಗಿ ಈಗ ಭಯವಿಹ್ವಲರಾಗಿ ಮಾನಸಿಕವಾಗಿಯೂ ಸಾಷ್ಟಾಂಗ ನಮಸ್ಕಾರ ಮಾಡಿಯೂ ಕ್ಷಮಾಪಣೆ ಕೇಳಿಕೊಂಡರು.

ಈಗ ಶಿಷ್ಯನೊಬ್ಬನನ್ನು ಬಿಟ್ಟು ಗುರುವಿಗೆ ಭಕ್ತರು ದಿನಗಳೆದಂತೆ ಹೆಚ್ಚತೊಡಗಿದರು. ಸಂತೆಗೆ ಬರುವ ವ್ಯಾಪಾರಿಗಳು ಮತ್ತು ಇತರರು ಇವನನ್ನು ವಿಚಿತ್ರವಾಗಿ ಕಂಡು ಟೀ, ಬೀಡಿ, ಹಣ್ಣುಹಂಪಲು ತಂದೀಯುತ್ತಿದ್ದರು.

ಅವನು ಅವನ್ನು ಉಣ್ಣುವ ರೀತಿ, ಹೊಟ್ಟನ್ನು ಬೀಸಿ ಬಿಸಾಡುವ ಲಾಘವವನ್ನೂ, ಬೀಡಿ ಸೇದುವ ವಿಧಾನವನ್ನೂ, ಏನೂ ಮಾಡದೆ ಮಲಗಿರುವ ಯೋಗವನ್ನೂ ಕಣ್ಣೆವೆ ತೆರೆದು ನೋಡುವ ರೀತಿಯನ್ನೂ ಕಣ್ಮುಚ್ಚಿ ನೋಡದದೆಯೇ ಇರುವ ಭಾವವನ್ನೂ ಅವರು ಹೊಗಳಿ ಆಶ್ಚರ್ಯಪಟ್ಟು ಮಾತನಾಡಿಕೊಂಡರು.

ಗುರುವಿಗೆ ಮೊದಲು ಇದು ಅನುಕೂಲವಾಗಿಯೂ, ಸಂತೋಷವಾಗಿಯೂ, ನಂತರ ಏನೂ ಅರ್ಥವಾಗದೆ ಒಗಟಾಗಿಯೂ ಇದ್ದು ಕೆಲವು ದಿನಗಳಲ್ಲಿ ಎಲ್ಲಾ ಅರ್ಥವಾಗಲು ಒಗಟು ಬಗೆಹರಿಯಲು ಪ್ರಾರಂಭವಾಯಿತು.

ಒಂದು ದಿನ ರಾತ್ರಿ. ಗುರುವಿಗೆ ನಿದ್ರೆ ಬರಲಿಲ್ಲ. ಅವನು ಏನೇನೋ ಆಲೋಚಿಸುತ್ತಿದ್ದ. ಆ ಶಿಷ್ಯನೊಂದಿಗೆ ಸಂಭಾಷಿಸುವಂತೆ ತನ್ನೊಳಗೆ ತಾನೇ ಹೇಳಿಕೊಳ್ಳುತ್ತಿದ್ದ.

ನಕ್ಷತ್ರಗಳನ್ನು ಕುರಿತು, ತಾನು ಈ ಜಗತ್ತಿಗೆ ಬರುವ ಮೊದಲು ಇದ್ದ ಕಾಲದ ಬಗ್ಗೆಯೂ, ಮೃತ್ಯುವಿನ ಬಗ್ಗೆಯೂ, ತನ್ನ ಹಿಂದಿನ ಜನ್ಮವನ್ನು ಕುರಿತೂ ಯಾವ ತೀರ್ಮಾನಕ್ಕೂ ಬಂದಿರುವಂತಹ ವಿಷಯಗಳ ಬಗ್ಗೆ ಆಲೋಚಿಸಿದ.

ಅವನು ನಿದ್ರಿಸದೆಯೇ ಕನಸಿನಂತೆ ಕಂಡ. ಅದರಲ್ಲಿ ತನ್ನ ಕಂಠವೋ ಶಿಷ್ಯನ ಕಂಠವೋ, ಸಂತೆಯಲ್ಲಿ ತಿರುಗುವ, ಇವನನ್ನು ನಮಸ್ಕರಿಸಿ ಮುಂದೆ ನಡೆಯುವ ಯಾರೋ ಮೆಲ್ಲನೆ ಮಾತನಾಡುವುದನ್ನು ಕೇಳಿದ : 'ನಿನಗೆ ಶಿಷ್ಯನಾಗಿ ಬಂದಿದ್ದಾನಲ್ಲ, ಅವನೇ ನಿಜವಾಗಿ ಗುರು... ಶಿಷ್ಯನಾಗಿ ನಿನಗೆ ಒದಗಿ ಬಂದಿದ್ದಾನೆ... ಆಗಲೇ ನೀನು ವಶವಾಗುವೆಯೆಂದು ತಿಳಿದು ಶಿಷ್ಯನಾಗಿ ಬಂದಿದ್ದಾನೆ. ಯಾವ ಪೀಠದಲ್ಲಿದ್ದರೇನು ? ಯಾವನು ಕಲಿಸುವನೋ ಅವನೇ ಗುರು. ಕಲಿಯುವವನೇ ಶಿಷ್ಯ. ಪರಮಶಿವನ ತೊಡೆಯ ಮೇಲೆ ಕುಳಿತು ಮುರುಗನ್ ಅವನಿಗೇ ಉಪದೇಶಿಸಲಿಲ್ಲವೆ ? ಅಲ್ಲಿ ಶಿಷ್ಯನ ತೊಡೆಯೇ ಗುರುಪೀಠ. ಅವನಿಗೆ ತಲೆಬಾಗು...'

ಪಕ್ಷಿಗಳು ಉಲಿಯುತ್ತಾ, ರೆಕ್ಕೆಗಳನ್ನು ಬಡಿದು ಹಾರುತ್ತಾ ಸಂತೆಯ ಪ್ರದೇಶದ ಮರಗಳಲ್ಲಿ ಕುತೂಹಲದಿಂದ ಕಲಕಲರವ ಮಾಡುವ ಉದಯ ಕಾಲದಲ್ಲಿ ಅದೇ ಕುತೂಹಲದಿಂದ ಕಣ್ತೆರೆದು ಎಚ್ಚರಗೊಂಡ. ಗುರು ಶಿಷ್ಯನಿಗೆ ನಮಸ್ಕರಿಸಲು ಕಾದಿದ್ದ; ಮನಸ್ಸಿನಲ್ಲಿಯೇ ಬಾಗಿದ. ಅವನು ಬಂದೊಡನೆ ಸಾಷ್ಟಾಂಗವಾಗಿ ತಾನು ನಮಸ್ಕರಿಸುವು ದನ್ನು ನೆನೆದು ರೋಮಾಂಚಗೊಂಡ.

ಆದರೆ, ಆ ಶಿಷ್ಯ ಬರಲಿಲ್ಲ. ಈ ಗುರು ತನ್ನನ್ನು ಮಾರ್ಪಡಿಸಿದ ಶಿಷ್ಯನನ್ನು ಹುಡುಕಿ ಆ ಅಡುಗೆಮನೆಗೆ ಧಾವಿಸಿದ.

ಅಡುಗೆಮನೆಯಲ್ಲಿದ್ದವರು ಅವನಿಗೆ ನಮಸ್ಕರಿಸಿ ಸ್ವಾಗತ ನೀಡಿ ಕುಳ್ಳಿರಿಸಿ ಉಪಚರಿಸಿದರು.

ಗುರುವಿಗೆ ಆಗ ಶಿಷ್ಯನ ಹೆಸರು ತಿಳಿಯದೆ ಕಳಕಳಿಯಿಂದ ಏನೆಂದು ಕೇಳುವುದೆಂದೇ ತಿಳಿಯದೆ "ನನ್ನ ಶಿಷ್ಯನೆಲ್ಲಿ ?" ಎಂದು ವಿಚಾರಿಸಿದ.

ಅವರು ಮಿಕಮಿಕನೆ ಅವನನ್ನು ನೋಡಿದರು. ಗುರು ಶಿಷ್ಯನ ಗುರುತು ಹೇಳಿದ. ಕಡೆಯಲ್ಲಿ ಅವರು ಬಹಳ ಅಲಕ್ಷ್ಯದಿಂದ. "ಅವನು ನೆನ್ನೆಯೇ ಎಲ್ಲಿಗೋ ಹೊರಟು ಹೋದ" ಎಂದರು.

"ಅವನೇ ನಮಗೆಲ್ಲಾ ಗುರು" ಎಂದರು ಗುರು.

"ಹೌದೆ" ಎಂದು ಅವರು ಅಚ್ಚರಿಗೊಂಡರು.

ಇದರ ಬಗ್ಗೆ ಗುರುವಿನ ವೇದಾಂತ ಪೂರ್ಣ ವಿವರಣೆಯನ್ನು ಅವರು ನಿರೀಕ್ಷಿಸಿ ನಿಂತರು. ಆದರೆ ಗುರು ಏನೂ ಮಾತನಾಡಲಿಲ್ಲ. ತದನಂತರ ಏನೂ ಮಾತನಾಡಲಿಲ್ಲ. ಎದ್ದು ಮುಂದೆ ಹೆಜ್ಜೆಯಿಟ್ಟ.

ಸಂತೆಯಲ್ಲಿ ಊರಿನ ಬೀದಿಗಳಲ್ಲಿ ಶಿಷ್ಯನಾಗಿ ಬಂದ ಆ ಗುರುವನ್ನು ಹುಡುಕುತ್ತಾ ತಿರುಗಿದ. ಶಿಷ್ಯ ಕಾಣಿಸಲೇ ಇಲ್ಲ. ನಗೆಬಂತು ಹುಡುಕುವುದನ್ನು ಬಿಟ್ಟುಬಿಟ್ಟ.

ಈಗ ಸಂತೆಯಲ್ಲಿ ಕೊಳಕಾದ ಹರಿದ ಬಟ್ಟೆಯನ್ನುಟ್ಟು ಪ್ರತಿಯೊಬ್ಬರಲ್ಲೂ ಏನೋ ಶೋಧಿಸಿ ನೋಡುವವನಂತೆ ಅಲೆಯುತ್ತಿದ್ದ. ಯಾರೂ ಓಡಿಸುತ್ತಿರಲಿಲ್ಲ. ಮಕ್ಕಳು ನೋಡಿ ನಕ್ಕುನಲಿದಾಡುತ್ತಿದ್ದರು. ಹೆಂಗಸರು ಗಂಡಸರು ಬಾಗಿ ನಮಸ್ಕರಿಸಿ ಏನಾದರೂ ಕಾಣಿಕೆಯೊಪ್ಪಿಸಿ ಪ್ರೀತಿಯಿಂದ ಉಪಚರಿಸುತ್ತಿದ್ದರು.

ಆ ಶಿಷ್ಯನ ಬಳಿ ಏನು ಕಲಿತನೋ ಅದನ್ನು ಇವನು ಎಲ್ಲರ ಬಳಿ ಎಲ್ಲದರಲ್ಲಿ ಕಾಣುವವನಂತೆ ನೆನಪಿಸಿದ ನಕ್ಕು ನಕ್ಕು ತಿರುಗುತ್ತಿದ್ದ.

# 6. ನಾನು ಇದ್ದೇನೆ

ಆ ಛತ್ರದ ಬಾಗಿಲುಗಳು ಮುಚ್ಚಲ್ಪಟ್ಟು, ಬೀಗಮುದ್ರೆಯಲ್ಲಿರುತ್ತಿದ್ದುವು; ಬೀಗದ ಮೇಲೆ ಒಂದು ತಲಾಂತರದ ಕಿಲುಬು ಹತ್ತಿತ್ತು. ಬಾಗಿಲ ಸಂದಿಯಿಂದ ನೋಡಿದರೆ ಒಳಗೋಡೆಗಳನ್ನು ಬಿರಿದು ಗಂಭೀರವಾಗಿ ಬೆಳೆದಿದ್ದ ಅಶ್ವತ್ಥಮರಗಳು, ಕಾಡಿನಲ್ಲಿರುವಂತೆ ಹಬ್ಬಿದ ಪೊದರುಗಳು ಕಾಣಿಸುತ್ತಿದ್ದುವು. ಛತ್ರದ ಎದುರು ಅಂದರೆ ರಸ್ತೆಯ ಇನ್ನೊಂದು ಭಾಗದಲ್ಲಿ ನಾಲ್ಕು ಕಡೆ ಮೆಟ್ಟಲುಗಳಿದ್ದ ಕೊಳ. ಕೊಳದ ಆ ಕಡೆಗೆ ಸುತ್ತ ಫಲವತ್ತಾದ ಭೂಮಿಯಲ್ಲಿ ಗದ್ದೆಗಳಿದ್ದುವು. ಕಾಲುಬದಿಯಲ್ಲಿ ನಡೆದರೆ, ಸ್ವಲ್ಪ ದೂರದಲ್ಲಿ ರೈಲ್ವೆ ಕಂಬಿಯ ಮೇಲಂತಸ್ತು. ರೈಲ್ವೆ ಕಂಬಿಗಳಾಚೆ – 'ಈ ಭಾಗದಲ್ಲಿ ಚೆನ್ನಾಗಿ ಬೆಳೆದು ತಲೆದೂಗುವ ಪೈರನ್ನು ಪೋಷಿಸಿದ ಹೆಮ್ಮೆ ನನ್ನದು' ಎಂದು ಅಲೆಗಳೆಬ್ಬಿಸಿ, ತಂಪಾದ ಕೆರೆಯ ನೀರು ಕಣ್ಣಿಗೆ ಎಟುಕುವಷ್ಟು ದೂರ ಹರಡಿತ್ತು.

ಅದರಿಂದಾಚೆ ಏನೂ ಇಲ್ಲ; ಬರಿಯ ನೀರಷ್ಟೆ. ನೀರು ಹರಡಿದ್ದ ಅಂಚಿನಲ್ಲಿ ದಿಗಂತ ನೀರೂ ಆಕಾಶವೂ ಒಂದಾದ ಕಡೆ ಬೆಳದಿಂಗಳ ವೃತ್ತಬಿಂಬವು ಮಂದ ಪ್ರಕಾಶವು ಕೆರೆಯ ನೀರಿನಲ್ಲಿ ಕಲೆತು ತೇಲುತ್ತಿತ್ತು...ಬೆಳದಿಂಗಳು ಮೇಲೇರಿದಂತೆ ಅದರ ಆಕಾರ ಸಣ್ಣದಾಯಿತು; ಬೆಳಕು ಹೆಚ್ಚಿತು. ಒಂದು ಕಡೆ ರೈಲ್ವೆ ದಿಬ್ಬದ ಮೇಲೆ ಹರಡಿದ ಬೆಳದಿಂಗಳು ಇನ್ನೊಂದು ಕಡೆ ಛತ್ರದಲ್ಲಿ ಕುಳಿತು ಊಟ ಮಾಡುತ್ತಿದ್ದ ಹೊಸ ತಗಡಿನ ತಟ್ಟೆಯ ಮೇಲೆ ಬಿದ್ದು ಅವನ ಮುಖದ ಮೇಲೆ ಪ್ರತಿಬಿಂಬಿಸಿತು.

ಜಗುಲಿಯ ಮೇಲೆ ಅವನ ಹೊರತು ಬೇರೆ ಯಾರೂ ಇರಲಿಲ್ಲ. ಅವನು ಆ ಏಕಾಂಗಿಯಾಗಿದ್ದರೂ ತಗಡಿನ ತಟ್ಟೆಯಲ್ಲಿದ್ದ ಕಡೆಯನ್ನವನ್ನು ಆಸ್ವಾದಿಸುತ್ತಾ ತನ್ಮಯನಾಗಿ ಹಾಡಿಕೊಂಡಿದ್ದ. ಒಂದೊಂದೇ ತುತ್ತು ಕರಗುತ್ತಿತ್ತು. ಅವನ ದೃಷ್ಟಿ ಬೆಳದಿಂಗಳ ಕಡೆಗೆ ಹೋಯಿತು. ಬಾಯಿ ತುಂಬಾ ಆಹಾರವಿದ್ದುದರಿಂದ ಅವನ ಹಾಡು ಸ್ಪಷ್ಟವಾಗಿ ಕೇಳಿಸುತ್ತಿರಲಿಲ್ಲ. ಕೇಳಲು ತಾನೆ ಅಲ್ಲಿ ಬೇರೆ ಯಾರಿದ್ದರು? ತಗಡಿನ ತಟ್ಟೆಯಲ್ಲಿದ್ದ ಆಹಾರ ಮುಗಿಸಿ ಸುತ್ತಲೂ ಚೆಲ್ಲಿದ್ದ ಅಗುಳುಗಳನ್ನು ಒಂದೊಂದಾಗಿ ಆರಿಸಿ ಸೇರಿಸಿ ಜರ್ರನೆ ಬಾಯಿಗೆ ಎಳೆದುಕೊಂಡ. ತನ್ನ – ಮೊಟಕಾದ ಬೆರಳುಗಳಿದ್ದ – ಎರಡು ಕರಗಳಿಂದ ತಗಡಿನ ತಟ್ಟೆಯನ್ನು ಇರುಕಿಸಿ ಎತ್ತಿಕೊಂಡು ಬೀದಿಯ ಆಚೆ ಕಡೆಯಲ್ಲಿದ್ದ ಕೊಳದ ಕಡೆಗೆ ನಡೆದ. ಕಾಲು ಬೆರಳುಗಳಿಗೆ ನೆಲ ಹಿಡಿಯುವ ಶಕ್ತಿಯಿಲ್ಲದುದರಿಂದ ಹಿಮ್ಮಡಿ ಊರಿ ನಿಧಾನವಾಗಿ ನಡೆಯುತ್ತಿದ್ದ – ಕೊಳದ ಮೇಲ್ಮೆಟ್ಟಲಿನಲ್ಲಿ ಪಾದಗಳಲ್ಲಿ ಧರಿಸಿದ್ದ ಕ್ಯಾನವಾಸ್ ಷೂಗಳು ನನೆಯದಂತೆ ನಿಂತು ತಗಡಿನ ತಟ್ಟೆಯನ್ನು ತೊಳೆದು, ನೀರು

ಕುಡಿದ. ಅವಸರವಾಗಿ ನೀರು ಕುಡಿಯುವಾಗ ತಟ್ಟೆ ಮತ್ತು ಬಾಯಿಯ ಮಧ್ಯೆ ನೀರು ಸುರಿದು ಅವನ ಕೋಟಿನ ಕಾಲರುಗಳನ್ನು ಎರಡು ಕಡೆಯೂ ನೆನೆಸಿತು. ನೀರನ್ನು ಸವರಿ ಕೋಟಿನ ಒಂದು ಜೇಬಿನಲ್ಲಿದ್ದ ಬೀಡಿಯ ಕಟ್ಟು ಮತ್ತು ಬೆಂಕಿಪೊಟ್ಟಣವನ್ನು ಮತ್ತೊಂದೆಡೆಗೆ ಬದಲಾಯಿಸಿ ಇಟ್ಟುಕೊಂಡ. ಮೇಲೇರಿ ಹಿಂತಿರುಗಿ ಬಂದಾಗ ತಗಡಿನ ತಟ್ಟೆಯನ್ನು ಕೆಳಗಿಟ್ಟು, ನಿಂತು ಒಂದು ಬೀಡಿಯನ್ನು ಹಚ್ಚಿದ. ಹೊಗೆಯೊಂದಿಗೆ ತೃಪ್ತಿಪಟ್ಟು ತೇಗಿ ಅವನು ಗೊಣಗೊಣಗಿದ.

"ಚೆನ್ನಾಗಿದೆ..." ಎಂದು ಬಾಯಿಬಿಟ್ಟು ತನಗೆ ತಾನೇ ಹೇಳಿಕೊಳ್ಳುವಾಗ ಮನಸ್ಸಿನಲ್ಲಿ —ಏನು ಚೆನ್ನಾಗಿರುವುದು?' ಎಂಬ ಪ್ರಶ್ನೆಯೂ ಉದ್ಭವಿಸಿತು.

"ಎಲ್ಲವೂ ಇದೋ ಈ ಬೆಳದಿಂಗಳು, ಈ ಕೊಳ...ಬೀಸುತ್ತಿರುವ ಗಾಳಿ, ಕುಡಿಯುವ ನೀರು...ಹಸಿವು, ಅನ್ನ, ನಿದ್ರೆ – ಎಲ್ಲವೂ ಚೆನ್ನಾಗಿವೆ. ಜೀವನ ಬಹಳ ಚೆನ್ನಾಗಿದೆ... ಬೀಡಿಯ ಸುಖವೊಂದೇ ಸಾಲದೆ" ಎಂದು ಬೀಡಿಯ ಬೆಂಕಿ ಹೆಚ್ಚು ಹೆಚ್ಚುವಂತೆ ಸೇದುತ್ತಾ ಬಾಯಿತುಂಬಾ ಹೊಗೆ ತುಂಬಿಕೊಂಡು ಹೊರಬಿಟ್ಟ. ಸ್ವಲ್ಪ ಹೊತ್ತಿನ ನಂತರ ಏನೋ ಆಲೋಚಿಸಿ ಛತ್ರದ ಜಗುಲಿಗೆ ಬಂದು ಒಂದು ಮೂಲೆಯಲ್ಲಿ ತಗಡಿನ ತಟ್ಟೆಯನ್ನು ಉರುಳಿಸಿಬಿಟ್ಟು ಗೋಡೆಯ ಪಕ್ಕದಲ್ಲಿದ್ದ ಬಟ್ಟೆಯನ್ನು ಎತ್ತಿಕೊಂಡು ನೆಲವನ್ನೊರೆಸಿ ಕುಳಿತುಕೊಂಡ.

"ಜಗತ್ತು ಎಷ್ಟು ಸುಂದರ. ಇದನ್ನು ನೋಡುವ ನನ್ನ ಮನಸ್ಸು ಬಹಳ ಸಂತೋಷ ಪಡುತ್ತದೆ. ಹೌದು, ಎಲ್ಲಾ ವಸ್ತುಗಳೂ ನೋಡಿದವರ ಮನಸ್ಸನ್ನು ಸಂತೋಷ ಗೊಳಿಸುವಾಗ ನಾನು ...ನಾನು? ನನ್ನನ್ನು ನೋಡಿದೊಡನೆ ಪ್ರತಿಯೊಬ್ಬರ ಮುಖ ದಲ್ಲಿಯೂ ಆಗುವ ಬದಲಾವಣೆ, ರೋಗದಿಂದ ಸ್ಪರ್ಶಜ್ಞಾನ ಕಳೆದುಕೊಂಡ ನನ್ನ ದೇಹಕ್ಕೆ ತಿಳಿಯದ ವೇದನೆ, ಪಾಪ ಅವರ ಮನಸ್ಸಿಗೆ ಉಂಟಾಗುತ್ತೆ. ಆ ದಿನ, ಒಂದು ಮನೆಯ ಮುಂದೆ ಹೋಗಿ 'ಅಮ್ಮಾ ತಾಯಿ ಹಸಿವಾಗುತ್ತಿದೆ' ಎಂದು ನಿಂತಾಗ, ಊಟ ಮಾಡಿ ಎಂಜಲು ಎಲೆಯನ್ನು ತಂದು ಹೊರಗೆ ಹಾಕಿದ ಹೆಣ್ಣು ನನ್ನನ್ನು ನೋಡಿ ವಾಂತಿಮಾಡಿಕೊಳ್ಳುವವಳಂತೆ ಅವಸ್ಥೆಪಟ್ಟು ಒಳಗೆ ಓಡಿದಳು ನಂತರ ಒಬ್ಬಾತ ಬಂದು ಇಣಕಿ ನೋಡಿ ಹೇಳಿದನಲ್ಲ... 'ಅಮ್ಮಾ, ಹೊರಗೆ ದರಿದ್ರನೊಬ್ಬ ಬಂದು ನಿಂತಿದ್ದಾನೆ. ಏನಾದರೂ ಹಾಕಿ ಕಳುಹಿಸು. ಇವನಂತಹವನು ಇನ್ನೂ ಯಾಕೆ ಬದುಕಿದ್ದಾನೋ? ಈ ತೀರದ ರೋಗದಿಂದ..."

"ಆ ಮಾತನ್ನು ಕೇಳಿದೊಡನೆ ಅಲ್ಲಿ ನಿಲ್ಲಲಾಗದೆ ಹಿಂತಿರುಗಿದಾಗ, 'ಇಗೋ ಹಿಡಿ ಪರದೇಶಿ' ಎಂದು ಕೂಗಿದ ಆ ಕರೆ, ಅದರಲ್ಲಿದ್ದ ಅನುಪಾತ ಜಗತ್ತಿನಲ್ಲಿ ಬದುಕಿರಬೇಕೆಂದು ಆಶೆಯನ್ನು ಮೂಡಿಸಿತ್ತು.... ಸೆರಗು ಹೊದೆದು ಕೈಯಲ್ಲಿ ಅನ್ನ ಹಿಡಿದು ಎದಿರು ನಿಂತಾಗ, 'ನನ್ನ ಮಗ ಸ್ವಲ್ಪ ದುಡುಕಾಗಿ ಮಾತನಾಡುತ್ತಾನೆ... ಸಾವು ಬದುಕು ನಮ್ಮ ಕೈಯಲ್ಲಿದೆಯೇನು?' ಎಂದು ಹೇಳಿಕೊಂಡೇ ನನ್ನ ತಟ್ಟೆಯಲ್ಲಿ ಭಿಕ್ಷೆ ಹಾಕಿದಳಾಕೆ. ತನ್ನ

ಮಗನನ್ನು ನೋಡಿ. 'ನೀನು ಸಾಯಬಾರದೆ?' ಎಂದು ಯಾರೋ ಕೇಳಿಬಿಟ್ಟಂತೆ ಅವರ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು..."

—ಆ ದಿನದ ನಂತರ ಅವನು ಹಗಲಿನಲ್ಲಿ ಭಿಕ್ಷೆಗೆ ಹೋಗಲಿಲ್ಲ. ಕತ್ತಲಾದ ಮೇಲೆ ಯಾರ ಕಣ್ಣಿಗೂ ಬೀಳದೆ ತಲೆಗೆ ಮುಸುಕುಹಾಕಿಕೊಂಡೇ ಹೋಗುತ್ತಿದ್ದ. ಮೂರು ವೇಳೆಗೂ ಹಿಂದಿನ ರಾತ್ರಿ ಒಂದು ಹೊತ್ತು ಬೇಡಿದ ಭಿಕ್ಷೆಯೇ. ಕೆಲವು ದಿನ ಅದೇ ಹೆಚ್ಚಾಗಿ ಮಾರನೆಯ ದಿನಕ್ಕೂ ಉಳಿದುದುಂಟು.

ಕಂಭಕ್ಕೆ ಒರಗಿ ಕುಳಿತಿದ್ದ ಭಿಕ್ಷುಕ ತುಂಬಿದ್ದ ಹೊಟ್ಟೆಯನ್ನು ತಡವಿಕೊಂಡ. "ಊಟ ಸ್ವಲ್ಪ ಹೆಚ್ಚೇ ಆಯಿತು..." ಎಂದು ಮತ್ತೆ ಒಂದು ತೇಗು ಬಿಟ್ಟು "ಮುರುಗಾ' ಎಂದು ಮೇಲೆದ್ದ:

ನೆಲದ ಮೇಲೆ ಹಾಸಿದ್ದ ಹರಿದುಹೋದ ಬಟ್ಟೆಯನ್ನು ಎತ್ತಿಕೊಂಡು ತಲೆಗೆ ಮುಂಡಾಸು ಕಟ್ಟಿದ. ಮೂಲೆಯಲ್ಲಿದ್ದ ಕೋಲನ್ನು ಕೈಯಲ್ಲಿ ಹಿಡಿದು ಕೆರೆಯ ಕಡೆಗ ನಡದ.

"ಉಂ... ದೇಹದಲ್ಲಿ ರೋಗವಿದ್ದರೇನಂತೆ? ಉಸಿರಿದೆಯಲ್ಲ. ಚೆನ್ನಾಗಿಯೇ ಇದೆ. ನಾಲಿಗೆಗೆ ರುಚಿಯಾಗಿ ತಿನ್ನುವ ಸುಖ, ಕಣ್ಣಿಗೆ ತಂಪಾಗಿ ನೋಡುವ ದೃಷ್ಟಿ, ಏನಾದ ರಾಗಲಿ ಶಬ್ದಗ್ರಹಣ...ರೋಗವಿದ್ದರೆ ಇವೆಲ್ಲಾ ಕೆಟ್ಟುಹೋಗುತ್ತದೆಯೇನು?"

ಕೆರೆಯ ದಡದ ಪಕ್ಕ ರೈಲ್ವೆ ಕಂಬಿ ದಿಬ್ಬದ ಮೇಲೆ ಕೋಲನ್ನು ಊರಿ ಕುಳಿತ ಭಿಕ್ಷುಕ ಬೀಡಿಯನ್ನು ಸೇದಿ ಹೊಗೆಯನ್ನು ಗಾಳಿಯಲ್ಲಿ ಬಿಟ್ಟ...

'ಅಬ್ಬ' ಊಟ ಮಾಡಿದ ಕೂಡಲೆ ಹೊಟ್ಟೆಯಲ್ಲಿ ಇದೆಂತಹ ನೋವು! ಊಟ ಮಾಡುವುದರಿಂದ ಸುಖವಿಲ್ಲ; ಆದರೆ ಅದರಲ್ಲೇ ಸುಖ. ದೇಹದಲ್ಲಿ ಸೇರಿಸಿಕೊಳ್ಳುವುದು ಸುಖವೆ? ದೇಹದಿಂದ ಎಲ್ಲವನ್ನೂ ಕಳಚಿಕೊಳ್ಳುವುದರಲ್ಲಿಯೇ ಸುಖ. ದೇಹವನ್ನೇ ಕಳಚಿಕೊಂಡರೆ...? ಸುಖವೇ! ಆದರೆ ದೇಹದ ಸ್ಮರಣೆಯೇ ಹೋಗಿಬಿಟ್ಟರೆ ಸುಖವೆಲ್ಲಿ?'

ಈಗ ಅವನು ಮೊಳಕಾಲುದ್ದ ನೀರಿನಲ್ಲಿ ನಿಂತು ಆಕಾಶವನ್ನು ನೋಡಿದ. ಬೆಳದಿಂಗಳು ಮತ್ತು ನಕ್ಷತ್ರಗಳು ಅವನ ನಯನಗಳಿಗೂ ಸುಂದರವಾಗಿ ಕಂಡವು.

"ಉಂ... ಅದೋ... ಅದೇ ಸಪ್ತರ್ಷಿ ಮಂಡಲ. ಆ ನಾಲ್ಕು ನಕ್ಷತ್ರಗಳು ಚೌಕಾಕಾರ ವಾಗಿದೆ; ಅದಕ್ಕೆ ಪಕ್ಕವಾಗಿ ಬಾಲದಂತೆ ಮೂರು ಉದ್ದಕ್ಕಿವೆಯಲ್ಲ, ಅವುಗಳಲ್ಲಿ ಮಧ್ಯೆ ಒಂದಿದೆ. ಅದರ ಪಕ್ಕ ಮಂದವಾಗಿ... ಅದೇ ಅರುಂಧತಿ ನಕ್ಷತ್ರ... ಸರಿ, ನನಗೆ ಆಯುಸ್ಸು ಗಟ್ಟಿ ಅರುಂಧತಿ ಕಾಣಿಸುತ್ತಿದೆಯಲ್ಲಾ... ಅಷ್ಟು ಸುಲಭವಾಗಿ ಎಲ್ಲರಿಗೂ ಗೊತ್ತಾಗುತ್ತದೇನು? ಸಣ್ಣಕ್ಕೆ ಹಗುರವಾಗಿ ಬರೆದು ಒರೆಸಿದಂತೆ... 'ಜಿಂಕೆಯಲ್ಲಿದೆಯೋ ಕಣ್ಣಿನಲ್ಲಿದೆಯೋ?' ಎಂದು ಕಣ್ಣುಜ್ಜಿಕೊಂಡು 'ಎಲ್ಲೂ ಇಲ್ಲ' ಎಂದು ಹಲವರು ಹೇಳಿ ಸುಮ್ಮನಾಗುತ್ತಾರೆ... ಅರುಂಧತಿಯನ್ನು ನೋಡಿದವನಿಗೆ ಆರು ತಿಂಗಳು ಸಾವಿಲ್ಲ ಎನ್ನುತ್ತಾರೆ..."

ಬೆಳದಿಂಗಳಿನಲ್ಲಿ ಮಿರಿಮಿಂಚುವ ಕೆರೆಯ ನೀರಿನ ಮೇಲೆ ಹಾಯ್ದು ಬೀಸುವ ಮಂದ ಮಾರುತ ಆ ರೋಗಿಷ್ಠನ ದೇಹವನ್ನೂ ಅಪ್ಪಿತು. ನೀರಿನ ಅಲೆಗಳು ಚಿಕ್ಕ ಚಿಕ್ಕ ಗೆಜ್ಜೆಯ ಹೆಜ್ಜೆಗಳನ್ನಿಡುತ್ತಾ, ನರ್ತಿಸಿ ಬರುವಂತೆ ತೀರಕ್ಕೆ ಬಂದು ಮಾಡುವ ಶಬ್ದ ಅವನ ಕಿವಿಗೆ ಕೇಳಿಸಿದುವು. ಕೆರೆಯ ಪಕ್ಕದಲ್ಲಿ ಹರಡಿ ಅರಳಿದ್ದ ಕಾಡುಪುಷ್ಪಗಳ ಆಳವಾದ ಸುವಾಸನೆ ಅಪಾರವಾಗಿತ್ತು... ಅವನು ಬದುಕಿರುವುದರಲ್ಲಿ ತಪ್ಪೇನು?

ಬಹಳ ಹೊತ್ತಿನ ನಂತರ ನೀರಿನಿಂದಾಚೆ ಮೇಲೇರಿ ಬಂದು ಅಲ್ಲಿ ಕಳಿಚಿಟ್ಟಿದ್ದ ಕ್ಯಾನ್‌ವಾಸ್ ಷೂಗಳನ್ನು ಎತ್ತಿ ಬಾಗಿ ನಿಂತು ಧರಿಸಿಕೊಂಡು ಹಾಗೆಯೇ ಅವನು ತಲೆಯೆತ್ತಿದಾಗ... ಎದಿರು...

ಉದ್ದಕ್ಕೆ ಹೋಗುತ್ತಿದ್ದ ರೈಲು ಕಂಬಿಗಳು ಒಂದು ಕಡೆ ಬಳಸಿ ತಿರುಗುವಾಗ ಕಣ್ಣಿನ ದೂರಕ್ಕೆ ಕಾಣುವ ಎಲ್ಲೆಯಲ್ಲಿ ಬೆಳಕು ಕಾಣಿಸಿತು... ಚಿಕ್ಕ ಬೆಳಕು. ಆ ಬೆಳಕು ಆಡುವಾಗ ರೈಲ್ವೆ ಕಂಬಿಗಳ ಮೇಲೂ ಆಕಾಶದಲ್ಲಿ ಇದ್ದ ತಂತಿಗಳ ಮೇಲೂ ಅದು ಜ್ವಲಿಸಿ ಬಿಟ್ಟು ಬಿಟ್ಟು ಧಾವಿಸುತ್ತಿತ್ತು. ದೂರದಲ್ಲಿ ರೈಲು ಬರುವ ಶಬ್ದ ಮೆಲ್ಲನೆ ಕೇಳಿಸಿತು.

"ಅಬ್ಬ ಮೇಯಿಲ್ ಬರುತ್ತಿದೆಯೋ? ಗಂಟೆ ಆಗಲೇ ಹನ್ನೆರಡಾಯಿತೇನು?" ಎಂದು ರೈಲ್ವೆ ಕಂಬಿಗಳನ್ನು ದಾಟಲು ಕೈಕೋಲನ್ನು ಇಳಿಜಾರಿನಲ್ಲಿ ಊರಿ ತಡಕಾಡಿದ. ರೈಲ್ವೆ ದಿಬ್ಬದ ಮೇಲೇರುವಾಗ, ದೂರದಲ್ಲಿ...

ಉದ್ದಕ್ಕೆ ಹೋಗುತ್ತಿದ್ದ ರೈಲು ಕಂಬಿಗಳು ಒಂದು ಕಡೆ ತಿರುಗುವಾಗ ಕಣ್ಣಿನ ದೂರಕ್ಕೆ ಕಾಣುವ ಎಲ್ಲೆಯಲ್ಲಿ ಎರಡಡಿ ಉದ್ದ... ಬೆಳ್ಳಗೆ ಚಲಿಸುತ್ತಿದ್ದ ಆಕಾರ... ಯಾವುದಾದರೂ ಮೃಗವೆ? ಅಥವಾ... ಮೊಳಕಾಲು ಮಡಿಸಿ ನೆಲದ ಮೇಲೆ ಊರಿ ಬರುತ್ತಿದ್ದ ಆ ಮನುಷ್ಯಾಕೃತಿ ರೈಲು ಕಂಬಿಗಳ ಮೇಲೇರಿದಾಗ ಎದ್ದು ನಿಂತಿತು. ಸುತ್ತ ಒಂದು ಬಾರಿ ನೋಡಿ, ತನ್ನ ಹಿಂದೆ ಭಿಕ್ಷುಕ ಬರುತ್ತಿದ್ದ ದಿಕ್ಕನ್ನು ನೋಡಲು ಹಿಂತಿರುಗಿದ. ಅಷ್ಟರಲ್ಲಿ ನಿಲ್ಲಲಾರದೆ ಕಾಲುಗಳು ಕಂಪಿಸಿ ಮೆಲ್ಲನೆ ಕರಗಳನ್ನು ನೆಲದ ಮೇಲೆ ಊರಿ ರೈಲು ಕಂಬಿಯ ಮೇಲೆ ಕುಳಿತುಕೊಂಡಿತು. ಮತ್ತೆ ನಿಶ್ಚಯ ಬುದ್ಧಿಯಿಂದ ಎರಡು ಕಂಬಿ ಗಳಿಗೂ ಮಧ್ಯೆ ಬಿಗಿಯಾಗಿ ಉದ್ದಕ್ಕೆ ಮಲಗಿತು.

"ಛೇ, ಮನುಷ್ಯನಿವ! ಬದುಕೇ ಜಿಗುಪ್ಸೆಯಾಗಿರಬೇಕು... ಅಯ್ಯೊ ಯಾಕೆ ನಿನಗಿಂತಹ ಬುದ್ಧಿ? ಬೆಳಕು ಶೀಘ್ರವಾಗಿ ಬರುತ್ತಿದೆಯಲ್ಲಾ" ಎಂದು ಬಡಬಡಿಸಿ, ಬೆರಳುಗಳಿಲ್ಲದ ಪಾದಗಳಿಗೆ ರಕ್ಷಣೆಯಾಗಿದ್ದ ಕ್ಯಾನ್‌ವಾಸ್ ಷೂಗಳನ್ನು ಉಜ್ಜಿ ಎಳೆಯುತ್ತಾ ಧಾವಿಸಿ ಬಂದ ಭಿಕ್ಷುಕನ ಕಿವಿಗಳಿಗೆ ದೂರದ ರೈಲು ಶಬ್ದ ಜೋರಾಗಿ ಕೇಳಿಸಿತು.

ರೈಲು ಬರುವ ಶಬ್ದ ಸಮೀಪಿಸಿತು. ಭಿಕ್ಷುಕ ಓಡಿಬಂದ ವೇಗದಲ್ಲಿ, ಕಣ್ಣುಗಳನ್ನು ಬಲವಾಗಿ ಮುಚ್ಚಿ ರೈಲು ಕಂಬಿಗಳ ಮಧ್ಯೆ ಬಿಗಿಯಾಗಿ ಮಲಗಿದ್ದವನನ್ನು ಕಂಕುಳಿಗೆ ಕೈ ಕೋಲನ್ನು ಕೊಟ್ಟು ಸ್ಮಶಾನದಲ್ಲಿ ಶವವನ್ನು ಉರುಳಿಸುವಂತೆ ದೂಕಿದ. ಅವನನ್ನು ತಳ್ಳಿದ ವೇಗಕ್ಕೆ ರೋಗಿಷ್ಟ ಎರಡು ಅಂಗೈಗಳಲ್ಲಿ ಬಲವಾಗಿ ಹಿಡಿದಿದ್ದ ಕೈಕೋಲು

ಎಗರಿ ಬಿತ್ತು. ರೈಲು ಕಂಬಿಗಳಿಂದ ಹೊರಳಿಬಿದ್ದ ಯುವಕ ಏನೂ ಅರಿಯದವನಾಗಿ ಎದಿರು ನಿಂತವನನ್ನು ನೆಟ್ಟದೃಷ್ಟಿಯಿಂದ ನೋಡಿದ. 'ಮತ್ತೆ ತನ್ನನ್ನು ತಳ್ಳಿ ಅವನು ರೈಲಿನ ಮುಂದೆ ಹೋಗಿ ಬೀಳುವನೋ' ಎಂಬ ಭಯದಿಂದ ಭಿಕ್ಷುಕ ತನ್ನ ಕೈಗಳೆರಡನ್ನೂ ಅಗಲವಾಗಿ ಬಿಚ್ಚಿ ಅವನ ಮೇಲೆ ಹಾಯುವಂತೆ ಅಡ್ಡ ನಿಂತು "ಬೇಡಪ್ಪಾ, ಬೇಡ ಉಸಿರು ಹೋದರೆ ತಿರುಗಿ ಬರುವುದಿಲ್ಲ..." ಎಂದು ದೈನ್ಯದಿಂದ ಹೇಳಿದ. ಅವನ ಮುಂದೆ ಎರಡು ಕಾಲುಗಳೂ ಕಂಪಿಸುತ್ತಾ ದೇಹವೇ ಅಲುಗಾಡುತ್ತಾ ಇದ್ದ ಯುವಕ ನಿಂತಿದ್ದ.

ಆಗ ವಿಜಿಲ್ ಶಬ್ದದೊಂದಿಗೆ ಬಂದ ಮೆಯಿಲ್ ಗಾಡಿ ಆ ಇಬ್ಬರ ಮೇಲೆ ತನ್ನ ನೆರಳನ್ನು ಬೀಸಿ ಮುಂದೆ ಹಾದುಹೋಯಿತು. ರೈಲಿನ ಪ್ರಬಲವಾದ ಶಬ್ದ ಪಕ್ಕದಲ್ಲೇ ದಢದಢಿಸಿ ಅದು ನಿಲ್ಲುವವರೆಗೆ ಮೌನವಾಗಿ ನಿಂತಿದ್ದ ಇಬ್ಬರೂ ರೈಲಿನ ಹಿಂಭಾಗವನ್ನು ಕಂಡರು. ಕೆಂಪು ದೀಪ ಓಡಿ ಓಡಿ ದೂರದಲ್ಲಿ ಮರೆಯಾಯಿತು. ನಿಂತಿದ್ದ ಯುವಕ ತಾಳಲಾರದೆ ಕುಳಿತ. ರೋಗಿಷ್ಟ ತನ್ನ ಕೈಯಿಂದ ಎಗರಿಹೋದ ಕೈಕೋಲನ್ನು ಹುಡುಕಿ ಎತ್ತಿಕೊಂಡು ಬಂದ. "ಅಯ್ಯಾ ನಿನ್ನನ್ನು ನಿಂದಿಸಿ ಫಲವಿಲ್ಲ... ಈ ಜಾಗದ ರಾಶಿಯೇ ಹಾಗೆ. ಹೌದು, ಈ ಜಾಗಕ್ಕೆ ಒಂದು ಬಲಿಯಾಗಬೇಕಾಗಿದೆ. ಒಂದು ಎರಡು ಎಂದು ಒಂದರಿಂದ ಮೂರಾಯಿತು. ನಾಳೆ ಬೆಳಗಾಗಲಿ, ಎರಡು ನಿಂಬೆಹಣ್ಣುಗಳನ್ನು ಆದರೂ ತೆಗೆದು ಇಡಬೇಕು. ಮೊನ್ನೆ ಹಾಗೆಯೇ – ಕೆರೆಯ ದಂಡೆಯಲ್ಲಿ ಯಾರೋ ಹೆಂಗಸು – ಗಂಡಸು ಮಗುವನ್ನು ಬಿಟ್ಟು ಬುತ್ತಿಯ ಗಂಟನ್ನು ಬಿಚ್ಚಿ ಊಟ ಮಾಡುತ್ತಿದ್ದರು... ಪಾಪ ಅದಕ್ಕೇನು ಗೊತ್ತು – ಹಸುಗೂಸು ಮೆಲ್ಲನೆ ಹೆಜ್ಜೆಹಾಕಿ ರೈಲ್ವೆ ಕಂಬಿ ಏರಿತು... ಇದೇ ಜಾಗ. ರೈಲು ಬರುವ ವೇಳೆ... ನಂತರ ನಾನು ನೋಡಿದೆ... ಬೇರೆ ಯಾರೂ ಇರಲಿಲ್ಲ. ಸರಿ, ಆಪತ್ತಿನ ವೇಳೆಯಲ್ಲಿ ಪಾಪವೇನೂ ಇಲ್ಲ ಎಂದು ಮುಟ್ಟಿ ಎತ್ತಿಕೊಂಡೆ..." ಎಂದು ಹೇಳಿ ಒಂದು ಕ್ಷಣ ಮೌನವಾಗಿ ನಿಂತ. ನಂತರ ಏನೋ ಜ್ಞಾಪಿಸಿಕೊಂಡು ನಿಟ್ಟುಸಿರು ಬಿಟ್ಟ. "ಉಂ... ಇರುವುದಿಲ್ಲವೆ... ಹೆತ್ತವರಿಗೆ ಗೊತ್ತು ಮಗುವಿನ ಮೇಲಿನ ಪಾಶ..." ಎಂದು ತನ್ನ ನೆನಪಿಗೆ ತಾನೇ ಉತ್ತರ ಕೊಟ್ಟು ಮುಂದುವರಿಸಿದ: "ಯಾಕೆ ಹೇಳಿದೆನೆಂದರೆ, ಈ ಜಾಗದ ರಾಶಿಯೇ ಅಂತಹುದು. ಈ ದಿನ ಬೆಳಿಗ್ಗೆ ಕೂಡ ಒಂದು ಎಮ್ಮೆ... ಆಪತ್ತು ಎದುರಾದರೆ ಮನುಷ್ಯನಿಗೇ ಬುದ್ಧಿ ಮಂದವಾಗುತ್ತೆ. ಎಮ್ಮೆ ಏನು ಮಾಡೀತು? ಗುಡ್ಸ್‌ಗಾಡಿ ಬಂದೇಬಿಟ್ಟಿತು. ಡ್ರೈವರ್ ವಿಜಿಲ್ ಹೊಡೆದ... ಹೊಡೆದ... ಈ ಎಮ್ಮೆಯಾದರೋ ಕಂಬಿಯನ್ನು ಬಿಟ್ಟು ಕದಲದೆ ನೇರ ಓಡುತ್ತಲೇ ಇತ್ತು. ಅವನು ಬಂದ ವೇಗಕ್ಕೆ ಬ್ರೇಕ್ ಹಾಕಿದರೆ ನಿಲ್ಲುವುದೇ? ಎಂತಹ ಕರ್ಮ...? ರೈಲೂ ಓಡುತ್ತಿತ್ತು ಎಮ್ಮೆಯೂ ಓಡುತ್ತಿತ್ತು. ನಾನೊಂದು ಪಕ್ಕದಲ್ಲಿ ಓಡಿ ಕಲ್ಲುಗಳನ್ನೆತ್ತಿ ಹೊಡೆಯುತ್ತಲೇ ಇದ್ದೆ. ಆಮೇಲೆ ಒಂದೆಳೆಯಲ್ಲಿ ತಪ್ಪಿಸಿಕೊಂಡಿತು..." ಎಂದು ಜಾಗದ ರಾಶಿಯನ್ನು ರೋಗಿಷ್ಟ ವಿವರಿಸಿದ.

ಆ ಯುವಕ ತಲೆಬಾಗಿ ಮೌನವಾಗಿ ಕುಳಿತಿದ್ದ. ರೋಗಿಷ್ಠ ಒಂದು ಬೀಡಿಯನ್ನೆತ್ತಿ ಹಚ್ಚಿಕೊಂಡ" 'ನಾನು' ಒಬ್ಬ ಈಕಡೆ ಸುತ್ತಾಡಿಕೊಂಡಿರುತ್ತೇನಲ್ಲ. ಈಗ ಏನೆಂದರೆ ಯಾವುದಾದರೂ ಕುರಿಯೇನಾದರೂ ಬಂದು ನಿಂತಿದೆಯೇನೋ ಎಂದು ಓಡಿ ಬಂದೆ. ಒಳ್ಳೆಯ ಕೆಲಸ. ಒಬ್ಬ ಮನುಷ್ಯನನ್ನು ಸಾವಿನಿಂದ ಪಾರು ಮಾಡಿದ್ದಾಯಿತು... ಉಂ... ನಾವು ತಡೆಯುತ್ತೇವೇನು...? ನಿನಗಿನ್ನೂ ಆಯುಸ್ಸಿದೆ... ಏನೋ, ತಡೆಯಬೇಕೆಂದಿತ್ತು. ತಡೆದುದಾಯಿತು... ಇಲ್ಲದಿದ್ದರೆ ಮನುಷ್ಯ ತಡೆದರೆ ಎರಗುವ ಸಾವು ನಿಂತುಬಿಡುತ್ತ ವೇನು – ?" ಎಂದು ಬಾಯಿಯಲ್ಲಿ ಹೊಗೆಯಾಡುತ್ತಿದ್ದ ಬೀಡಿಯೊಂದಿಗೇನೇ ಕಂಕುಳ ಲ್ಲಿದ್ದ ಬಟ್ಟೆಯ ತುಂಡನ್ನು ತೆಗೆದು ತಲೆಗೆ ಸುತ್ತಿಕೊಂಡ. ನಂತರ, ನೆಲಕ್ಕೆ ತಲೆಬಾಗಿ ಮೊಳಕಾಲು ಮಡಿಸಿಕೊಂಡು ಕುಳಿತಿದ್ದ ಆ ಯುವಕನನ್ನು ಮೌನವಾಗಿ ದೃಷ್ಟಿಸಿದ. ಅವನು ರೂಪವಂತ: ಒಳ್ಳೆಯ ಮೈಬಣ್ಣ. ಬೆಳದಿಂಗಳಿನಲ್ಲಿ ಅವನ ತಲೆಕೂದಲು ಕಪ್ಪಾಗಿ ಮಿರುಗಿತು. ಬಿಳಿಯ ಷರಟು ಹಾಕಿದ ಎಂಟು ಮೊಳದ ಪಂಚೆಯನ್ನುಟ್ಟಿದ್ದ. ಅವನು 'ತನ್ನಂತೆ ಪರಮ ದರಿದ್ರನೋ, ಭಿಕ್ಷುಕನೋ, ರೋಗಿಷ್ಠನೋ ಅಲ್ಲ' ಎಂದು ತೋರಿತು. 'ದಾರಿದ್ರ್ಯವೋ ಉಪವಾಸದ ಹಿಂಸೆಯೋ ಆ ಯುವಕನಲ್ಲಿ ಕಾಣಿಸಲಿಲ್ಲ. ಮತ್ತೆ ಯಾವ ಕಾರಣದಿಂದ ಆತ್ಮಹತ್ಯೆ ಮಾಡಿಕೊಳ್ಳಲು ಬಂದ?' ಎಂದು ತಿಳಿಯಲು ರೋಗಿಷ್ಠ ಕುತೂಹಲಗೊಂಡ." ಸರಿ, "ಎದ್ದು ಬಾ. ಇದೋ... ಅಲ್ಲಿ ಛತ್ರದ ಜಗುಲಿಯ ಮೇಲೆ ಕುಳಿತುಕೊಳ್ಳೋಣ. ಆ ಛತ್ರವಿದೆಯಲ್ಲಾ..." ಎಂದು ಮಾತನಾಡಿಕೊಂಡೇ ನಡೆಯುತ್ತಾ ತಿರುಗಿ ನೋಡಿದ ಭಿಕ್ಷುಕ. ಅವನಿನ್ನೂ ಮೇಲಕ್ಕೆ ಏಳದೆ ದೂರದಲ್ಲಿ ಕುಳಿತಿದ್ದುದನ್ನು ಕಂಡ. "ಏನಪ್ಪಾ, ಕುಳಿತೇ ಇದ್ದೀಯಲ್ಲಾ? ಇನ್ನು ಮುಂದಿನ ರೈಲು ಬೆಳಗ್ಗೆ ಆರು ಗಂಟೆಗೆ ಉತ್ತರ ದಿಕ್ಕು ಹಿಡಿದು ಹೊರಡುವ ಪಾರ್ಸಲ್ ಗಾಡಿ; ಬಾ, ಹೋಗೋಣ. ಜಗತ್ತಿನಲ್ಲಿ ಮನುಷ್ಯನಾಗಿ ಹುಟ್ಟಿದರೆ ಕಷ್ಟವೂ ಇರುತ್ತೆ ಸುಖವೂ ಇರುತ್ತೆ. ಕಷ್ಟಕ್ಕೆ ಭಯಪಟ್ಟು ಸತ್ತರೆ, ಸುಖವನ್ನು ಅನುಭವಿಸುವವರು ಯಾರು? ಕಷ್ಟವನ್ನು ನೋಡಿ ನಗಬೇಕಪ್ಪಾ. ಏಕೆಂದರೆ ಕಷ್ಟ ಬಂದರೆ ಹಿಂದೆಯೇ ಸುಖ ಕಾದಿರುತ್ತೆ ಎಂದರ್ಥ... ಉಂ... ಏಳು, ಹೋಗೋಣ..." ಎಂದು ಉತ್ಸಾಹವಾಗಿ ಮಾತನಾಡಿದ ಭಿಕ್ಷುಕ. ಅವನನ್ನು ತಲೆಯೆತ್ತಿ ಕಣ್ಣೀರು ತುಂಬಿದ ದೃಷ್ಟಿಯಿಂದ ಮುಖದಲ್ಲಿ ವಿಷಾದಕರ ಮಂದಹಾಸದಿಂದ ಆ ಯುವಕ ಏಳಲು ಪ್ರಯತ್ನಿಸಿದ. ಭಿಕ್ಷುಕನ ಸಹಾಯಕ್ಕಾಗಿ ಕೈ ನೀಡಿದ. 'ದೇವರೇ ಇವನ ಕೈ ಹಿಡಿದು ನಾನು ಎತ್ತುವುದು ಹೇಗೆ?' ಎಂದು ದೂರ ಸರಿದ ಭಿಕ್ಷುಕ. ಆ ಯುವಕ ಸ್ವಪ್ರಯತ್ನದಿಂದ ಕೈಗಳನ್ನು ಊರಿ ಹೇಗೋ ಎದ್ದು ನಿಂತ. ನಿಧಾನವಾಗಿ, ಕಾಲುಗಳನ್ನು ಭದ್ರವಾಗಿ ಊರಿ ಮತ್ತೊಂದು ಕಾಲನ್ನು ಎತ್ತಿಡುವಾಗ ತಡವರಿಸಿ ಬೀಳಲಿದ್ದ. ಆಗ ಭಿಕ್ಷುಕನ ತೋಳುಗಳನ್ನು ಹಿಡಿದು ನಿಂತ. ಅವನು ಹಿಡಿದ ವೇಗಕ್ಕೆ ಗಾಬರಿಗೊಂಡ ಭಿಕ್ಷುಕ ಸಾವರಿಸಿಕೊಂಡು ಆಗತಾನೇ ಆ ಯುವಕನ ಕಾಲು ಗಳನ್ನು ನೋಡಿದ. ಅವು ನೋಡಲು ಸರಿಯಾಗಿಯೇ ಇದ್ದುವು. ಆದರೂ ಮೊಳಕಾಲು

ಗಳಲ್ಲಿ ತೊಡೆಗಳು ಸೇರುವ ಕಡೆ ಮೊಳಕಾಲು ಚಿಪ್ಪುಗಳು ಅಸಹಾಯಕವಾಗಿ ನಡುಗುತ್ತಿದ್ದುವು. ಅವುಗಳ ಕೆಳಗೆ ನಾಲ್ಕು ದಿಕ್ಕಿಗೂ ಮಡಿಸಿಕೊಳ್ಳುವಂತಹ ಕಾಲುಗಳು ಕೃಶವಾಗಿದ್ದುವು. ಸ್ವಲ್ಪ ಹೊತ್ತಿಗೆ ಮುಂದೆ ದೂರದ ನೋಟಕ್ಕೆ ಎರಡಡಿ ಎತ್ತರ ಮಾತ್ರ ಕುಬ್ಜವಾಗಿ ಕಂಡ ಆ ಆಕೃತಿಯ ನೆನಪಾಯಿತು ಭಿಕ್ಷುಕನಿಗೆ. ಆ ಯುವಕ ನಡೆಯಲಾರದೆ ಮಂಡಿಯೂರಿ ತೆವಳಿಕೊಂಡು ಬಂದಿದ್ದಾನೆ ಎಂದು ಊಹಿಸಿ "ಇದೋ, ಈ ಕೋಲನ್ನು ಹಿಡಿದು ನಡೆಯುತ್ತೀಯಾ?" ಎಂದು ಕೈಕೋಲನ್ನು ಅವನ ಕೈಗೆ ಕೊಟ್ಟ.

"ಊಹುಂ, ಆಗದು. ಹೀಗೆಯೇ ಬರುತ್ತೇನೆ... ನೀನು ನಡೆದರೆ ನಾನು ಹಿಂದೆ ಬರುತ್ತೇನೆ" ಎಂದು ಅವನ ತೋಳುಗಳನ್ನು ಬಲವಾಗಿ ಹಿಡಿದು ಹೇಳಿದ ಆ ಹೆಳವ. ರೋಗಿಷ್ಠ ಮೆಲ್ಲನೆ ನಕ್ಕ. "ಕೈಕೋಲಿಲ್ಲದೆ ನಾನೂ ನಡೆಯಲಾರೆ... ಆದರೂ ಹೇಗೋ ನಡೆಯೋಣ ಎಂದು ಅದನ್ನು ನಿನಗೆ ಕೊಟ್ಟೆ. ಕೈಯಲ್ಲಿ ಕೋಲಿದ್ದರೆ ನಿನ್ನನ್ನು ಹೊತ್ತುಕೊಂಡು ಕೂಡ ನಡೆಯಬಲ್ಲೆ... ಬಾ, ಹೋಗೋಣ" ಎಂದು ಕೈಕೋಲನ್ನು ನೆಲದ ಮೇಲೆ ಭದ್ರವಾಗಿ ಊರಿ ಮೆಲ್ಲನೆ ನಡೆದ ರೋಗಿಷ್ಠನ ತೋಳುಗಳಿಗೆ ಹಿಡಿದುಕೊಂಡು ಊನವಾಗಿದ್ದ ಕಾಲುಗಳನ್ನು ಹೆಳವ ಸ್ವಲ್ಪ ಸ್ವಲ್ಪವಾಗಿ ಎಳೆಯುತ್ತಾ ನೇತಾಡಿಕೊಂಡು ಮುಂದೆ ಸರಿದ.

"ಅಪ್ಪಾ......"

"ಊಂ......"

"ತುಂಬಾ ಭಾರವಾಯಿತೇನು...? ಊಂ... ಊಂ... ನೋಡಿಕೊಂಡು..."

"ಅದೆಲ್ಲಾ ಏನೂ ಇಲ್ಲ. ಭಯವಿಲ್ಲದೆ ಬಾ..."

"ಹೀಗೆ ಎಲ್ಲರಿಗೂ ಭಾರವಾಗಿರಲು ಇಷ್ಟವಿಲ್ಲದೆ... ಇಷ್ಟವಿಲ್ಲದೆ..." ಎಂದು ಬಿಕ್ಕುತ್ತಾ ಹೇಳಿದ ಹೆಳವ.

"—ಉಸಿರೇ ಬಿಟ್ಟುಬಿಡೋಣವೆಂದುಕೊಂಡೆಯಾ? ಯಾಕಪ್ಪಾ, ಯಾವಾಗ ನೋಡಿದರೂ ನಿನ್ನ ಬಗ್ಗೆಯೇ ನಿನಗೆ ಧ್ಯಾನ...?"

"ನನ್ನಿಂದ ಎಲ್ಲರಿಗೂ ಕಷ್ಟ..."

ಅವರಿಬ್ಬರೂ ತಡವರಿಸಿ ಮುಂದೆ ಸಾಗಿದ್ದರು.

ಹೆಳವನೂ ರೋಗಿಷ್ಠನೂ ಬೆಳದಿಂಗಳು ಇಳಿಯುತ್ತಿದ್ದ ಜಗುಲಿಯಲ್ಲಿ ಮಲಗಿದ್ದರು. ರೋಗಿಷ್ಠ ಅರ್ಧ ಮಲಗಿ ಜಗುಲಿಯಲ್ಲಿ ಒರಗಿ ಕಾಲುಗಳನ್ನು ನೀಡಿ ಬೀಡಿ ಸೇದುತ್ತಿದ್ದ.

"ಬೀಡಿ ಸೇದುತ್ತಿಯಾ ?"

"ಬೇಡ ಅಭ್ಯಾಸವಿಲ್ಲ..." ಎಂದು ಬೋರಲಾಗಿ ಮಲಗಿದ್ದ ಹೆಳವ ಉತ್ತರವಿತ್ತ. ಇದ್ದಕ್ಕಿದ್ದಂತೆ ಬೋರಲು ಹಾಕಿದ್ದ ಮುಖವನ್ನು ತಿರುಗಿಸಿ ರೋಗಿಷ್ಠನನ್ನು ಅವನು ಕೇಳಿದ : "ಕಷ್ಟದ ಹಿಂದೆ ಸುಖ ಎಂದೆಯಲ್ಲಾ... ನನಗೆ ಇನ್ನುಮೇಲೆ ಎಂತಹ ಸುಖ? ಸುಖ ಇನ್ನಿಲ್ಲ ಎಂದು ತಿಳಿದೂ ನಾನು ಯಾಕೆ ಬದುಕಿರಬೇಕು ?"

"ಸುಖವೇ ಬರುವುದಿಲ್ಲವೆಂದು ತೀರ್ಮಾನ ಹೇಳಲು ನೀನು ಯಾರು? ಕಷ್ಟ ಬರುತ್ತದೆಯೆಂದು ನೀನು ಭವಿಷ್ಯ ಕಂಡೆಯೇನು? ಅದು ಇದ್ದಕ್ಕಿದ್ದಂತೆ ಎರಗಿದಂತೆ ಇದೂ ಬರದೆ... ಅದೆಲ್ಲಾ ಅವನು ನೋಡಿ ಹೇಳಬೇಕು" – ಎಂದು ಆಕಾಶವನ್ನು ನೋಡಿ ಹೊಗೆಬಿಟ್ಟ ಭಿಕ್ಷುಕ.

ರೋಗಿಷ್ಠನಿಗೇ ತಾನು ಹೇಳಿದ ಉತ್ತರ ಹೆಳವನ ಮನಸ್ಸಿನ ಸಮಾಧಾನಕ್ಕೆ ಎಂದು ಗೊತ್ತು. "ಸಾಯಬಾರದಪ್ಪ... ಒಂದಲ್ಲ ಒಂದು ದಿನ ಎಲ್ಲಾ ಸಾಯುತ್ತೇವಲ್ಲ... ಅದುವರೆಗೆ ಬದುಕಿ ಬಿದ್ದಿರೋಣ..." ಎಂದು ಹೇಳಿದ. "ಅದು ಸರಿ ನೀನು ಸಾಯುವುದಕ್ಕೆ ಬಂದುಬಿಟ್ಟೆಯಲ್ಲ. ನಿನಗೆ ತಂದೆ-ತಾಯಿ ಕುಟುಂಬ ಎಂದು ಏನೂ ಇಲ್ಲವೆ? ನನ್ನಂತೆ ನೀನೂ ಅನಾಥನೇನು?" ಎಂದು ಕೇಳಿದ ಮುಂದುವರಿಸಿ ರೋಗಿಷ್ಠ.

"ಅಮ್ಮಾ..." ಎಂದು ನಿಟ್ಟುಸಿರು ಬಿಟ್ಟು ಎದ್ದು ಕುಳಿತ ಹೆಳವ ಕೆಲವು ಕ್ಷಣ ಮೌನವಾಗಿ ತಲೆಬಾಗಿಸಿಕೊಂಡಿದ್ದ. ನಂತರ ಬಿಕ್ಕಿ ಬಿಕ್ಕಿ ಅಳತೊಡಗಿದ.

"ವ್ಯಥೆಪಡಬೇಡಪ್ಪ" – ಎಂದು ಸಮಾಧಾನ ಹೇಳಿದ ಭಿಕ್ಷುಕ. ಯುವಕ ಮುಖವನ್ನೊರಿಸಿಕೊಂಡು ಹೇಳಿದ:

"ಅದೋ ಕಾಣಿಸುತ್ತಿದೆಯಲ್ಲಾ" ಎಂದು ರೈಲು ಕಂಬಿಗಳಿಗೆ ಎದಿರುಗಿ ಸಾಲಾಗಿ ಕಾಣುವ ಕೆಲವು ಮನೆಗಳ ಹಿತ್ತಲುಗಳನ್ನು ತೋರಿಸುತ್ತಾ. "ಅಲ್ಲೇ ನನ್ನ ಮನೆ. ಅಮ್ಮ ಇದ್ದಾರೆ. ತಮ್ಮನೂ ಇದ್ದಾನೆ. ಅವನಿಗೆ ಮದುವೆಯೂ ಆಗಿ ಮಕ್ಕಳಾಗಿವೆ. ನನ್ನಿಂದ ಯಾರಿಗೂ ಸಹಾಯವೂ ಇಲ್ಲ. ಸಂತೋಷವೂ ಇಲ್ಲ. ಜನ್ಮತಃ ತಾಯಿ ನನ್ನನ್ನು ಎತ್ತಿಕೊಂಡೇ ಇರುತ್ತಿದ್ದರು. ಅವರಿಗೊಂದೇ ನಂಬಿಕೆ – ನನಗೆ ಕಾಲುಗಳು ಸರಿಹೋಗುತ್ತೆ ಅಂತ... ಯಾವಾಗ ನೋಡಿದರೂ ತಮ್ಮನ ಬಳಿ 'ಆ ಡಾಕ್ಟರನ್ನು ನೋಡಬೇಕು ಈ ಡಾಕ್ಟರನ್ನು ನೋಡಬೇಕು' ಎಂದು ಹಣ ತೆಗೆದುಕೊಂಡು ಅವರಿಗೆ ತೆತ್ತದ್ದಷ್ಟೇ. ಅವನೇನು ಮಾಡಿಯಾನು...? ಕಾಲ ಕಳೆಯುತ್ತಿದ್ದಂತೆ ತಮ್ಮನೂ ಗೃಹಸ್ಥನಾಗಿ ಪತ್ನಿ ಪುತ್ರರೊಂದಿಗೆ ಇರುವಾಗ ಅವರಿಗೆ ನಾನು ಹೊರೆಯಾಗಿರಲೆ? ನನಗಾಗಿ ತಾಯಿ – ತಮ್ಮ ದಿನವೂ ಜಗಳ ಮಾಡುತ್ತಿದ್ದರು. ತಮ್ಮ ಕೋಪದಿಂದ ನನ್ನನ್ನು 'ಹೆಳವ' ಎಂದ. ತಾಯಿ, ದುಃಖದಿಂದ ಅತ್ತರು" – ಎಂದು ಹೆಳವ ಹೇಳಿದಾಗ ರೋಗಿಷ್ಠನ ಮನದಲ್ಲಿ ತಲೆಯ ಮೇಲೆ ಸೆರಗು ಹೊದೆದು 'ಪರದೇಶಿ' ಎಂದು ಕರೆದ, ಆ ಕಂಠ ಮತ್ತು ಮುಖ ನೆನಪಿಗೆ ಬಂತು. ನೀಡಿದ ಮೊಳಕಾಲುಗಳ ಚಿಪ್ಪುಗಳನ್ನು ಸವರಿಕೊಂಡು ಹೇಳಿದ ರೋಗಿಷ್ಠ:

"ನೆನ್ನೆ ಯಾರೋ ಗ್ರಾಮವೈದ್ಯರೊಬ್ಬರು ಇಂತಹ ರೋಗಗಳನ್ನು ಗುಣಪಡಿಸುತ್ತಾರೆಂದು ಯಾರೋ ಹೇಳಿದರು – ತಾಯಿ, ಕೈಯಲ್ಲಿದ್ದ ಹಣವನ್ನು ಸೆರಗಿನ ತುದಿಯಲ್ಲಿ ಕಟ್ಟಿಕೊಂಡು, 'ಬಾರೊ' ಎಂದು ನಿಟ್ಟುಸಿರುಬಿಟ್ಟು ನನ್ನನ್ನು ಕರೆದೊಯ್ದಾಗ ನಾನೇನು ತಾನೆ ಮಾಡಬಲ್ಲೆ ಹೇಳು? ಸರಿಯೆಂದು ತಾಯಿಯ ತೋಳಿನ ಮೇಲೆ ಒರಗಿಕೊಂಡು

ಹೋದೆ. ಆ ವೈದ್ಯನಿದ್ದ ಜಾಗ ನಾಲ್ಕು ಮೈಲಿ ದೂರದಲ್ಲಿತ್ತು... ಬಸ್ಸಿನಲ್ಲಿ ಹೋಗಬೇಕು... ಹೋದೆವು... ತಾಯಿ ಆಶೆಯಲ್ಲಿ ಒಂದೇ ಬಾರಿಗೆ ಮಣ್ಣು ಬಿತ್ತು... ನನ್ನ ಕಾಲುಗಳನ್ನು ನೋಡಿ 'ಸಾಧ್ಯವಿಲ್ಲ' ಎಂದುಬಿಟ್ಟ ಆ ವೈದ್ಯ. 'ಇವನೂ ಸರಿಯಾದ ವೈದ್ಯನಲ್ಲ... ಜನರನ್ನು ಮೋಸಗೊಳಿಸುವವನಷ್ಟೆ.' ಎಂದು ಒಂದು ನಿಮಿಷದಲ್ಲಿ, ಅವನು ಬಹಳ ಕಾಲದಿಂದ ಪಡೆದಿದ್ದ ಮೆಚ್ಚುಗೆಯನ್ನು ಅಳಿಸಿ 'ಬಾರೋ ಹೋಗೋಣ' ಎಂದು ನನ್ನನ್ನು ಕರೆದುಕೊಂಡು ಬಸ್‌ಸ್ಟಾಂಡಿಗೆ ಬಂದುಬಿಟ್ಟರು ತಾಯಿ... ಬಸ್ಸಿನಲ್ಲಿ ಒಂದೇ ನೂಕು ನುಗ್ಗಲು..."

ಒಂದು ನಿಮಿಷ ಮಾತು ನಿಲ್ಲಿಸಿ ಕಣ್ಣೀರಿಡುತ್ತಾ, ಎಲ್ಲಿಯೋ ನೋಡುತ್ತಿದ್ದಂತೆ ಶೂನ್ಯ ದೃಷ್ಟಿಯಿಂದ ಹೃದಯವುಕ್ಕಿ, ಕೊರಳುಕಟ್ಟಿತು ಹೆಳವನಿಗೆ. ಅವನು ಬಾಳಿನ ಬಗ್ಗೆ ಉಂಟಾದ ಜಿಗುಪ್ಸೆಗೆಲ್ಲಾ ಯಾವ ಒಂದು ಸಂದರ್ಭ ಕಾರಣವಾಯಿತೋ ಅವನನ್ನು ಸಾವಿನ ಪೀಠಕ್ಕೆ ತಂದು ತಳ್ಳಿತೋ ಆ ಪ್ರಸಂಗ ಮನಸ್ಸಿಗೆ ನಾಟಿತು. ಅವನ್ನು ನೆನೆಸಿಕೊಂಡೇ ರೋಗಿಷ್ಠನ ಬಳಿ ವಿವರಿಸಿದ ಹೆಳವ.

ಆ ಚಿತ್ರ—

ಬಿಳಿಯ ಸೀರೆಯನ್ನುಟ್ಟು ಸೀರೆಯನ್ನು ತಲೆಯ ಮೇಲೆ ಹೊದ್ದ ಆ ತಾಯಿಯ ತೋಳುಗಳನ್ನು ಹಿಡಿದು ತನ್ನ ಪೂರ ಭಾರವನ್ನು ಅವಳ ಮೇಲೆಯೇ ಹಾಕಿ ಬರುತ್ತಿದ್ದ ಮಗನೊಂದಿಗೆ "ಸಾಯುವಂತಿದ್ದಾನೆ. ಯಾರೋ ಹೇಳಿದರೆಂದು ನಂಬಿ ಬಂದೆ. ಇವನು ವೈದ್ಯನೇ ಅಲ್ಲ. ತಂತ್ರ ಮಂತ್ರ ಮಾಡುವವನಷ್ಟೆ... ನೀನು ಚಿಂತಿಸಬೇಡಪ್ಪ ನಾನು ಮುಂದಿನ ತಿಂಗಳು ನಿನ್ನನ್ನು ವೆಲ್ಲೂರು ಮಿಷನ್ ಆಸ್ಪತ್ರೆಗೆ ಕರೆದುಕೊಂಡು ಹೋಗಿ..." ಎಂದು ಅವಳು ಏನೋ ಹೇಳಲಿರಲಾಗಿ ಅವಳ ತೋಳುಗಳಲ್ಲಿ ಹಣೆಯನ್ನು ಉಜ್ಜಿ ಕೊಳ್ಳುವಂತೆ ಕಣ್ಣೀರನ್ನು ಒರೆಸಿಕೊಂಡು ಹೇಳಿದ ಮಗ:

"ನನಗೆ ಕಾಲುಗಳಿಲ್ಲ ಎಂಬ ಚಿಂತೆಯಿಲ್ಲಮ್ಮ. ನೀನು ನನಗಾಗಿ ಪಡುವ ಶ್ರಮವನ್ನು ಕಂಡರೆ ನನಗೆ ವ್ಯಥೆಯೆನಿಸುತ್ತಮ್ಮ..." ಎಂದು ಬಿಕ್ಕುವ ಕಂಠದಲ್ಲಿ ಹೇಳುತ್ತಾ ಹಣೆಯುಜ್ಜಿಕೊಂಡು ಇರುವಾಗಲೇ ಬಸ್ ಬಂದಿತು.

"ಮಗು, ಗಟ್ಟಿಯಾಗಿ ಹಿಡಿದುಕೋ... ನೋಡು, ನೋಡು, ಹೀಗೆ ಕುಳಿತುಕೋ ಎಂದು ಮಗನನ್ನು ಹೊತ್ತುಕೊಂಡು ಅವಳು ಬಸ್ಸಿನೊಳಗೆ ಏರುವಷ್ಟರಲ್ಲಿ ಮುಂದೆ ಟಿಕೆಟ್ ಕೊಡುತ್ತಿದ್ದ ಕಂಡಕ್ಟರ್ "ಆಯಿತೋ? ಎಷ್ಟು ಹೊತ್ತು?" ಎಂದು ಅವಸರ ಪಡಿಸಿದ. ಸ್ವಲ್ಪ ಶ್ರಮಪಟ್ಟ ನಂತರ ಬಸ್ಸನ್ನು ಹತ್ತಿ. ಎದುರುಗಡೆಯಿದ್ದ ಇಬ್ಬರು ಕುಳಿತುಕೊಳ್ಳುವ ಎರಡು ಸೀಟಿನ ಕಡೆ ಮಗನನ್ನು ಕುಳ್ಳಿರಿಸಿ ತಾನೂ ಕುಳಿತಳು.

ಬಸ್ ಹೋಗುತ್ತಿದ್ದಾಗ ಅವನ ತಾಯಿ ಸೀರೆಯ ಸೆರಗಿನಲ್ಲಿದ್ದ ಚಿಲ್ಲರೆಯನ್ನು ತೆಗೆಯುವಾಗ, ಅವನು ಅಕಸ್ಮಾತ್ ತಿರುಗಿ ನೋಡಿದ. ಅವರ ಸೀಟಿನ ಮೇಲೆ ಬರೆದಿದ್ದ 'ಹೆಂಗಸರು ಮಾತ್ರ' ಎಂಬ ಲೇಖ ಅವನ ಕಣ್ಣಿಗೆ ಬಿತ್ತು. ಆಗ ಒಂದು ನಿಲ್ದಾಣದಲ್ಲಿ ಬಸ್ಸು ನಿಂತಿತು.

ಹರೆಯದ ಸುಂದರ ಹೆಣ್ಣು ಬಸ್ ಹತ್ತಿದಳು. ಅವಳನ್ನು ಕಂಡು ಕಂಡಕ್ಟರ್ ಹತ್ತಿರ ಬಂದ. ಹೆಳವ ಒಂದು ಕ್ಷಣ ಅವಳನ್ನು ನೋಡಿದ. ಅವಳ ಪಕ್ಕದಲ್ಲಿ ತಾನು ಕುಳಿತಿರುವುದನ್ನು ನೆನೆಸಿಕೊಂಡಾಗ ಅವನ ಗಂಡಸುತನ ಅವನ ಮನಸ್ಸಿನಲ್ಲೇ ಒದೆಯುತ್ತಿತ್ತು. ಅದೇ ವೇಳೆಯಲ್ಲಿ ಕಂಡಕ್ಟರನ ಕಂಠ ಕೇಳಿಸಿತು : "ಅಯ್ಯಾ ಗಂಡಸೇ ಹೆಂಗಸರು ನಿಂತಿದ್ದಾರಲ್ಲ ಕಾಣುವುದಿಲ್ಲವೆ ? "

ಹೆಳವ ಥಟ್ಟನೆ ಕಾಲುಗಳಿಗೆ ಬಲಬಂದಂತೆ ಎದ್ದು ನಿಂತ. ಅವನು ಎದ್ದ ವೇಗಕ್ಕೆ ಆ ಹೆಣ್ಣು ಆ ಸ್ಥಳದಲ್ಲಿ ಕುಳಿತೇಬಿಟ್ಟಳು ಎದ್ದು ನಿಂತ ಹೆಳವನ ಕಾಲುಗಳು ನಡುಗಿದುವು...

"ಅಪ್ಪಾ..." ಎಂದು ತಾಯಿ ಪರಿತಾಪ ಕಂಠದಿಂದ ಅಂದುದು ಕಂಡಕ್ಟರ್, ಆ ಹೆಣ್ಣು, ಬಸ್ಸಿನಲ್ಲಿದ್ದ ಅನೇಕರ ಗಮನವನ್ನು ಸೆಳೆಯಿತು. ಇನ್ನೊಬ್ಬರು ಹೇಳಿ ತನ್ನ ಕಿವಿಯಲ್ಲಿ ಕೇಳಲಾಗದ ಆ ಮಾತನ್ನು ಅವಳೇ ಹೇಳಬೇಕಾದ ಪ್ರಸಂಗ... "ಅಪ್ಪಾ... ಅವನು ಹೆಳವನಪ್ಪ ನಿಂತುಕೊಳ್ಳಲಾರ..." ಎಂದು ಹೇಳಿ ಕಣ್ಣುಗಳಲ್ಲಿ ಸುರಿಯುತ್ತಿದ್ದ ದುಃಖಾಶ್ರು ವಿನೊಂದಿಗೇ ಅವಳು ಮೇಲೆದ್ದಳು. "ಮಗು, ಬಾ ನೀನಿಲ್ಲಿ ಕುಳಿತುಕೋ" ಎಂದು ಹೇಳಿ ದಳು. ಮಗ ತಡವರಿಸಿ ಬೀಳುವುದರಲ್ಲಿದ್ದವನು ತಾಯಿಯ ತೋಳನ್ನು ಹಿಡಿದುಕೊಂಡು ಹೇಳಿದ : "ಇಲ್ಲಮ್ಮಾ, ನಾನು ನಿಂತುಕೊಳ್ಳುತ್ತೇನೆ."

"ನಿನ್ನಿಂದ ಆಗುವುದಿಲ್ಲಪ್ಪ" – ಎಂದು ಆ ಹೆಣ್ಣಿನ ಪಕ್ಕದಲ್ಲಿ ಮಗನನ್ನು ಕುಳ್ಳಿರಿಸಿ ಆ ತಾಯಿ ನಿಂತಳು. ಆಗ ಆ ಹೆಣ್ಣು ಮೇಲಕ್ಕೆದ್ದು ಅವನ ತಾಯಿಯ ಬಳಿ ಕ್ಷಮಾಪಣೆ ಕೇಳುವಂತೆ, "ನೀವು ಕುಳಿತುಕೊಳ್ಳೀಮ್ಮ" ಎಂದು ಒತ್ತಾಯಮಾಡಿ ಕೇಳಿಕೊಂಡಳು. ಕಂಡಕ್ಟರನ ಮುಖ ಅಳುವ ಪರಿಸ್ಥಿತಿಗೆ ಬದಲಾಯಿಸಿತು. "ಸಾರ್, ಕ್ಷಮಿಸಿ, ನನಗೆ ಮೊದಲೇ ಗೊತ್ತಾಗಲಿಲ್ಲ ಸಾರ್..." ಎಂದು ಹೆಳವನನ್ನು ಕುರಿತು ವಿನಯವಾಗಿ ಹೇಳಿದ. ಹೆಳವ ಯಾರಿಗೂ ಯಾವ ಉತ್ತರವನ್ನೂ ಕೊಡದೆ, ಯಾವ ಮುಖವನ್ನೂ ನೋಡದೆ, ಪಕ್ಕದಲ್ಲಿ ಕುಳಿತ ತಾಯಿಯ ಹಿಂದೆ ಮಗುವಿನಂತೆ ಮುಖ ಮುಚ್ಚಿಕೊಂಡು ಅಳುವನ್ನು ಅಡಗಿಸಿಕೊಂಡು ಹಣೆಯನ್ನು ಅವಳ ತೋಳಿಗೆ ಉಜ್ಜಿದ.

ಬಸ್ ಚಲಿಸುತ್ತಿತ್ತು. ಬಸ್ಸಿನಲ್ಲಿದ್ದ ಎಲ್ಲರ ಅನುತಾಪ ಭಾರವಾಗಿ ಅವನ ಪ್ರಾಣವನ್ನೇ ಕರಗಿಸುವಂತೆ...

—ಹೆಳವ ಹೇಳಿದುದನ್ನೆಲ್ಲಾ ಮೌನವಾಗಿ ಕೇಳಿತ್ತಿದ್ದ ರೋಗಿಷ್ಠ. ತನ್ನ ಬಗ್ಗೆ ಆಲೋಚಿಸತೊಡಗಿದ :

'ಇವನಿಗೆ ಇನ್ನೂ ವಯಸ್ಸಿದೆ, ಬಾಳು ಇದೆ... ಇವನಿಗೆ ಕಷ್ಟ ಬಂದರೆ ವ್ಯಥೆಪಡಲು ಸಹಾಯ ಮಾಡಲು ಬಂಧುಗಳಿದ್ದಾರೆ. ಇವನು ಬಾಳಬೇಕೆಂದು ಆಸೆಪಡಲು ಪ್ರೀತಿ ಪಾತ್ರಳಾದ ತಾಯಿಯಿದ್ದಾಳೆ... ಇವನು ಹೆಳವನೆಂದು ತಿಳಿದು ಪ್ರೀತಿ ತೋರಿಸಲು, ಅನುತಾಪಪಡಲು ಜಗತ್ತೇ ಇದೆ... ಇವನೇಕೆ ಸಾಯಬೇಕು? ' ಎಂದು ಪ್ರಾರಂಭಿಸಿದ ಮನಸ್ಸು ತನ್ನ ಬಗ್ಗೆ ಆಲೋಚಿಸಿದಾಗ......

'ನನಗೆ ಯಾರಿದ್ದಾರೆ. ನನಗೆ ಕಷ್ಟ ಬಂದರೆ, ವ್ಯಥೆಪಡಲು, ಸಹಾಯಮಾಡಲು ಬಂಧುಗಳಿದ್ದಾರೆಯೆ? ಬಂಧುಗಳನ್ನೆಲ್ಲಾ ಒದರಿ ತಳ್ಳಿ ಎಷ್ಟೋ ಕಾಲವಾಯಿತಲ್ಲ? ನಾನು ಬಾಳಬೇಕೆಂದು ಆಸೆಪಡುವ ಜೀವ ನನ್ನನ್ನು ಬಿಟ್ಟು ಬೇರೊಂದಿದೆಯೇನು? ನನಗೆ, ಪ್ರೀತಿತೋರಿಸಲು, ಅನುತಾಪಪಡಲು, ಆದರಿಸಲು ಯಾರಿದ್ದಾರೆ? ಜಗತ್ತೇ ಜಿಗುಪ್ಸೆಯಿಂದ ಮುಖವನ್ನು ಕಿವಿಚಿಕೊಂಡು ನನ್ನನ್ನು ನೋಡುತ್ತದೆ' ಎಂದೆಲ್ಲಾ ಭಾವಿಸಿ ಮೌನವಾಗಿ ಕುಳಿತಿದ್ದ ರೋಗಿಷ್ಠ.

ಹೆಳವನ ಕಣ್ಣುಗಳಿಗೆ ನಿದ್ರೆಹತ್ತಿತು. ಅವನು ಆಕಳಿಸಿದ. ರೋಗಿಷ್ಠ ಹೆಳವನನ್ನು ನೋಡಿದ: "ಇದೋ, ನೋಡಪ್ಪ, ನೀನು ಸಾಯಬಾರದು... ನಾನು ಹೇಳಿದ್ದಾಯಿತು. ನಿನಗೆ ಕಾಲುಗಳು ಇಲ್ಲವೆಂದು ತಾನೆ ನೀನು ವ್ಯಥೆಪಡುತ್ತೀಯೆ, ಬೇರೆಯವರಿಗೂ ಕಷ್ಟ ಕೊಡುವೆ...?"

"ನಾನೇ ಹೇಳುತ್ತೇನಲ್ಲ, ನನಗೆ ಕಾಲುಗಳಿಲ್ಲದೆ ಬೇರೆಯವರಿಗೆ ಭಾರವಾಗಿದ್ದೇನೆ. ನನ್ನ ತಾಯಿ ವೈದ್ಯರಿಗೆ ಕೊಡಲೆಂದು ತಮ್ಮನನ್ನು ಹಣ ಕೇಳಿದಾಗ ಅವರಿಬ್ಬರ ಮಧ್ಯೆ ನನ್ನಿಂದ ಎಷ್ಟು ಜಗಳ! ಎಷ್ಟು ವ್ಯಥೆ!" ಎಂದು ಹೆಳವ ಹೇಳುತ್ತಿರಲು ಮಧ್ಯೆ ರೋಗಿಷ್ಠ, "ಹೌದಪ್ಪಾ, ನೀನು ಸದಾಕಾಲ ನಿನ್ನ ತಾಯಿಯ ತೋಳನ್ನು ಹಿಡಿದು ನೇತಾಡಿಕೊಂಡಿದ್ದರೆ ಹಾಗೆಯೇ ಜಗಳ. ಕಾಲಿಲ್ಲದಿದ್ದರೆ ಏನು? ಕೈಗಳಿಂದ ಈ ಜಗತ್ತನ್ನು ಬಾಗಿಸಬಹುದಲ್ಲ. ಬಾಳುವುದಕ್ಕೆ ಕೈಕಾಲು ಬೇಕಾಗಿಲ್ಲ, ಒಳ್ಳೆಯ ಮನಸ್ಸಿರಬೇಕು. ತಿಳುವಳಿಕೆಯಿರಬೇಕು. ಮನುಷ್ಯನ ಅರಿವು ಆನೆಗಿಂತ ಸಿಂಹಕ್ಕಿಂತ ಬಲವಾದುದು. ಇರಬಾರದೆಂದು ಎಲ್ಲರೂ ಸತ್ತುಹೋದರೆ ಮನುಷ್ಯಜಾತಿಯೇ ಇಲ್ಲವಾಗುತ್ತಿತ್ತು. ಕಾಲುಗಳು ಇಲ್ಲದಿದ್ದರೆ ಅವು ಇಲ್ಲದ ಕೊರತೆಯನ್ನು ಮರೆತು ಉಳಿಯುವುದು ಹೇಗೆಂದು ಆಲೋಚಿಸಿದರೆ ಕಾಲುಗಳು ಇರುವವರಿಗಿಂತ ವೇಗವಾಗಿ ಓಡಲಾರೆಯೇನು?

"ಮನುಷ್ಯನಿಗೆ ರೆಕ್ಕೆಗಳಿದ್ದಿದ್ದರೆ ಅವನೂ ಹಾರಿಕೊಂಡಿರುತ್ತಿದ್ದ. ರೆಕ್ಕೆಗಳಿಲ್ಲದುದರಿಂದಲೇ 'ಈಗ ಭರ್‍ರನೆ ವಿಮಾನದಲ್ಲಿ ಹಾರಾಡುತ್ತಾನೆ. ಇನ್ನೂ ಆಕಾಶದಲ್ಲಿ ಎಲ್ಲೆಲ್ಲೋ ಹೋಗಿ ಏನೇನೋ ಕಂಡುಹಿಡಿಯುತ್ತಿದ್ದಾನೆ. ಸುಮ್ಮನೆ ಸಾಯುವುದೆ? ನಿಮ್ಮ ತಾಯಿಯಲ್ಲಿ, 'ನನ್ನ ಮಗನಿಗೆ ಕಾಲು ಇಲ್ಲದಿದ್ದರೆ ಏನು, ಅವನು ಏನೇನು ಮಾಡುತ್ತಿದ್ದಾನೆ ಎಂಬ ಭಾವನೆಯುಂಟುಮಾಡಿದರೆ ಅವರೇಕೆ ನಿನ್ನ ತಮ್ಮನ ಬಳಿಗೆ ಹೋಗಿ ಜಗಳಕ್ಕೆ ನಿಲ್ಲುತ್ತಾರೆ? ನೀನೇನು ನನ್ನ ಹಾಗೆ ವಾಸಿಯೇ ಆಗದ ರೋಗದವನೇನು? ನಾನೇ ಜೀವಿಸಿರಬೇಕಾದರೆ ನೀನು ಸಾಯುವೆ ಎನ್ನುತ್ತೀಯಲ್ಲ...?" ಎಂದು ಹೇಳುವಾಗ ರೋಗಿಷ್ಠನ ಕಂಠ ಕಟ್ಟಿತು. ಅವನ ಮಾತಿನಿಂದ ಹೃತ್ಪೂರ್ವಕವಾಗಿ 'ಬಾಳಬೇಕೆಂಬ ಆಸೆ, ಬಾಳಬಹುದು' ಎಂಬ ನಂಬಿಕೆ ಹೆಳವನಿಗೆ ನಾಟಿತು. ಹೆಳವ ಹೊಸದಾದ ನಂಬಿಕೆಯಿಂದ ತಲೆಯೆತ್ತಿ ರೋಗಿಷ್ಠನನ್ನು ನೋಡಿದ. ರೋಗಿಷ್ಠ ಮುಂದುವರಿಸಿದ:

"ನೀನೇನೋ ಹೇಳುತ್ತಿಯೆ... ಬಸ್ಸಿನಲ್ಲಿ ನಿನ್ನನ್ನು ಮೇಲಕ್ಕೇಳಲು ಹೇಳಿದರು. ಆ ಮೇಲೆ ಕುಳಿತುಕೋ ಎಂದರೆಂದು... ಅದರಿಂದ ನಿನ್ನ ಮನಸ್ಸಿಗೆ ವ್ಯಥೆಯಾಯಿತು; ನ್ಯಾಯವೇ. ಇದೊ. ನನ್ನನ್ನು ನೋಡು. ನನ್ನನ್ನು ಆ ಬಸ್ಸಿನಲ್ಲಿ ಏರುವುದಕ್ಕಾದರೂ ಬಿಡುತ್ತಾರೇನು? ನೀನು ಹಗಲಿನಲ್ಲಿ ನನ್ನನ್ನು ನೋಡಿದರೆ ಹೀಗೆ ಪಕ್ಕದಲ್ಲಿ ಕುಳಿತು ಮಾತಾಡುತ್ತಿರಲಿಲ್ಲ; ಇದೊ... ಬೆಳಕಿನಲ್ಲಿ ಈ ಕೈ ನೋಡು" – ಎಂದು ಮೊಟಕಾದ ಕೈಗಳಿಂದ ಮೇಲಿದ್ದ ಕೋಟನ್ನು ಸರಿಸಿ ಬೆಳದಿಂಗಳಲ್ಲಿ ನೀಡಿ ಗದ್ಗದಿಸಿದ : "ಈ ಕೈ ಸ್ವಲ್ಪ ದಿನಗಳ ಹಿಂದೆ ಪೂರ್ತಿಯಾಗಿತ್ತು. ನಿನಗೆ ಕಾಲಿಲ್ಲ ಅಷ್ಟೇ. ನನಗಿರುವುದೆಲ್ಲಾ ಸ್ವಲ್ಪ ಸ್ವಲ್ಪವಾಗಿ ಸವೆದೇ ಹೋಗುತ್ತಿದೆ... ಈ ಕೈಯಿಂದ ಮೊನ್ನೆಯ ದಿನ ಒಂದು ಮಗುವನ್ನು ಎತ್ತಿಕೊಂಡೆ... ಮಗುವನ್ನು ಎತ್ತಿಕೊಳ್ಳಬೇಕೆಂಬ ಆಸೆಯಿಂದ ಎತ್ತಿಕೊಂಡೆನೇನು? ಛಿ ಆ ಆಶೆ ನನಗೆ ಉಂಟಾಗಬಹುದೆ ? ರೈಲು ಕಂಬಿಗಳ ಮೇಲೆ ಬಂದು ನಿಂತಿತಲ್ಲಾ. ರೈಲು ಬರುವ ವೇಳೆಯಾಯಿತೆಂದು ಕಾತರದಿಂದ ಎತ್ತಿಕೊಂಡೆ. ನಾನು ರೋಗಿಷ್ಠ ನನ್ನ ದೇಹದಲ್ಲಿ ಸ್ಪರ್ಶಜ್ಞಾನವೇ ಇಲ್ಲವಾಯಿತು. ಆದರೂ ಒಂದು ಮಗುವನ್ನು ಎತ್ತಿ ಕೊಳ್ಳುತ್ತಿರುವೆನೆಂಬ ಆಲೋಚನೆಯಿಂದ ನನ್ನ ಮನಸ್ಸು ಕದಡಿತು. ಆದರೆ, ಆದರೆ... ಅದಕ್ಕಾಗಿ ಆ ಮಗುವನ್ನು ಹೆತ್ತವರು ನನ್ನನ್ನು ಹೊಡೆಯುವುದಕ್ಕೆ ಬಂದರು. ಗೊತ್ತೇನು? ಮನುಷ್ಯನಾಗಿ ಹುಟ್ಟಿ ಯಾವ ಸುಖವನ್ನೂ, ಯಾವ ಹಕ್ಕನ್ನೂ ಅನುಭವಿಸ ಲಾರದೆ ನಾನು ಬಾಳುತ್ತಿದ್ದೇನಲ್ಲ... ಒಂದು ಪಿಶಾಚಿಯಂತೆ ಒಬ್ಬನೇ ಕುಳಿತು ಬಾಳು ತ್ತಿದ್ದೇನೆಂದು ನೆನೆಸಿಕೊಂಡು ನನ್ನನ್ನೇ ವಂಚಿಸಿಕೊಳ್ಳುತ್ತಿದ್ದೇನಲ್ಲ" ಎಂದಾಗ ಕ್ರಮೇಣ ಬಿಕ್ಕಿಬಿಕ್ಕಿ ರೋದಿಸಿದ.

ಸ್ವಲ್ಪ ಹೊತ್ತಿನ ನಂತರ ಕಣ್ಣೀರು ಒರೆಸಿಕೊಂಡು ಶುಷ್ಕವಾಗಿ ನಕ್ಕು ಹೇಳಿದ :

"ಹೌದು, ಹೆತ್ತವರಿಗೆ ಗೊತ್ತು ಮಗನ ಮೇಲಿನ ಪ್ರೀತಿ... ಸಾವಿಗಿಂತಲೂ ಕ್ರೂರ ವಾದುದಲ್ಲವಲ್ಲ ಈ ರೋಗ ? ಆಮೇಲೆ ವಿಷಯ ತಿಳಿಸಿದನಂತರ ಒಂದು ತರಹೆ ಸಮಾಧಾನಗೊಂಡರು... ಆಗಲೂ, 'ಒಂದು ಕಂಠ, ನಮ್ಮನ್ನು ಕರೆಯಬೇಕಿತ್ತು... ನೀನು ಯಾಕೆ ಎತ್ತಿಕೊಳ್ಳಬೇಕಿತ್ತು? " ಎಂದು ಕೇಳಿತು – ಆ ಮಗುವಿನ ತಾಯಿ 'ನೀವು ಹೇಳುವುದು ನ್ಯಾಯವೇ. ತಿಳಿಯದೆ ಈ ಕೆಲಸ ಮಾಡಿಬಿಟ್ಟೆ' ಎಂದು ಕ್ಷಮಾಪಣೆ ಕೇಳಿ ಬಂದೆ. ಯಾಕೆಂದರೆ ಇದು ದುಷ್ಟವ್ಯಾಧಿ. ಮನುಷ್ಯನಿಗೆ ಬರಬಾರದು : ಪ್ರಾರಂಭದಲ್ಲಿಯೇ ಗೊತ್ತಾದರೆ ಚಿಕಿತ್ಸೆ ಮಾಡಬಹುದು. ಇದು ಬಹಳ ಆಳವಾಗಿ ಬೇರೂರಿದ ರೋಗ. ಇನ್ನು ವಾಸಿಯಾಗುವುದಿಲ್ಲ. ಹರಡಿಕೊಂಡೇ ಹೋಗುತ್ತೆ. ಬೇರೆಯವರು ಜಾಗರೂಕತೆ ಯಿಂದ ಇರಬೇಕು. ತಾಯಿಗೆ ತನ್ನ ಮಗು ಸತ್ತರೂ ಪರವಾಗಿಲ್ಲ. ಈ ಖಾಯಿಲೆ ಬಂದರೆ ಸಹಿಸಲಾರಳು ಎಂದು ಅವನು ತನ್ನ ಸ್ಥಿತಿಯನ್ನು ಅರಿತುಕೊಂಡು ತನಗೆ ತಾನೇ ಹೇಳಿಕೊಂಡ.

ಕೆಲವು ನಿಮಿಷ ಮೌನವಾಗಿದ್ದ ನಂತರ ಹೆಳವ ಎರಡನೆಯ ಬಾರಿಗೆ ಆಲಿಸಿದ.

"ನಿದ್ದೆ ಬರುತ್ತಿದೆಯೆ ? ಅಪ್ಪಾ, ಮಲಗು, ನಿದ್ರೆ ಮಾಡುವುದು ಬಹಳ ಸುಖ. ಸತ್ತರೆ ನಿದ್ರೆ ಮಾಡುವುದಕ್ಕಾಗುವುದಿಲ್ಲ; ಕೇಳು, ಬೆಳಕು ಹರಿದಾಗ ಹೆತ್ತ ತಾಯಿಗೆ ಮಗನಾಗಿ ಹೋಗಿ ಸೇರು ನಿನಗೆ ಅಂತಿಮವಾಗಿ ಹೇಳುವುದಿಷ್ಟೇ, ಕಾಲುಗಳಿಲ್ಲ ಎಂದು ನೀನು ಯಾರಿಗೂ ಭಾರವಾಗಿರಬೇಡ. ಈಗ ಯಾರ ಜೊತೆಯೂ ಇಲ್ಲದೆ ಸಾಯಲೆಂದು ಹೇಗೆ ಬಂದೆಯೋ ಹಾಗೆ ಜೀವಿಸು. ಅದರಲ್ಲಿ ನಾಚಿಕೆಪಡಬೇಕಾದುದಿಲ್ಲ. ನಿನ್ನನ್ನು ನೋಡಿ ನಿನ್ನ ತಾಯಿ ಆನಂದಪಡುತ್ತಾಳೆ. ನೋಡು..." ಎಂದು, ಇದ್ದ ಕಡೆಯ ಬೀಡಿಯನ್ನು ರೋಗಿಷ್ಠ ಹಚ್ಚಿದ. ಮಲಗಿದ ಸ್ವಲ್ಪ ಹೊತ್ತಿಗೆಲ್ಲಾ ಹೆಳವ ನಿದ್ರೆ ಮಾಡಿಬಿಟ್ಟ. ರೋಗಿಷ್ಠ ನಿದ್ರೆಯಿಲ್ಲದೆ, ಕೆಳಗೆ ಬಿದ್ದಿದ್ದ ತುಂಡು ಬೀಡಿಗಳನ್ನು ಆರಿಸಿ ಹಚ್ಚಿ ಕಂಭಕ್ಕೆ ಒರಗಿ ಆಕಾಶ ವನ್ನು ನೋಡುತ್ತಾ ಕುಳಿತಿದ್ದ.

"ಅದೋ, ಸಪ್ತಋಷಿ ಮಂಡಲ ಬಹಳ ದೂರ ಸರಿದು ಬಂದಿದೆಯಲ್ಲಾ... ನಾಲ್ಕು ನಕ್ಷತ್ರಗಳ ಚೌಕಟ್ಟಿನ ಬದಿಯಲ್ಲಿ, ಬಾಲದಂತಿರುವ ಮೂರಕ್ಕೆ ಮಧ್ಯೆ... ಹೌದು ಹೌದು, ಅರುಂಧತಿ... ಅರುಂಧತಿಯನ್ನು ನೋಡಿದವನಿಗೆ ಆರು ತಿಂಗಳು ಸಾವು ಇಲ್ಲ. ಹೊಡೆ ಜೋಡಿನಲ್ಲಿ ಈ ದೇಹಕ್ಕೆ ಇನ್ನೂ ಆಯುಸ್ಸು ಬೇರೆ ಕೇಡು" ಎಂದು ವಿರಕ್ತಿ, ವೇದನೆ ಉಕ್ಕಿ ಗೊಣಗೊಣಗಿದ ರೋಗಿಷ್ಠ ಕೈಯಲ್ಲಿದ್ದ ಬೀಡಿಯನ್ನು ನೆಲಕ್ಕೆ ಹಾಕಿ ಉಜ್ಜಿದ. ಅವನ ನೋಟ ಸಪ್ತಋಷಿ ಮಂಡಲದ ಮೇಲೆ ಹೋಯಿತು.

ಉದಯಕಾಲ ಆರು ಗಂಟೆಗೇ ಉತ್ತರದಿಕ್ಕಿಗೆ ಹೋಗುವ ಪಾರ್ಸಲ್ ರೈಲು ಗಾಡಿಯ ಜೋರಾದ ವಿಜಿಲ್ ಛತ್ರದಲ್ಲಿ ಮಲಗಿದ್ದ ಹೆಳವನನ್ನು ಎಚ್ಚರಗೊಳಿಸಿತು.

ಅವನಿಗೆ ಸಮೀಪ ರೋಗಿಷ್ಠನ ಕೊಳಕಾದ ಹರಿದ ಬಟ್ಟೆ, ಹೊಳೆಯುವ ತಗಡಿನ ತಟ್ಟೆಯೂ ಪ್ರತ್ಯೇಕವಾಗಿ ಬಿದ್ದಿದ್ದವು. ಅಲ್ಲಿ ನೊಣ ಮುತ್ತಿದ್ದುವು.

ದೂರದಲ್ಲಿ ಉದ್ದಕ್ಕೆ ಹೋಗುವ ರೈಲು ಕಂಬಿ ತಿರುಗುವ ಎಲ್ಲೆಯಲ್ಲಿ ಹೊಟೆ ಬಿಟ್ಟು ಆಳುವಂತೆ ಪಾರ್ಸೆಲ್ ಗಾಡಿ ನಿಂತಿತ್ತು. ಅಲ್ಲಿ ಜನರು ಮುತ್ತಿಕೊಂಡಿದ್ದರು.

"ಇಲ್ಲಿಯೇ ಸುತ್ತಾಡಿಕೊಂಡಿದ್ದನಲ್ಲಾ – ಆ ಕುಷ್ಠರೋಗದವನು, ರೈಲಿನ ಮುಂದೆ ಹೋಗಿ ಬಿದ್ದ..."

'ಅವನು ನನಗೆ ಬಾಳು ಕಲಿಸಿಕೊಟ್ಟು, ನಾನು ಅವನಿಗೆ ಸಾಯಲು ಕಲಿಸಿದೆ. ಅವನು ನನ್ನನ್ನು ಭೇಟಿಮಾಡಿರದಿದ್ದರೆ ?' – ಹೆಳವನ ಕಣ್ಣುಗಳಲ್ಲಿ ನೀರು ಬಂದಿತು.

'ಆ ಜಾಗದ ರಾಶಿಯೋ? – ತನ್ನನ್ನೇ ಬಲಿಕೊಟ್ಟು ಮತ್ತೊಂದು ವಿಪತ್ತು ಸಂಭವಿಸ ದಂತೆ ತಡೆಯುವ ಪ್ರಯತ್ನವೋ ? ಅವನ ದೇಹದಲ್ಲಿದ್ದ ಭಯಂಕರ ಕುಷ್ಠವ್ಯಾಧಿ...? ಇಲ್ಲ ನನ್ನ ಮನಸ್ಸಿನಲ್ಲಿ ತೋರಿದ – ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಭಾವನೆ – 'ಆ ಬಾಳಿನ ಜಿಗುಪ್ಸೆ'ಯೇ ಭಯಂಕರ ವ್ಯಾಧಿ... ಅದಕ್ಕೆ ಅವನು ಬಲಿಯಾದ.

ಥಟ್ಟನೆ ರೈಲ್ವೆ ಕಂಬಿಗಳಿಂದಾಚೆ ಸಾಲಾಗಿ ಕಾಣುತ್ತಿದ್ದ ಮನೆಗಳ ಹಿತ್ತಲು ಬಾಗಿಲುಗಳನ್ನು ತೆರೆದು ದಿಗ್ಭ್ರಮೆಗೊಂಡು ನೋಡುತ್ತಿದ್ದ ಜನರ ಮಧ್ಯೆ "ಅಯ್ಯೊ ಮಗೂ" ಎಂದು ಕಿರಿಚಿಕೊಂಡುದು ಬಹುದೂರದಲ್ಲಿದ್ದ ಹೆಳವನ ಕರುಳನ್ನು ಕಿವಿಚಿತು.

"ಅಮ್ಮಾ. ನಾನಿದ್ದೇನೆ... ಅಮ್ಮಾ" ಎಂದು ಕೂಗಿಕೊಂಡು ತೆವಳಿಕೊಂಡು ಓಡಿದ ಅವಳ ಮಗ.

"ಮಗ... ಮಗು..." ಎಂದು ರೈಲ್ವೆ ಕಂಬಿಗಳ ದಿಬ್ಬದ ಮೇಲೆ ಬಿದ್ದು ಹೊರಳುತ್ತಿದ್ದ ಅವನ ತಾಯಿ 'ನಾನು ಇದ್ದೇನೆ' ಎಂಬ ಮಾತು ಕೇಳಿ ಅವನನ್ನು ನೋಡಿ ಏನೂ ಅರ್ಥವಾಗದೆ ಕೆಳಹೊಟ್ಟೆಯನ್ನು ಹಿಡಿದುಕೊಂಡು ಕಣ್ಣೀರಿನೊಡನೆ ನಕ್ಕಳು. ನಂತರ. "ಯಾರು ಹೆತ್ತ ಮಗನೋ" ಎಂದು ರೈಲು ಚಕ್ರವನ್ನು ನೋಡಿ ಅತ್ತಳು.

ಅವಳ ಬಳಿಗೆ ಬಂದ ಮಗ ಅವಳ ತೋಳಿನಲ್ಲಿ ಮುಖ ಮುಚ್ಚಿ ಹಣೆಯನ್ನು ಉಜ್ಜಿ ಅಳುತ್ತಲೇ ಹೇಳಿದ: "ಅಮ್ಮಾ ನಾನು ಇದ್ದೇನಮ್ಮಾ ... ಅವನು ನಿನ್ನ ಮಗನಲ್ಲ... ಅವನು... ಆ ಮನುಷ್ಯ... ಅವನು ಸಾಯಬಾರದಾಗಿತ್ತಮ್ಮಾ... ಅಯ್ಯೋ..." ಎಂದು ಗಟ್ಟಿಯಾಗಿ ಅತ್ತ ಹೆಳವ.

# 7. ನನ್ನನ್ನು ನಾನೇ ಕಂಡೆ

ಆ ವಾರ ಪತ್ರಿಕೆಯಲ್ಲಿ ತನಗೆ ಸಬ್ ಎಡಿಟರ್ ಕೆಲಸವೆಂದು ಗೌರವವಾಗಿ ಹೇಳಿಕೊಂಡು — ಒಂದೊಂದು ದಿನವೂ ಬಂದು ಸೇರುವ ಕತೆಗಳಿಗೆಲ್ಲಾ ಕಳುಹಿಸಿದವರ ವಿಳಾಸಗಳನ್ನು ಗುರುತಿಸುತ್ತಿದ್ದ. ಪ್ರಕಟವಾಗದೆ ಪ್ರತ್ಯೇಕಿಸಲ್ಪಟ್ಟ ಕತೆಗಳನ್ನು 'ರಿಗ್ರೇಟ್' ಸ್ಟಾಂಪು ಒತ್ತಿ ಹಿಂತಿರುಗಿ ಕಳುಹಿಸಬೇಕಾಗಿತ್ತು. ಈರೀತಿ ವಿಳಾಸಗಳನ್ನು ಬರೆಯುವುದೇ ಕೆಲಸವಾಗಿದ್ದ ಶಿವರಾಮನ್‌ಗೆ, ಇಂದು ಅವನ ಹೆಸರಿಗೇ ಒಂದು ಕಾಗದ ಬಂದಿತ್ತು. ಆ ನೀಳವಾದ ಕವರಿನ ಮೇಲೆ ' ಶಿವರಾಮನ್, ಸಹಾಯಕ ಸಂಪಾದಕ ' ಎಂದು ಬರೆದಿದ್ದುದನ್ನು ಕಂಡು ಅವನಿಗೆ ಸ್ವಲ್ಪ ಹೆಮ್ಮೆಯೆನಿಸಿತು.

ಆ ಉದ್ದವಾದ ಕವರನ್ನು ಎರಡು ಬೆರಳುಗಳಿಂದ ಹಿಡಿದು ಲಂಬಕ್ರಮವಾಗಿ ಹರಿದ ಅದರಲ್ಲಿ ಒಂದು ಕಟ್ಟು ಪೇಪರು, ಅದರ ನಡುವೆ 'ಇದು ಕಾಗದ ' ಎಂದು ಹೇಳುವಂತೆ ಪ್ರತ್ಯೇಕವಾಗಿದ್ದ ಒಂದು ಕಾಗದವನ್ನು ತೆಗೆದು ಓದಿದ.

' ಚಿರಂಜೀವಿ ಶಿವರಾಮನಿಗೆ ಅನಂತಾನಂತ ಆಶೀರ್ವಾದಗಳು. ಭಗವಂತನ ಕೃಪೆಯಿಂದ ನಿನಗೆ ಸಕಲ ಸೌಭಾಗ್ಯಗಳೂ ಪ್ರಾಪ್ತವಾಗಲಿ.

' ನಿಮ್ಮನ್ನೆಲ್ಲಾ ನೋಡಿ ಮುಖಾಮುಖಿಯಾಗಿ ಹೇಳದೆ ಬಂದುದನ್ನು ನೆನೆಸಿಕೊಂಡರೆ ಬೇಸರವಾಗುತ್ತದೆ. ಇರಲಿ. ಯೋಚಿಸಿನೋಡಿದರೆ, ಆಸೆ, ಸಂಬಂಧ ಮನಸ್ಸಿನಲ್ಲಿ ಆಳವಾಗಿದ್ದರೆ, ತುಟಿಗಳಿಂದ ಹೇಳುವ ಮಾತೆಲ್ಲಾ ಅನಾವಶ್ಯಕವೆಂದು ತೋರುತ್ತದೆ. ಆದರೂ ಹಾಗೆಲ್ಲಾ ಆಲೋಚಿಸಿ ತೀರ್ಮಾನ ಮಾಡಿಕೊಂಡು ನಾನು ಹೊರಡಲಿಲ್ಲ. ಹೇಳಿ ಬರಲು ನನಗೆ ಧೈರ್ಯ ಬರಲಿಲ್ಲ... ಹೇಳಲಾಗಲಿಲ್ಲ... ಅಷ್ಟೆ ಬಂದು ಬಿಟ್ಟೆ. ಹೌದು ಯಾವುದನ್ನೇ ಆಗಲಿ ಹೇಳುವುದಕ್ಕೆ ಧೈರ್ಯ ಬೇಕು. ನನ್ನ ಅನುಭವದಲ್ಲಿ ಮಾಡುವುದು ಸುಲಭ. ಹೇಳುವುದು ಕಷ್ಟ... ಅದೇ ಕಷ್ಟ. ಚೆನ್ನಾಗಿ ಆಲೋಚಿಸು. ನೀನು ಆಲೋಚಿಸುವವನು; ಕತೆ ಬರೆಯುವವನು... ಒಳ್ಳೆಯದು ಕೆಟ್ಟದ್ದು ಎಷ್ಟೋ ಕೆಲಸ ಮಾಡಿಬಿಡುತ್ತೇವೆ... ಅದೆಲ್ಲವನ್ನು ಬಿಚ್ಚಿ ಹೇಳುವುದೆಂದರೆ ಸುಲಭವೆ ? ನಾನು ಹೀಗೆ ಓಡಿ ಬಂದುಬಿಡುವುದೆಂದು ತೀರ್ಮಾನಿಸಿ. ನಿಮಗೆಲ್ಲಾ ಹೇಳಿ ಬಂದಿದ್ದರೆ... ಹೇಳಿರುತ್ತಿದ್ದೆ – ಕಡೆಯಲ್ಲಿ ಮನಸ್ಸು ಬಾರದೆ ಅಲ್ಲಿಯೇ ನಿಂತುಬಿಡುತ್ತಿದ್ದೆ. ನನಗೆ ಗೊತ್ತು ನಾನು ಹೋಗುತ್ತೇನೆಂದರೆ – ನೀವು ಯಾರೂ ಅಳುತ್ತಿರಲಿಲ್ಲ... ಆದರೆ ನಾನು ಅಳುತ್ತಿದ್ದೆ. ನಿನ್ನಾಕೆ ನನ್ನ ಕಿವಿಯಲ್ಲಿ ಬೀಳಲೆಂದೇ ನಾನು ಇರುವುದು ತಿಳಿಯದವಳಂತೆ ಹೇಳುತ್ತಿದ್ದಳಲ್ಲಾ ' ಪೆದ್ದು ಬ್ರಾಹ್ಮಣ ' ಎಂದು... ಅದು ನಿಜ ಸರಿ, ಈಗ ನಾನು ಹೊರಟು

ಬಂದು ಬಿಟ್ಟಿದ್ದೇನೆ. ಎಲ್ಲಿ ಇದ್ದೇನೆ, ಏನು ಮಾಡುತ್ತಿದ್ದೇನೆ ? ಎಂದು ಎಲ್ಲಾ ತಿಳಿಯಲು ನಿನ್ನ ಮನಸ್ಸಿನಲ್ಲಿ ಕಾತರವಿದೆಯೆಂಬುದು ನನಗೆ ಅರ್ಥವಾಗುತ್ತೆ. ಈ ಕಾಗದದೊಂದಿಗೆ ಒಂದು ಕಟ್ಟು ಪೇಪರು ಕಳುಹಿಸಿದ್ದೇನಲ್ಲಾ... ಅದನ್ನು ಯಾವಾಗಲಾದರೂ ಬಿಡುವಾದಾಗ – ಕಾಲಹರಣವಾಗಲಿಲ್ಲವೆಂದರೆ – ಓದಿ ನೋಡು. ನನ್ನನ್ನು ನನ್ನ ಮನಸ್ಸಾಕ್ಷಿಯನ್ನು ನೀನು ಅರ್ಥಮಾಡಿಕೊಳ್ಳಬಹುದು. ನೀನು ಅರ್ಥಮಾಡಿಕೊಳ್ಳುವೆಯೆಂದು ಭಾವಿಸಿದ್ದೇನೆ... ನೀನು ಅರ್ಥಮಾಡಿಕೊಂಡರೂ ಇಲ್ಲದಿದ್ದರೂ ನನಗೆ ಚಿಂತೆಯಿಲ್ಲ... ಈ ಒಂದು ತಿಂಗಳ ಕಾಲದಲ್ಲಿ ನಿನಗೊಂದು ಕಾಗದ ಬರೆಯಬೇಕು, ಬರೆಯಬೇಕು ಎನಿಸುತ್ತಿತ್ತು. ಬರೆಯಲಿಲ್ಲವಲ್ಲ ಎಂದು ಆತಂಕವಾಗಿತ್ತು. ಸತ್ಯವಾಗಿ ಹೇಳಿದರೆ ಈ ಕಾಗದದ ಹೊರತು ಉಳಿದ ಕಟ್ಟು ಪೇಪರು ನಿನಗಾಗಿ ನಾನು ಬರೆಯಲಿಲ್ಲ... ನಾನಾಗಿ ನನಗೆ ತೋಚಿದುದನ್ನೆಲ್ಲಾ ಯಾಕೆಂಬ ಕಾರಣವೇ ತಿಳಿಯದೆ ಬರೆಯುತ್ತಲೇ ಇದ್ದೆ. ಇನ್ನೂ ಬರೆಯುತ್ತಿದ್ದೇನೆ... ಇದು ನನ್ನನ್ನು ನಾನೇ ಕಂಡುಕೊಳ್ಳುವ ದೃಷ್ಟಿ. ಸ್ವವಿಮರ್ಶೆ ಇಲ್ಲ, ನನ್ನನ್ನು ನಾನೇ ಕಂಡುದು ಥಟ್ಟನೆ ಏನೋ ತೋಚಿತು ಬರೆದಷ್ಟನ್ನೂ ಆ ನೋಟು ಬುಕ್ಕಿನಿಂದ ಹರಿದು ನಿನಗೆ ಕಳುಹಿಸಿದ್ದೇನೆ. ಏನೋ ತೋಚಿತು ಕಳುಹಿಸಿದ್ದೇನೆ. ಇದೂ ಒಂದು ತರಹೆ ಪೆದ್ದುತನವೋ ಏನೋ? ಆದರೆ ಒಂದು ವಿಷಯ. ನಿನ್ನ ಮನೆಯಾಕೆಗೆ ಹೇಳು : ' ಪೆದ್ದು ಬ್ರಾಹ್ಮಣನಾಗಿ ಇರಕೂಡದು. ಪೆದ್ದಾಗಿದ್ದರೆ ಅವನು ಬ್ರಾಹ್ಮಣನಲ್ಲ. ಬ್ರಾಹ್ಮಣ ಎಂದರೆ ಜ್ಞಾನದ ಬೊಕ್ಕಸ ಎಂದು ಅರ್ಥ...' ಆ ಕುಲದಲ್ಲಿ ಹುಟ್ಟಿ 'ಗಣಪತಿ' ಎಂದು ಹೆತ್ತವರು ಇಟ್ಟ ಹೆಸರನ್ನು ಕಳೆದುಕೊಂಡು 'ಪೆದ್ದು ಶಾಸ್ತ್ರಿ, ಪೊಳ್ಳು ಶಾಸ್ತ್ರಿ' ಎಂದು ಅರವತ್ತು ವರ್ಷಗಳಿಂದ ಪದವಿ ತೆಗೆದುಕೊಂಡಿದ್ದೇನೆ. ಸರಿಹೋದದ್ದು ಹೋಯಿತು. ಈಗ ನಾನು ಸಂತೋಷವಾಗಿ ಗೌರವವಾಗಿ – ಅರವತ್ತು ವರ್ಷಗಳ ಮೇಲೆ – ಈಗ ತಾನೆ ಸಂತೋಷವಾಗಿದ್ದೇನೆ. ಪ್ರಾಪ್ತವಿದ್ದರೆ ಎಂದಾದರೊಂದು ದಿನ ಎಲ್ಲಿಯಾದರೂ ಸಂಧಿಸೋಣ. ನನ್ನನ್ನು ನೀವೆಲ್ಲಾ ಮರೆತುಬಿಟ್ಟರೂ ಚಿಂತೆಯಿಲ್ಲ. ಆದರೆ ನಾನು ಯಾವುದನ್ನೂ ಮರೆಯಲು ಸಾಧ್ಯವಾಗಿಲ್ಲ.

– ಇಂತು ನಿನ್ನ ತಂದೆ,
ಗಣಪತಿ...'

— ಸಹಿ ಹಾಕಿದ ಕಡೆ ಗಣಪತಿ ಶಾಸ್ತ್ರಿಗಳು ಎಂದು ಬರೆದು, ಶಾಸ್ತ್ರಿಗಳು ಎಂಬ ಪದವನ್ನು ಹೊಡೆದು ಅಳಿಸಲಾಗಿತ್ತು.

ಕವರಿನೊಳಗಿಂದ ಆ ಕಟ್ಟು ಪೇಪರನ್ನು ಪತ್ರಿಕಾ ಸಂಪಾದಕನ ಧೋರಣೆಯಿಂದ ಕೈಯಲ್ಲಿ ಎತ್ತಿ ಎಷ್ಟು ಪುಟಗಳೆಂದು ತಿಳಿಯಲು ಕಡೆಯ ಪುಟವನ್ನು ತೆಗೆದು ನೋಡಿದ. ಅದರಲ್ಲಿ ಪುಟಸಂಖ್ಯೆಯೇನೂ ಇಲ್ಲ. ಆ ಪೇಪರು ಅಷ್ಟನ್ನೂ ಒಂದು ನೋಟು ಪುಸ್ತಕದಿಂದ ಹರಿದು ತೆಗೆದುದರಿಂದ ಪಕ್ಕದಲ್ಲಿ ನೇರವಾಗಿರಲಿಲ್ಲ. ಅವುಗಳಲ್ಲಿ ಕೆಲವು ಪುಟಗಳು

ಪೆನ್ಸಿಲ್‌ನಿಂದ, ಮತ್ತೆ ಕೆಲವು ಪುಟಗಳು ಪೆನ್ನಿನಿಂದಲೂ – ದೀರ್ಘವಾದ ಚಿಂತನೆಯಿಂದ ಬಹಳ ಕಾಲ ಮನಸ್ಸಿನಲ್ಲಿ ಆಳವಾಗಿ ಉಕ್ಕಿಬಂದಿದ್ದ ಸ್ಪಷ್ಟ ಅಭಿಪ್ರಾಯಗಳು – ಹೊಡೆಯುವುದು ತಿದ್ದುವುದು ಏನೂ ಇಲ್ಲದೆ ಬರೆಯಲ್ಪಟ್ಟಿದ್ದುವು. ಅವನ್ನು ಒಂದೇ ಉಸುರಿನಲ್ಲಿ ಓದಿಬಿಡಬೇಕು ಎಂಬ ಕಾತರವಿದ್ದರೂ ಆಫೀಸಿನಲ್ಲಿ ಅದಕ್ಕೆ ವೇಳೆಯಿಲ್ಲದಷ್ಟು ಕೆಲಸ ಕಾದಿದ್ದುದರಿಂದ ಆ ಕಾಗದವನ್ನು ಭದ್ರವಾಗಿ ಮಡಿಸಿ ತನ್ನ ಕೈ ಚೀಲದಲ್ಲಿಟ್ಟುಕೊಂಡ ಶಿವರಾಮನ್. ಅದನ್ನು ಚೀಲದಲ್ಲಿಡುವ ಮುಂಚೆ ಅದು ಎಲ್ಲಿಂದ ಬಂದಿದೆ ಎಂದು ತಿಳಿದುಕೊಳ್ಳಲು ಕವರನ್ನೂ ಕಾಗದವನ್ನೂ ತಿರುಗಿಸಿ ತಿರುಗಿಸಿ ನೋಡಿದ. ಕಳುಹಿಸಿದವರ ವಿಳಾಸ ಅದರಲ್ಲಿಲ್ಲ. ಆದರೂ ಅಂಚೆ ಮುದ್ರೆಯಿಂದ ಆ ಕಾಗದ ನವದೆಹಲಿಯಿಂದ ಬಂದಿರುವುದು ಕಂಡು ಒಂದು ಕ್ಷಣ ಭ್ರಮೆಗೊಂಡು ಕಣ್ಣು ಅಗಲಿಸಿದ.

'ಈ ತಂದೆ ಯಾವ ಧೈರ್ಯದಿಂದ ಇಷ್ಟು ದೂರ ಹೇಳದೆ ಕೇಳದೆ ಹೋದರು' ಎಂದು ಭಾವಿಸಿದಾಗ ಕಳ್ಳಕಪಟತನವನ್ನು ಅರಿಯದ ಆ ಮುಗ್ಧ ಜೀವ ಈ ಬಾಳಿನಲ್ಲಿ ಎಷ್ಟು ಬೇಸರಗೊಂಡು ನೊಂದಿರಬೇಕು ಎಂಬ – ಅರಿವಿಗೆ ಬಾರದ, ಮನಸ್ಸಿನಲ್ಲಿ ಬಂದ – ತಿಳುವಳಿಕೆಯಿಂದ ಅವನ ಕಣ್ಣುಗಳಲ್ಲಿ ನೀರು ಬಂತು.

— ಆ ಕ್ಷಣ ಅವನು ತನ್ನ ತಂದೆಯನ್ನು, ಆ ಪೆದ್ದು ಬ್ರಾಹ್ಮಣನನ್ನು – ದಾಡಿಬಿಟ್ಟ. ನೆರೆದ ಕೂದಲು ತುಂಬಿದ, ಮುಂದಿನ ಹಲ್ಲು ಬಿದ್ದುಹೋದ ಸಿಡುಬು ಕಲೆಗಳಿಂದ ಕೂಡಿದ, ಮಾಲುಗಣ್ಣಿನ ನೋಟದ ಕಪ್ಪು ಮುಖವನ್ನು ಕಲ್ಪಿಸಿಕೊಂಡು ಮುಂದೆಯೇ ನೋಡಿದಂತಾಯಿತು.

[ 2 ]

ಗಣಪತಿ ಶಾಸ್ತ್ರಿಗಳು ಕಳೆದ ತಿಂಗಳು ಅಮಾವಾಸ್ಯೆಯ ಮಾರನೆಯ ದಿನ ಇದ್ದಕ್ಕಿದ್ದಂತೆ ಕಾಣೆಯಾದರು...

ಮೊದಲೆರಡು ದಿನ ಅವರ ಕುಟುಂಬದವರು – ಕುಟುಂಬದವರೆಂದರೆ ಬೇರೆ ಯಾರು? ಅವರ ಇಬ್ಬರು ಮಕ್ಕಳಾದ ಶಿವರಾಮನ್ ಮತ್ತು ಮಣಿ ಮಾತ್ರ – ಅವರು ಅದಕ್ಕಾಗಿ ಬಹಳ ಚಿಂತೆಪಡಲಿಲ್ಲ.

ನಾಲ್ವರು – ಐವರು ಶಾಸ್ತ್ರಿಗಳೊಂದಿಗೆ ಅವರು ಕಾಂಚೀಪುರಕ್ಕೆ ಹೋಗಿರುವುದಾಗಿ ಯಾರೋ ಹೇಳಲು "ಹೋದವರು, ಮನೆಗೆ ಬಂದು ಒಂದು ಮಾತು ಹೇಳಿ ಹೋಗಬಾರದಾಗಿತ್ತೆ? ನೆನಸಿಕೊಂಡಾಗ ಬರುವುದು ಹೋಗುವುದು... ಇದೇನು ಛತ್ರವೇ ಚಾವಡಿಯೇ?" ಎಂದು ಗೊಣಗುತ್ತಾ ಅವರನ್ನು ನಿಂದಿಸಿದಳು ಸೊಸೆ ರಾಜಂ. ಆದರೆ

ಸ್ವಲ್ಪ ದಿನಗಳ ನಂತರ ಆ ನಾಲ್ವರು ಶಾಸ್ತ್ರಿಗಳೂ ಹಿಂತಿರುಗಿ ಬಂದು ಗಣಪತಿ ಶಾಸ್ತ್ರಿಗಳು ತಮ್ಮೊಂದಿಗೆ ಬರಲಿಲ್ಲವೆಂದು ತಿಳಿಸಿದ ತಕ್ಷಣವೇ ರಾಜಂ ಒಂದು ಕ್ಷಣ ದಿಗ್ಭ್ರಮೆಗೊಂಡು, ನಂತರ ಅವರ ನಿಂದನೆಯನ್ನು ನಿಲ್ಲಿಸಿದಳು.

'ಎಲ್ಲಿ ಹೋಗಿರಬಹುದು? ಎಲ್ಲಿ ಹೋಗಿರಬಹುದು ಅಂತ ?' ಎಂದು ತನಗೆ ತಾನೇ ಕೇಳಿಕೊಂಡಳು. ಬೇರೆ ಮಗಳೋ ಅವರನ್ನು ಗೌರವಿಸಿ ಪ್ರೀತಿಯಿಂದ ಉಪಚರಿಸುವ ಬಂಧುಗಳೋ ಯಾರೂ ಇಲ್ಲದ ಅವರ ಪರಿಸ್ಥಿತಿಯನ್ನು ನೆನೆದು ತನ್ನೊಳಗೇ ನಿಟ್ಟುಸಿರು ಬಿಟ್ಟಳು. ಶಿವರಾಮನ್‌ನ ಮನಸ್ಸಿನಲ್ಲೂ ಸಣ್ಣ ಆತಂಕ ಮೂಡಿತು.

ಎಂದಿನಂತೆ ಸಾಯಂಕಾಲ ಆಫೀಸಿನಿಂದ ಹಿಂತಿರುಗುವಾಗ, ದಾರಿಯಲ್ಲಿದ್ದ ತೆಪ್ಪಕೊಳದ ಗೋಡೆಯ ಮೇಲೆ ಸಾಲಾಗಿ ಕುಳಿತು ಎತ್ತರದ ಕಂಠದಿಂದ ವಾಗ್ವಾದಗಳಲ್ಲಿ ಮಗ್ನರಾಗಿರುತ್ತಿದ್ದ ಶಾಸ್ತ್ರಿಗಳ ಗುಂಪಿನಲ್ಲಿ ತನ್ನ ತಂದೆ ಏನಾದರೂ ಇದ್ದಾರೇನೋ ಎಂದು ಶಿವರಾಮನ್ ಕಣ್ಣುಗಳು ಹುಡುಕುತ್ತಿದ್ದವು. ಯಾವಾಗಲೂ ನಿರಾಸೆಯೇ.

— ಅವನಿಗೆ ಗೊತ್ತೆ? ಊರಿನಲ್ಲಿದ್ದಾಗ ಕೂಡ ಅವರು ಈ ಗುಂಪಿನಿಂದ ಪ್ರತ್ಯೇಕವಾಗಿಯೇ ಇರುತ್ತಿದ್ದರೆಂದು...? ಅದು ಸರಿ, ಆ ಪೆದ್ದು ಬ್ರಾಹ್ಮಣನನ್ನು ಯಾರು ತಾನೇ ಸೇರಿಸಿಕೊಳ್ಳುತ್ತಾರೆ?

ದಿನಗಳೆದಂತೆ ತನ್ನ ತಂದೆಯ ಬಗ್ಗೆ 'ಅವರೇನಾದರೋ, ಎಲ್ಲಿದ್ದಾರೋ ಅಥವಾ 'ಬೇರೇನಾದರೂ...' ಎಂದು ಮನಸ್ಸಿನಲ್ಲಿ ಒಂದು ರಹಸ್ಯವಾದ ಚಿಂತೆ ನಿಂತು ಹೆಪ್ಪುಗಟ್ಟುವುದು ಅವನಿಗೆ ಅರಿವಾಯಿತು. ಆದರೂ ಅದರ ಬಗ್ಗೆ ಬಹಿರಂಗವಾಗಿ ಮಾತನಾಡಲು ವಿಚಾರಿಸಲು ಅವನು ನಾಚಿಕೆಪಡುತ್ತಿದ್ದ: ತನ್ನ ಹೆಂಡತಿ ರಾಜಂ 'ಲೋಕದಲ್ಲಿ ಸಿಕ್ಕದ ತಂದೆಯನ್ನು ಪಡೆದುಬಿಟ್ಟಿದ್ದಿರಿ...ಸುಮ್ಮನೆ ಯೋಚನೆಮಾಡಿ ರೋಗ ತಂದಿಟ್ಟುಕೊಳ್ಳಬೇಡಿ' ಎಂಬುದಾಗಿ ಎಲ್ಲಿ ಕೂಗಾಡುವಳೋ ಎಂದು ಅಂಜಿದ. ತನ್ನ ತಮ್ಮನೂ ತನ್ನಂತೆಯೇ ಮನಸ್ಸಿನೊಳಗೇ ತಂದೆಯ ಬಗ್ಗೆ ಕಾತರಗೊಂಡಿರುವನೋ ಇಲ್ಲ, 'ಆ ಪೆದ್ದು ಮುದುಕ ಎಲ್ಲಿ ತೊಲಗಿದರೇನು?' ಎಂದು ಅಸಡ್ಡೆಯಿಂದಿರುವನೋ ಎಂದು ತಿಳಿಯದಾದ. ಹಾಗೆ ಅಸಡ್ಡೆ ಮಾಡಿದರೆ ಅದು ಮಹಾಪಾಪ ಎಂದು ತೋರಿತು. ಚಿಕ್ಕ ವಯಸ್ಸಿನಲ್ಲಿ – ಚಿಕ್ಕ ವಯಸ್ಸಿನಲ್ಲೇನು... ಈಗಲೂ ಅವರನ್ನು ತಂದೆ ಎಂದು ಹೇಳಿಕೊಳ್ಳಲು ಕೂಡ ತಾನೂ ತನ್ನ ತಮ್ಮನೂ ನಾಚಿಕೆಗೊಂಡ ಪ್ರಸಂಗಗಳೆಲ್ಲಾ ನೆನಪಿಗೆ ಬಂದುವು.

ಗಣಪತಿ ಶಾಸ್ತ್ರಿಗಳಂತಹ ಕಪ್ಪು ಕುರೂಪಿ ಬ್ರಾಹ್ಮಣ, ಪೆದ್ದು ನಗೆಯೊಂದಿಗೆ ಮಾಲುಗಣ್ಣು ದೃಷ್ಟಿಯಿಂದ ಎದಿರು ಬಂದು ನಿಂತರೆ ಯಾರಿಗೂ ಗೌರವಭಾವವುಂಟಾಗುವುದಿಲ್ಲ. ಅವರನ್ನು ಕಂಡರೆ ಕೆಲವರಿಗೆ ಪರಿತಾಪ ಇನ್ನೂ ಕೆಲವರಿಗೆ ಪರಿಹಾಸ; ಅವರೂ 'ಇಹ' ಎಂದು ಚಿಕ್ಕ ಬಾಯಿ ನಗುವಿನೊಂದಿಗೆ ಮಗುವಿನಂತೆ ಏನಾದರೂ ಮಾತನಾಡುತ್ತಿದ್ದರು. ಮಾತಿನಲ್ಲಿ ಅಡಗಿರುವ ಅಂಶವನ್ನು ಯಾರು ಲೆಕ್ಕಕ್ಕೆ ತೆಗೆದುಕೊಳ್ಳುತ್ತಾರೆ? ಅದು ಹಲವರಿಗೆ ಬೇಸರವಾಗಿಯೇ ಇರುತ್ತಿತ್ತು. ಪರಿತಾಪ ಮತ್ತು ಪರಿಹಾಸಕ್ಕೂ ಆಳಾಗಿದ್ದ

ತನ್ನನ್ನು ಅಪ್ಪಾ ಎಂದು ಹೇಳಿಕೊಳ್ಳಲು ಕೂಡ ತನ್ನ ಮಕ್ಕಳು ನಾಚಿಕೆಪಡುವುದರಲ್ಲಿ ನ್ಯಾಯವಿದೆ ಎಂದು ಅರ್ಥಮಾಡಿಕೊಂಡಿದ್ದರು ಗಣಪತಿ ಶಾಸ್ತ್ರಿಗಳು. ಒಟ್ಟಿನಲ್ಲಿ ಅವರನ್ನು ಊರಿನಲ್ಲಿ ಯಾರೂ ಗೌರವಿಸಿದುದಿಲ್ಲ. ಕೆಲವು ವೇಳೆ ಅಪಮಾನಪಡಿಸಿದ್ದು ಉಂಟು...

ಉಳಿದ ಶಾಸ್ತ್ರಿಗಳು ಇವರೊಂದಿಗೆ ಏನಾದರೂ ಮಾತನಾಡಿ ಇವರ ಬಾಯಿ ಬಿಚ್ಚಿಸಿ ಸಂತೋಷಪಡುವುದೇ ಒಂದು ಮನರಂಜನೆ. ಮನೆಯಲ್ಲಿ ಮಕ್ಕಳಿಗೆ ಇವರಿಂದ ಅಪಮಾನ; ನಾಚಿಕೆ. ಸೊಸೆಗೆ ಅಂತೂ ಕಂಡರಾಗದು!

ರಾಜಂ ಅವರ ಬಗ್ಗೆ ಪ್ರತ್ಯೇಕವಾದ ವಿಶೇಷವಾದ ತಾತ್ಸಾರವೇನೂ ಹೊಂದಿರಲಿಲ್ಲ. ಸದಾಕಾಲ ಸಿಡಿಮಿಡಿಗೊಂಡಿರುವುದು ಅವಳ ಸ್ವಭಾವ. ಅದಕ್ಕೆ ಪದೇ ಪದೇ ಸಿಕ್ಕಿಕೊಳ್ಳುತ್ತಿದ್ದವರು ಇವರೇ ಎಂದರೆ ಅವಳು ಅದಕ್ಕೆ ಹೊಣೆಯೆ?

ಈರೀತಿ ಯಾರಿಗೂ ಬೇಡದವರಾಗಿದ್ದ ಗಣಪತಿ ಶಾಸ್ತ್ರಿಗಳು ಎಲ್ಲಿಗೋ ಓಡಿ ಹೋದುದರಿಂದ ಯಾರಿಗೆ ಏನು ನಷ್ಟ?

"ಇಂದಿಗೆ ಹತ್ತು ದಿನಗಳಾದುವು. ಇಪ್ಪತ್ತು ದಿನಗಳಾದುವು..." ಎಂದು ಅವರು ಯಾಕೆ ದಿನಗಳನ್ನು ಎಣಿಸುತ್ತಾರೆ?

"ಹೀಗೆ ನಮ್ಮ ಮೇಲೆ ದೋಷ ಆರೋಪಿಸಲು ಕಾದಿದ್ದರು. ಊರಿನಲ್ಲಿ ನನ್ನನ್ನು ತಾನೇ ನಿಂದಿಸುತ್ತಾರೆ? ನಾನು ಅವರ ಬಗ್ಗೆ ಒಂದು ನಿಂದನೆಯ ಮಾತನಾಡಿಲ್ಲ. ಮನುಷ್ಯ ನಿದ್ದೂ ನನ್ನ ಜೀವಕ್ಕೆ ಹಿಂಸೆಕೊಟ್ಟರು. ಈಗ ಇಲ್ಲದೆಯೇ ಹಿಂಸೆ ಕೊಡುತ್ತಿದ್ದಾರೆ" ಎಂದು ಹಗಲು ರಾತ್ರಿ ತನ್ನ ಮಾವನವರು ಓಡಿಹೋದುದಕ್ಕಾಗಿ ಅವಳು ತನ್ನ ಸ್ವಭಾವಕ್ಕೆ ಅನುಗುಣವಾಗಿ ಚಿಂತೆಪಡುತ್ತಿದ್ದಳು...

— ಇಲ್ಲಿದ್ದಾಗ ನಾನು ಒಂದು ದಿನ ಒಂದು ನಿಂದನೆ ಮಾಡಲಿಲ್ಲ ಎಂದು ನಿಜವಾಗಿ ನಂಬಿದ್ದಳು ರಾಜಂ.

ಈ ಒಂದು ತಿಂಗಳು ಕಾಲದಲ್ಲಿ ತಮ್ಮನ್ನು ಬಿಟ್ಟು ಓಡಿಹೋದ ಗಣಪತಿ ಶಾಸ್ತ್ರಿಗಳು ಜೀವಂತವಾಗಿದ್ದಾರೆಯೆ ಎಂದು ತಿಳಿದುಕೊಳ್ಳುವ ಕಾತರದಿಂದ ಒಂದು ತರಹೆ ಆತಂಕ – ಪ್ರೀತಿ ಉಂಟಾಗಿತ್ತು. ಹೀಗೆ ಎಲ್ಲಿಗೋ ಅನಾಥರಂತೆ ಹೋಗಿಬಿಟ್ಟುದನ್ನು ನೆನೆದು 'ಅನಾಥ ಶವವಾಗಿ ಎಲ್ಲಿ ಬಿದ್ದಿದ್ದಾರೋ' ಎಂದು ಭಯಂಕರ ಕಲ್ಪನೆಗಳಲ್ಲಿ ಸಿಕ್ಕಿಕೊಂಡು, 'ಈ ಪಾಪಕ್ಕೆ ನಾನೇ ಕಾರಣವೇನೋ?' ಎಂದು ಮನಸ್ಸಿನೊಳಗೆ ಎದ್ದ ನಡುಕದಿಂದ ತನಗೆ ತಾನೇ ಸುಮ್ಮನೆ ಕಣ್ಣೀರಿಡುತ್ತಿದ್ದಳು ರಾಜಂ. ಈ ವಿಚಾರ ಶಿವರಾಮನಿಗೋ ಮಗನಿಗೋ ತಿಳಿಯದು.

* * * *

ಹತ್ತು ದಿನಗಳ ಹಿಂದೆ ಆಫೀಸಿನಿಂದ ಬರುತ್ತಿದ್ದಾಗ, ತೆಪ್ಪಕೊಳದ ಬಳಿ ಕೂಡಿದ್ದ ಶಾಸ್ತ್ರಿಗಳ ಗುಂಪಿನಲ್ಲಿ ಶಿವರಾಮನ್ ದೃಷ್ಟಿ ಕಪ್ಪಾಗಿ ದಪ್ಪನಾಗಿ ಎದ್ದು ಕಾಣುತ್ತಿದ್ದ—

ತಂದೆಯನ್ನು ಹುಡುಕುವ ದೃಷ್ಟಿ ಹರಿಸಲಾಗಿ ವೆಂಕಟು ಅಯ್ಯರ್ ನೋಡಿಬಿಟ್ಟರು... ಅವನ ಹಿಂದೆಯೇ ಪೇಟೆಯ ಮನೆಗೆ ಬಂದರು... ನಂತರ ತನ್ನ ಹಿಂದೆ ಯಾರಾದರೂ ಬರುತ್ತಿರುವರೋ ಎಂದು ಸುತ್ತಮುತ್ತ ನೋಡಿಕೊಂಡು "ಏನಪ್ಪಾ ಶಿವರಾಮ..." ಎಂದು ಕರೆದರು.

ಶಿವರಾಮನ್ ಹಿಂತಿರುಗಿ ನೋಡಿದ.

"ಏನು, ನಿನ್ನ ತಂದೆಯ ಬಗ್ಗೆ ಸಮಾಚಾರವೇನಾದರೂ ತಿಳಿಯಿತೇನು ?" ಎಂದು ಹತ್ತಿರ ಬಂದು ಕೇಳಿದರು. ವೆಂಕಟು ಅಯ್ಯರ್ ಗಣಪತಿ ಶಾಸ್ತ್ರಿಗಳ ಬಾಲ್ಯ ಸ್ನೇಹಿತರು. ಇಬ್ಬರಿಗೂ ಒಂದೇ ವಯಸ್ಸು.

ಶಿವರಾಮನಿಗೆ ತಾನೇನೋ ದೊಡ್ಡ ತಪ್ಪು ಮಾಡಿದವನಂತೆ ಭಾವನೆಯುಂಟಾಗಿ ತಲೆಬಾಗಿ "ಏನೂ ಸಮಾಚಾರವಿಲ್ಲ. ಎಲ್ಲಿ ಹೋಗಿದ್ದಾರೆಂದೇ ತಿಳಿಯಲಿಲ್ಲ... ಯಾಕೆ ಹೋದರೆಂಬುದೂ ತಿಳಿಯದು... ಮನೆಯಲ್ಲಿ ಏನೂ ವಾಗ್ವಿವಾದವಿಲ್ಲ... ಉ... ನಿಮಗೆ ತಿಳಿಯದೆ ನಾವು ಅವರನ್ನು ಹೇಗೆ ನೋಡಿಕೊಳ್ಳುತ್ತಿದ್ದೆವೆಂದು?" ಎಂದು ಮೆಲ್ಲನೆ ಉಗುಳು ನುಂಗಿ ಹೇಳಿದ. ಅವನ ದೋಷಯುಕ್ತವಾದ ಮನಸ್ಸು ಕಳವಳಪಟ್ಟಿತು.

"ಅಯ್ಯಾ ಪೆದ್ದ... ಅದಕ್ಕೆ ನೀನೇನು ಮಾಡಬಲ್ಲೆ ಹೇಳು...? ಒಂದು ವೇಳೆ ಹಾಗೇ ಆದರೂ ತಂದೆ ಮಕ್ಕಳಲ್ಲಿ ಸಾವಿರವಿರುತ್ತೆ. ಅದರಿಂದ ಒಬ್ಬ ಮನುಷ್ಯ ಮನೆ ಬಿಟ್ಟೇ ಹೋಗಿಬಿಡುವುದೆ ? ಅದು ಸರಿ, ನಿನಗೆ ಗೊತ್ತಿಲ್ಲವೆ...?" ಎಂದು ಸುತ್ತಮುತ್ತ ನೋಡಿದ. ನಂತರ ಧ್ವನಿ ತಗ್ಗಿಸಿ "ಈ ಕಡೆ ಬಾ ಹೇಳುತ್ತೇನೆ" ಎಂದು ನಡುಬೀದಿಯಿಂದ ಪಕ್ಕಕ್ಕೆ ಸರಿದು ಭಜನೆ ಮಂಟಪದ ಕಡೆಗೆ ಅವನನ್ನು ಕರೆದುಕೊಂಡು ಹೋದರು ವೆಂಕಟು ಅಯ್ಯರ್. ಗಣಪತಿ ಶಾಸ್ತ್ರಿಗಳು ಊರನ್ನು ಬಿಟ್ಟು ಹೋಗುವ ಮೊದಲು ತೆಪ್ಪಕೊಳ ತೀರದಲ್ಲಿ ನಡೆದ ಸಂಭವವನ್ನು ಅವರು ನೆನಸಿಕೊಂಡರು.

ಬೀದಿಯ ಪಕ್ಕಕ್ಕೆ ಇಬ್ಬರೂ ಬಂದು ನಿಂತಮೇಲೆ ತಮ್ಮ ಸೊಂಟದಲ್ಲಿ ಸಿಕ್ಕಿಸಿದ್ದ ನಶ್ಯವನ್ನು ತೆಗೆದುಕೊಂಡು ಅವರು ಹೇಳಿದರು : "ಅವರಿಗೆ ಮನಸ್ಸೇ ಜಿಗುಪ್ಸೆಯಾಗಿ ಬಿಟ್ಟಿತ್ತು. ಅವರನ್ನು ಹಾಗೆ ಅಪಮಾನಪಡಿಸಿದರು... ಬೇರೆ ಯಾರು, ಸುಂದರ ಘನಪಾಟಿಗಳೇ..." ಎಂದು ಹೇಳಿ ಬೆರಳುಗಳಲ್ಲಿದ್ದ ನಶ್ಯವನ್ನು ಹಾಕಿಕೊಂಡರು. ನಶ್ಯದ ಖಾರದಿಂದಾಗಿ ನೀರು ಕೂಡಿದ ದೃಷ್ಟಿಯಿಂದ ಶಿವರಾಮನನ್ನು ನೋಡಿದರು.

ಶಿವರಾಮನ್‌ಗೆ ಏನೂ ಅರ್ಥವಾಗಲಿಲ್ಲ. ಸುಂದರ ಘನಪಾಟಿಗಳು ಗಣಪತಿ ಶಾಸ್ತ್ರಿಗಳನ್ನು ಅಪಮಾನಗೊಳಿಸಿದರೆ...? ಯಾಕೆ ?

ಶಿವರಾಮನಿಗೂ ಅವನ ಕುಟುಂಬದವರಿಗೂ ಸುಂದರ ಘನಪಾಟಿಗಳ ಮೇಲೆ ಅಪಾರ ಮರ್ಯಾದೆ ಮತ್ತು ಭಕ್ತಿಯೂ ಇತ್ತು. ಗಣಪತಿ ಶಾಸ್ತ್ರಿಗಳ ಗುರುವೇ ಅವರು. ಆ ಕಾಲದಲ್ಲಿ ಮಹಾಪಂಡಿತರಾಗಿ ಮೆರೆದ ಗಣಪತಿ ಶಾಸ್ತ್ರಿಗಳ ತಂದೆಯವರಾದ ಪರಮೇಶ್ವರ ಘನಪಾಟಿಗಳ ಪ್ರಾಣಪ್ರಿಯ ಶಿಷ್ಯ ಸುಂದರ ಘನಪಾಟಿಗಳು ಎಂಬ ವಿಷಯ ಒಂದು

ಕುಟುಂಬದ ಹೆಮ್ಮೆಯಾಗಿ ನಡೆದು ಬಂದುದು. ಅದರಲ್ಲೇ ಗಣಪತಿ ಶಾಸ್ತ್ರಿಗಳು ವೇದಾಭ್ಯಾಸ ಮಾಡಿದರು. ಎಪ್ಪತ್ತೈದು ವರ್ಷಗಳಿಗೆ ಮೇಲೆ ಹಣ್ಣಾಗಿ ಹೋದ, ನೋಡಿದವರು ತಲೆಬಾಗುವ ವ್ಯಕ್ತಿತ್ವ, ತನ್ನತನ ಹೊಂದಿದ್ದ ಘನಪಾಟಿಗಳು, ಪಾಪ, ತನ್ನ ತಂದೆಯನ್ನು ಯಾವ ಕಾರಣದಿಂದ ಅವಮಾನಪಡಿಸಿರಬಹುದು ? ಹಾಗೆಯೇ ಸ್ವಲ್ಪ ಮುಂಗೋಪಿಗಳಾದ ಘನಪಾಟಿಗಳು ಏನಾದರೂ ಹೇಳಿದ್ದರೂ, ಯಾರು 'ಏನು ಹೇಳಿ ನಿಂದಿಸಿದರೂ ಅದನ್ನು ಮನಸ್ಸಿಗೆ ತೆಗೆದುಕೊಳ್ಳದ ' ಪರಬ್ರಹ್ಮ'ರಾದ ತನ್ನ ತಂದೆ ಅದಕ್ಕಾಗಿ ಊರು ಬಿಟ್ಟು ಹೋಗಿರುವರೆ ? ' ಎಂದೆಲ್ಲಾ ಯೋಚಿಸಿ ಆತಂಕದಿಂದ 'ನೀವೇನು ಹೇಳುತ್ತಿದ್ದೀರಿ ? ' ಎಂದು ವೆಂಕಟು ಅಯ್ಯರ್ ಮುಖವನ್ನು ನೋಡಿದ ಶಿವರಾಮನ್.

" ನಾನು ಕಣ್ಣಾರೆ ಕಂಡಿದ್ದು ಹೇಳುತ್ತಿದೇನಪ್ಪ. ನನಗೇನು ಹೆದರಿಕೆ ? ಉಳಿದವರೆಲ್ಲಾ ಒಂದು ಗುಂಪಾಗಿ ಈ ಅನ್ಯಾಯ ಕೃತ್ಯದ ಬಗ್ಗೆ ಒಂದು ಮಾತೂ ಆಡುವುದಿಲ್ಲ... ಸುಂದರ ಘನಪಾಟಿಗಳು ಬಹಳ ಹಿರಿಯರು... ನಾನು ಅದನ್ನು ಇಲ್ಲವೆನ್ನುವುದಿಲ್ಲ... ಆದರೂ ಅವರಿಗೆ ಈ ವಯಸ್ಸಿನಲ್ಲಿ ಇಂತಹ ಕೋಪ ಇರಬಾರದು. ಮನುಷ್ಯ ಹೀಗೆ ಅಸಹ್ಯವಾಗಿ ಮಾತನಾಡುವುದೆಂದರೇನು ? ಅವರ ಮರ್ಯಾದೆಗೆ ತಕ್ಕದ್ದೇ...? ಛಿ" ಎಂದ ಬಡಬಡ ಮಾತನಾಡಿ ಆಯಾಸಗೊಂಡ ವೆಂಕಟು ಅಯ್ಯರ್ ಮುಂದಿನ ವಿಚಾರ ವನ್ನು ಅರಿತುಕೊಳ್ಳಲು ಅವನು ಕುತೂಹಲಗೊಂಡಿದ್ದಾನೆಯೇ ಎಂದು ಮೌನವಾಗಿ ಶಿವರಾಮನ್ ಮುಖವನ್ನು ನೋಡಿದರು.

" ನಡೆದದ್ದಾದರೂ ಏನು... ನನಗೇನೂ ಅರ್ಥವಾಗುತ್ತಿಲ್ಲ " ಎಂದ ಶಿವರಾಮನ್.

" ನನಗೂ ಗೊತ್ತಿಲ್ಲ... ನಾನು ದೇವಸ್ಥಾನದಿಂದ ಬರುತ್ತಿದ್ದೆ. ತೆಪ್ಪಕೊಳದ ಬಳಿ ಗಲಭೆ, ಎಲ್ಲರ ಗಮನ ಸೆಳೆಯುವಂತಿತ್ತು. ನೋಡಿದರೆ ನಿನ್ನ ತಂದೆ – ಗಣಪತಿ ' ದೇವರೇ ' ಎಂದು ನಿಂತಿದ್ದರು. ಘನಪಾಟಿಗಳು ಹೊಡೆಯುವುದಕ್ಕೆ ಹೋಗುವವರಂತೆ ಕೈಗಳನ್ನೆತ್ತಿ ಆವೇಶದಿಂದ ಹೆಜ್ಜೆ ಹಾಕುತ್ತಿದ್ದರು. ಅವರನ್ನು ಹೊಡೆಯಲು ಕೂಡ ಹಕ್ಕುಳ್ಳವರು, ನಾನು ಇಲ್ಲ ಎನ್ನುವುದಿಲ್ಲ... ಆದರೂ ಮನಸ್ಸಿಗೆ ಬಂದಂತೆ – ಛೀ ಬ್ರಾಹ್ಮಣ ಆಡುವ ಮಾತುಗಳೇ ಅವು ? ಅಷ್ಟು ಅಸಹ್ಯವಾಗಿ ನಿಂದಿಸುತ್ತಿದ್ದರು... ಗಣಪತಿ ಹಾಗೆಯೇ ಅವಮಾನದಿಂದ ನಿಂತಿದ್ದರು... ಕಡೆಯಲ್ಲಿ – ಅವರು ತಾನೆ ಮನುಷ್ಯಜೀವಿಯಲ್ಲವೆ ? ನನಗೆ ತೋರಿತು... ಅದನ್ನೇ ಅವರು ತಿರುಗಿಸಿ ಕೇಳಿಬಿಟ್ಟರು : ಹಾಗೇನೂ ತಪ್ಪಾಗಿ ಮಾತನಾಡಲಿಲ್ಲ. ' ಅಯ್ಯಾ... ಹೀಗೆ ಅಸಹ್ಯವಾಗಿ ಮಾತನಾಡುತ್ತಿದ್ದೀರಲ್ಲ. ನೀವು ಬ್ರಾಹ್ಮಣರೇ ? ಎಂದು ಕೇಳಿದರು... ಎಷ್ಟು ಅನ್ನಿಸಿಕೊಂಡು ಒಬ್ಬ ಮನುಷ್ಯ ಸುಮ್ಮ ನಿರಲು ಸಾಧ್ಯ? ಥಟ್ಟನೆ ಕೇಳಿಬಿಟ್ಟರು...ಅಷ್ಟೇ ಆ ವೃದ್ಧರನ್ನು ನೋಡಬೇಕಿತ್ತು... ಗಣಪತಿ ಕೊರಳಿನಲ್ಲಿ ಹಾಕಿಕೊಂಡಿದ್ದ ವಸ್ತ್ರವನ್ನು ಎಳೆದು ತಿರುಗಿಸಿ ಹಿಡಿದುಕೊಂಡರು... ಆವೇಶ ಬಂದವರಂತೆ ಗಾಯತ್ರಿ ಮಂತ್ರವನ್ನು ಜಪಿಸಿದರು. ' ಹೇಳು, ಇದಕ್ಕೆ ಅರ್ಥ

ಹೇಳು. ನೀ ಬ್ರಾಹ್ಮಣನಿಗೆ ಜನಿಸಿದವನಾದರೆ ಹೇಳು... ನನ್ನನ್ನು ಕೇಳುತ್ತಿಯಲ್ಲ... ಬ್ರಾಹ್ಮಣರೇ ಎಂದು...? ಇವನು ಬ್ರಾಹ್ಮಣನೇ ಎಂದು ಎಲ್ಲರೂ ಕೇಳಿ...? ಎಂದು ಇನ್ನೂ ನಿಂದಿಸಿದರು – ಒಂದೇ ಗುಂಪು... ನಾನು ದಾರಿ ಮಾಡಿಕೊಂಡು ಹೋಗಿ ನೋಡಿದೆ. ಆ ವೃದ್ಧರಿಗೆ ಅದೇನು ಬಲವೋ ? ನನ್ನನ್ನು ಹಿಡಿದು ಒಂದು ಬಾರಿಗೆ ತಳ್ಳಿದರು... ನಾನು ಹೋಗಿ ಕೊಳದ ತೀರದ ಅಡ್ಡ ಗೋಡೆಯ ಮೇಲೆ ಬಿದ್ದೆ... ತಳ್ಳಿ ಅರಚಿದರು... ಮನುಷ್ಯನಿಗೆ ಹುಚ್ಚು ಒಂದು, ಮಂತ್ರಕ್ಕೆ ಅರ್ಥ ಹೇಳು... ಇಲ್ಲದಿದ್ದರೆ 'ನಾನು ಬ್ರಾಹ್ಮಣನಲ್ಲ' ಎಂದು ಒಪ್ಪಿಕೋ... ನನ್ನನ್ನು ಕೇಳಿದೆಯಲ್ಲಾ, ಎಷ್ಟು ಧೈರ್ಯ ?" ಎಂದು ಕೂಗಿದರು. ಅವರ ಹಿಡಿತದಲ್ಲಿ ಪಾಪ, ಗಣಪತಿಗೆ ದೇಹವೇ ಕಂಪಿಸಿತು. ನಾವು ಅವರೊಂದಿಗೆ ಮಾತನಾಡಲಾಗಲಿಲ್ಲ... ಆ ವೃದ್ಧ ಬಹಳ ಒರಟು ಮನುಷ್ಯ ಎಂದು ಗಣಪತಿಯವರ ಬಳಿಯೇ ಬೇಡಿಕೊಂಡೆವು... 'ಹೇಳಿಬಿಡಪ್ಪ... ಮಂತ್ರಕ್ಕೆ ಅರ್ಥ ಹೇಳಿ ಹೋಗು... ಹಠ ಮಾಡಬೇಡ' ಎಂದು ನಾನೂ ಹತ್ತಿರ ಹೋಗಿ ಹೇಳಿದೆ... ಗಣಪತಿ ನನ್ನನ್ನು ದೃಷ್ಟಿಸಿ ನೋಡಿದರು. ನೋಡಿ, ಮಗುವಿನಂತೆ ರೋದಿಸ ತೊಡಗಿದರು...

—'ನನಗೆ ಮಂತ್ರ ಮಾತ್ರ ಗೊತ್ತು, ಅರ್ಥ ಗೊತ್ತಿಲ್ಲವಲ್ಲ' – ಎಂದು ಅವರು ಅತ್ತಾಗ ಐವತ್ತೂ ವರ್ಷಗಳಿಗೆ ಹಿಂದೆ ಅವರೂ ನಾನೂ ಒಂದು ಕೂಡಿ ವಿದ್ಯಾಭ್ಯಾಸ ಮಾಡಿದುದೆಲ್ಲಾ ನೆನಪಿಗೆ ಬಂದು ನಾನೂ ಅತ್ತೆ.

"ಥಟ್ಟನೆ ನಿಮ್ಮ ತಂದೆ ಘನಪಾಟಿಗಳ ಕೈಗಳನ್ನು ಒದರಿ ತಳ್ಳಿದರು. ಏನು ನಡೆಯುವುದೋ ಎಂದು ಎಲ್ಲರೂ ಅಚ್ಚರಿಗೊಂಡೆವು. ಹಲ್ಲು ಕಡಿಯುತ್ತಾ ಎದೆಯ ಮೇಲಿದ್ದ ಜನಿವಾರವನ್ನು ಕಿತ್ತು ಘನಪಾಟಿಗಳ ಮುಖದ ಮೇಲೆಸೆದು 'ಹೋಗಿ... ನಾನು ಬ್ರಾಹ್ಮಣನಲ್ಲ... ನಾನು ಬ್ರಾಹ್ಮಣನೇ ಅಲ್ಲ' ಎಂದು ಘೋಷಿಸುವಂತೆ ಅರಚಿ ಭರಭರ ನಾಲ್ಕು ಬೀದಿ ಸುತ್ತಿ ಆಗ ಹೋದವರು : 'ಏನಾದರೋ, ಎಲ್ಲಿ ಹೋದರೋ ಎಂದು ನಿನ್ನನ್ನು ವಿಚಾರಿಸಬೇಕೆಂದುಕೊಂಡೆ. ನೀನು ಈ ವಿಷಯವೇ ತಿಳಿಯದು ಎನ್ನುತ್ತಿರುವೆ..." ಎಂದು, ತನಗೆ ಸಂಬಂಧವಿಲ್ಲದ – ಈ ಕಾಲದ ಬ್ರಾಹ್ಮಣರಾದ ತಮಗೆ ಯಾವ ಸಂಬಂಧವೂ ಇಲ್ಲದ – ಗಣಪತಿ ಶಾಸ್ತ್ರಿ ಎಂಬ ಪ್ರತ್ಯೇಕ ವ್ಯಕ್ತಿಯ ವಿಚಾರವಿದು ಎಂದು ಅಂದು ನಡೆದ ಸನ್ನಿವೇಶವನ್ನು ವಿವರಿಸಿದರು ವೆಂಕಟು ಅಯ್ಯರ್.

ವೆಂಕಟು ಅಯ್ಯರ್ ವಿವರಿಸಿದ ಸನ್ನಿವೇಶದಲ್ಲಿ ಅಡಗಿದ್ದ ಒಂದು ಸಾಮಾಜಿಕ ಅವ್ಯವಹಾರದ ಕ್ರೌರ್ಯವನ್ನು ಅಳೆದು ಅರ್ಥಮಾಡಿಕೊಂಡ ವೇದನೆಯಿಂದ ಮೌನವಾಗಿಬಿಟ್ಟ ಶಿವರಾಮನ್. ಅವರಿಂದ ಅಗಲಲಾರದೆ, ಬಾಗಿದ ತಲೆಯಿಂದ ಕಣ್ಣೀರು ಸುರಿಸುತ್ತಾ ಮನೆಯ ಕಡೆ ನಡೆದ.

ಮನೆಗೆ ಹೋಗಿ ಒಂದು ಮೂಲೆಯಲ್ಲಿ ಮಲಗಿ ಚೆನ್ನಾಗಿ ಅಳಬೇಕು ಎಂದು ದಾರಿಯಲ್ಲಿ ಅಂದುಕೊಂಡೇ ಅವನು ಮುಂದೆ ನಡೆದ...

ಆದರೆ ಅಂದು ಅವನು ಮನೆ ಸೇರಿದಾಗ ಹಾಗೆ ಮಾಡಲಿಲ್ಲ. ತಂದೆಯವರ ಅಗಲಿಕೆಯನ್ನು ನೆನೆದು ಅಳುವುದನ್ನು ಕಂಡು 'ಅವಳು' ಕೋಪಿಸಿಕೊಳ್ಳುವಳೇನೋ ಎಂಬ ಭಯದಿಂದ ಅವನು ಆ 'ಆಸೆ'ಯ ಕೈಬಿಟ್ಟ...

— ಹೀನ ಕುಲದಲ್ಲಿ ಹುಟ್ಟಿ ತಪ್ಪಿಗೆ ಅತ್ತರೆ ಅದಕ್ಕೆ ಒಂದು ಅರ್ಥವಿರುತ್ತಿತ್ತು: ಅನುತಾಪವೂ ದೊರೆಯುತ್ತಿತ್ತು. ಉತ್ತಮ ಕುಲದಲ್ಲಿ ಹುಟ್ಟಿಯೂ ಕಲಿಯಲೀಲೆ ವಿಪರೀತವಾದ ತಪ್ಪಿಗೆ ಅಳಲು ಸಾಧ್ಯವೆ? ಅತ್ತರೆ ಅನುತಾಪ ತೋರಿಸುವವರು ಯಾರು?

[ 3 ]

ಶಿವರಾಮನ್ ಆಫೀಸಿನಿಂದ ಹಿಂತಿರುಗುವಾಗ ದಾರಿಯಲ್ಲಿ ಅಡ್ಡಬಂದ ತೆಪ್ಪಕೊಳ ತೀರದ ಶಾಸ್ತ್ರಿಗಳ ಗುಂಪಿನಲ್ಲಿ ಅವನ ದೃಷ್ಟಿ ಇಂದು ಯಾರನ್ನೂ ಹುಡುಕಲಿಲ್ಲ. ಮನೆಗೆ ಬಂದೊಡನೆ ಅಂಚೆಯಲ್ಲಿ ಬಂದ ಆ ಪೇಪರು ಕಂತೆಯಲ್ಲಿ ಪೆನ್ಸಿಲ್ ಮತ್ತು ಪೆನ್ನುಗಳಲ್ಲಿ ಬರೆದಿದ್ದುದನ್ನು, ಕಾಲದ ಪೆಟ್ಟನ್ನು ಹೊತ್ತು ವಯಸ್ಸಾದ ಹೃದಯದಿಂದ ಹೊರ ಹೊಮ್ಮಿದ ಅರ್ಥಪೂರ್ಣವಾದ ವಾಕ್ಯವಿಶೇಷಗಳನ್ನು ತಿಳಿದುಕೊಳ್ಳಬೇಕೆಂದು ನಡೆದಿದ್ದ ಅವನು ಆ ಗುಂಪನ್ನು ಗಮನಿಸಲೇ ಇಲ್ಲ.

ಶಿವರಾಮನ್ ಮನೆಗೆ ಬಂದಾಗ ರಾಜಂ ಅಡುಗೆಮನೆಯಲ್ಲಿದ್ದಳು. ಮಣಿ ಇನ್ನೂ ಮನೆಗೆ ಬಂದಿರಲಿಲ್ಲ. ಅವನಿಗೆ ಮೌಂಟ್‌ರೋಡಿನಲ್ಲಿದ್ದ ದೊಡ್ಡ 'ಷೂ' ಅಂಗಡಿಯಲ್ಲಿ ಸೇಲ್ಸ್‌ಮ್ಯಾನ್ ಕೆಲಸವಾಗಿದ್ದುದರಿಂದ ರಾತ್ರಿ ಎಂಟೂವರೆಗೆ ಬಾಗಿಲು ಮುಚ್ಚಿದ ಮೇಲೆಯೇ ಮನೆಗೆ ಬರಲು ಸಾಧ್ಯ...

ತನ್ನ ಕೋಣೆಗೆ ಹೋಗಿ ಉಡುಪು ಬದಲಾಯಿಸಿ ಮೊದಲನೆಯದಾಗಿ ಕೈಚೀಲವನ್ನು ತೆಗೆದು ಆ ಉದ್ದವಾದ ಕವರಿನೊಳಗಿದ್ದ ಪೇಪರಿನ ಕಟ್ಟನ್ನು ತೆಗೆದು ಅಂತರಂಗವಾಗಿ ಓದತೊಡಗಿದ.

ಅವನು ಓದಿದ ಮೊದಲನೆಯ ವಾಕ್ಯವೇ ಒಂದು ಮಹತ್ತರ ಸಾಹಿತ್ಯದ ಪ್ರಾರಂಭ ವಾಕ್ಯವಾಗಿ ಕಂಡಿತು :

"ಇದೋ ನನ್ನ ಕಣ್ಣುಮುಂದೆ ಸಾವಿರ ಸಂಖ್ಯೆಯ ಜನರು ಸಂಚರಿಸುತ್ತಿದ್ದಾರೆ. ಒಬ್ಬೊಬ್ಬರೂ ಒಂದೊಂದು ರೀತಿಯಿದ್ದಾರೆ. ಒಬ್ಬರಂತೆ ಒಬ್ಬರಿಲ್ಲ. ಸಾವಿರ ಮಂದಿಯೂ ಸಾವಿರ ವಿಧ. ಈ ಮೈದಾನದಲ್ಲಿ ನನಗಿಂತಲೂ ಹಿಂದೆ ಮತ್ತು ಮುಂದೆ ಸಾವಿರಾರು ಸಂಖ್ಯೆಯಲ್ಲಿ ಮನುಷ್ಯರು ಸಂಚರಿಸುತ್ತಿದ್ದಾರೆ. ಚಿಕ್ಕವಯಸ್ಸಿನಲ್ಲಿ "ಮೆರ್ರಿಗೋರೌಂಡಿ"ನಲ್ಲಿ ಮೊದಲಬಾರಿ ಕುಳಿತು ಸುತ್ತಿದಾಗ ಉಂಟಾದ ತಲೆಸುತ್ತಿನಂತೆ ಈ ನಿಮಿಷದಲ್ಲಿ

ಸಾವಿರಾರು ಮಂದಿ ನನ್ನ ಸುತ್ತ ಸಂಚರಿಸುವಾಗ ನಾನು ಒಂದು ಜಾತ್ರೆಯ ಗುಂಪಿನಲ್ಲಿ ದಾರಿ ತಪ್ಪಿ ಸಿಕ್ಕಿಹಾಕಿಕೊಂಡ ಮಗುವಿನಂತೆ ಅಲ್ಲಲ್ಲಿ ನೋಡುತ್ತೇನೆ. ಈ ಸಾವಿರಾರು ಮಂದಿ ಮುಖದಲ್ಲಿ ಪರಿಚಯವಾದ ಮುಖ ಒಂದೂ ಇಲ್ಲ. ನನ್ನನ್ನು ಗಮನಿಸುವ ಮುಖ ಇದರಲ್ಲಿ ಯಾವುದೂ ಇಲ್ಲ ಎಂದು ನೆನೆಸಿಕೊಂಡಾಗ ಪರಮ ಸುಖವೆನಿಸುತ್ತದೆ.

"ಈ ದೆಹಲಿ ಇದೆಯಲ್ಲ. ತುಂಬಾ ಪುರಾತನ ನಗರ. ಅಶೋಕ, ಬಾದಷಹರು, ಬ್ರಿಟಿಷರು – ಈ ದೇಶವನ್ನೇ ಎಷ್ಟೋ ವರ್ಷಗಳಿಂದ ಆಳಿದ ನಗರವಿದು. ಈ ದಿನದಲ್ಲಿ ನಾವೆಲ್ಲಾ ಕುಳಿತು ಸ್ವಾತಂತ್ರ್ಯವನ್ನು ಆಚರಿಸುತ್ತೇವೆ. ಎಷ್ಟೋ ತಲಮಾರುಗಳು ಈ ಲೋಕವನ್ನು ನೋಡುತ್ತಿದೆ. ಈ ನಿಮಿಷ ಜೀವಿಸಿರುವ ಮನುಷ್ಯಕುಲದಲ್ಲಿ ಓರ್ವನು ಕೂಡ ಇನ್ನೂರು ವರ್ಷಗಳ ಹಿಂದೆ ಇರಲಿಲ್ಲ. ಇನ್ನೂರು ವರ್ಷಗಳ ಹಿಂದೆ ಜೀವಿಸಿದ್ದ ಒಂದು ಮನುಷ್ಯ ಜೀವ ಕೂಡ ಈಗ ಇಲ್ಲ. ಅದೊಂದು ಜನ್ಮ ಇದೊಂದು ಜನ್ಮ. ಆ ಜನ್ಮ ಯಾವಾಗ ಹೇಗೆ ಹೋಗಿ ಈ ಜನ್ಮ ಯಾವಾಗ ಹೇಗೆ ಬಂದಿತು ಎಂದು ಯಾರು ಹೇಳಬಲ್ಲರು? ಇದು ಮಾತ್ರ ಸತ್ಯ. ಅದು ಪೂರ್ಣ ಹೊರಟುಹೋಯಿತು. ಇದು ಪೂರ್ಣವಾಗಿ ಬಂತು. ಆಳವಾಗಿ ಯೋಚಿಸದೆ ಸುಮ್ಮನೆ ಹಗುರವಾಗಿ ನೋಡಿದರೆ ಈ ಜಗತ್ತಿನಲ್ಲಿರುವ ಎಲ್ಲವೂ ಒಂದು ಅತಿಶಯವೇ. ಹಾಗೆಯೇ ಈ ವಿಷಯವೂ – ಇನ್ನೂರು ವರ್ಷಗಳ ಹಿಂದೆ ಇದ್ದವರು ಪೂರ್ಣ ಹೋದಮೇಲೆ, ಈಗ ಇರುವವರು ಪೂರ್ಣವಾಗಿ ಬಂದು ಬಿಟ್ಟುದು ಆಶ್ಚರ್ಯವಾಗಿದೆ – ಅವರು ಕ್ರಮೇಣ ಹೋದರು. ಇವರು ಕ್ರಮೇಣ ಬಂದರು. ಇದೇ ರೀತಿ ಹೋಗುವುದು ಬರುವುದು. ಭಗವಂತನ ಇಚ್ಛೆಯಂತೆ ಈ ಕೆಲಸ ಯಾವ ತಡೆಯೂ ಇಲ್ಲದೆ ನಡೆಯುತ್ತಿದೆ. ಮನುಷ್ಯರು ವಿಧಿಯಂತೆ ಹೀಗೆ ನಡೆಯ ಬೇಕು, ನಡೆಯುತ್ತಾರೆ. ಪ್ರಕೃತಿಯಲ್ಲಿ ಸಮಸ್ಯೆಯೇನೂ ಇಲ್ಲ. ಸಮಸ್ಯೆಯೇ ಇಲ್ಲವೆಂದರೆ ಅದು ಸಹಜವಾದುದಲ್ಲ. ಹೀಗೆ ಒಂದು ಸಹಜ ಸಮಸ್ಯೆಯಲ್ಲಿ ನಾನು ಸಿಕ್ಕಿಕೊಂಡೆ. ಹಾಗೆ ಸಿಕ್ಕಿಕೊಳ್ಳುವುದೇ ಜೀವನ... ಸಮಸ್ಯೆ ಪರಿಹಾರವಾಗಲಿಲ್ಲವೆಂದರೆ ಅದಕ್ಕೆ ನಾವೇ ಹೊಣೆ..."

ಆ ಪೇಪರಿನಲ್ಲಿ ಇದುವರೆಗೆ ಪೆನ್ಸಿಲ್‌ನಲ್ಲಿ ಬರೆದಿತ್ತು. ತದನಂತರ ಬರೆದ ಪುಟಗಳನ್ನು ಪೆನ್ನಿನಿಂದ ಬರೆಯಲಾಗಿತ್ತು. ಈ ವ್ಯತ್ಯಾಸವನ್ನು ಒಂದು ಪ್ರತ್ಯೇಕ ಅಧ್ಯಾಯದಂತೆ ತಿಳಿದು ತಾನು ಓದಿದ ಘನ ವಿಚಾರಗಳನ್ನು ಅರ್ಥಪೂರ್ಣವಾಗಿ ಚಿಂತಿಸಲಾರಂಭಿಸಿದ ಶಿವರಾಮನ್... ಅವನ ಚಿಂತನೆಯನ್ನು ನಿಲ್ಲಿಸಿ 'ಈ ಪೆದ್ದು ತಂದೆ ಹೀಗೆಲ್ಲಾ ಆಲೋಚಿಸು ತ್ತಾರೆಯೆ?' ಎಂಬ ಆಶ್ಚರ್ಯ ಮೇಲೆದ್ದಿತು.

ಈ ನಿಮಿಷ ಅವನು ತಂದೆಯ, ಆ ಪೆದ್ದು ಬ್ರಾಹ್ಮಣರ ಗಡ್ಡ ತೆಗೆಯದೆ ರೋಮರಾಶಿ ತುಂಬಿದ, ಮುಂದಿನ ಹಲ್ಲು ಬಿದ್ದು ಹೋದ, ಸಿಡುಬು ಕಲೆಗಳು ತುಂಬಿದ, ಮಾಲು ಗಣ್ಣಿನ ಓರೆನೋಟದಿಂದ ಕೂಡಿದ ಕಪ್ಪಾದ ಮುಖದ ಚಿತ್ರವನ್ನು ಕಲ್ಪನೆ ಮಾಡಿಕೊಂಡು ಕಣ್ಣೆದಿರು ಕಂಡ.

ಲೇಖನ ಕಲೆಯನ್ನೇ ವೃತ್ತಿಯಾಗಿ ವಹಿಸಿಕೊಳ್ಳಬೇಕೆಂಬ ಆಸೆಯಿಂದ ಒಂದು ಪತ್ರಿಕೆಯಲ್ಲಿ ಕೆಲಸ ಮಾಡುವ ತನ್ನ ಚಿಂತನೆಗೆ ಬಾರದ ವಿಚಾರಗಳು, ತನ್ನಿಂದ ರಚಿಸಲು ಕೈಬಾರದ ಕಲೆಯೂ – ಸದಾ ಎಲ್ಲರ ಅಪಮಾನ – ಪರಿಹಾಸಕ್ಕೆ ಒಳಗಾದ ಆ ಬ್ರಾಹ್ಮಣನಿಗೆ ಹೇಗೆ ಸಿದ್ಧಿಸಿತು ಎಂಬ ದಿಗ್ಭ್ರಮೆಗೊಂಡು ಕಂಪಿಸಿ ಅವನು ಮುಂದುವರಿದು ಓದಿದ :

"ನನ್ನ ತಂದೆಯವರ ಮುಖ ಕೂಡ ನನಗೆ ನೆನಪಿಲ್ಲ. ಅವರು ಸತ್ತಾಗ ನನಗೆ ಒಂಭತ್ತು ವರ್ಷ ವಯಸ್ಸು. ನ್ಯಾಯವಾಗಿ ಅದು ನನಗೆ ನೆನಪಿರಬೇಕು. ನಾನು ಪೆದ್ದನಲ್ಲವೆ? ಮರೆತುಬಿಟ್ಟೆ. ಆದರೆ ವಯಸ್ಸಾದಂತೆ ಅವರ ಬಗ್ಗೆ ಎಲ್ಲರೂ ಮಾತನಾಡುತ್ತಿದ್ದುದರಿಂದ ನಾನೂ ಅವರ ಬಗ್ಗೆ ಬಹಳ ತಿಳಿದುಕೊಂಡೆ. ಅವರು ಮಹಾನ್ ಪಂಡಿತರು. ಯಾವ ಮಟ್ಟಕ್ಕೆ ಅವರಿಗೆ ಸಂಸ್ಕೃತದಲ್ಲಿ ಪಾಂಡಿತ್ಯ ಇದ್ದಿತೊ ಆ ಮಟ್ಟಕ್ಕೆ ಮಾತೃಭಾಷೆಯಲ್ಲೂ ಇತ್ತು. ಸುಂದರ ಘನಪಾಟಿಗಳಂತೆ ದೊಡ್ಡವರೆಲ್ಲಾ ಅವರಲ್ಲಿ ವಿದ್ಯಾಭ್ಯಾಸ ಮಾಡುವ ಪುಣ್ಯ ಪಡೆದಿದ್ದರು. ನನಗೆ ಲಭ್ಯವಿಲ್ಲದೆ ಹೋಯಿತು. ತಾಯಿ ಹೇಳುತ್ತಿದ್ದರು : ತಂದೆಯಂತೆ ನಾನೂ ಮಹಾ ಪಂಡಿತನಾಗಬೇಕೆಂದು. ಅದೇ ತಂದೆಯವರ ಆಸೆಯಾಗಿತ್ತಂತೆ. ಉಂ... ಅದೆಲ್ಲಾ ಆ ಕಾಲದ ಬ್ರಾಹ್ಮಣ ದಂಪತಿಗಳ ಆದರ್ಶ, ತಮ್ಮ ಮಗ ಬ್ರಾಹ್ಮಣ ಧರ್ಮದ ಪ್ರತಿನಿಧಿಯಾಗಬೇಕೆಂಬುದು. ಈ ಕಾಲದಲ್ಲಿ ಯಾರಿದ್ದಾರೆ? ನಾನು ಯಾಕೆ ಯಾರನ್ನೊ ಹುಡುಕಬೇಕು. ಅಂತಹವರ ಮಗನಾದ ನಾನು ಅವರಂತೆ ಇದ್ದೇನೆಯೆ?

"ನಾನು ಎಷ್ಟೋ ಹೇಳಿದೆ : ಆ 'ಷೂ' ಅಂಗಡಿ ಕೆಲಸ ಬೇಡವೆಂದು. ಮಣಿ ಕೇಳಿದನೆ? ನಿಮಗೇನೂ ತಿಳಿಯದು. ಇದಕ್ಕೆ ನಾನು ಎಷ್ಟು ಕಷ್ಟಪಟ್ಟೆ... ತಿಂಗಳಿಗೆ ಇನ್ನೂರ ಐವತ್ತು ರೂಪಾಯಿ ಸಂಬಳ. ವರ್ಷಕ್ಕೆ ಮೂರು ತಿಂಗಳು ಬೋನಸ್. ಈ ಉದ್ಯೋಗದಲ್ಲಿ ಕೊರತೆಯಾಗಿರುವುದೇನು! ಅಲ್ಲಿ ಹಸುವನ್ನು ಕತ್ತರಿಸಿ ತೊಗಲು ಸುಲಿದು ಚಪ್ಪಲಿ ಹೊಲೆಯುವ ಕೆಲಸವೇನಲ್ಲ. ಪ್ಯಾಕೇಟ್‌ನಲ್ಲಿ ಬರುವ ಚಪ್ಪಲಿ – ಷೂಗಳನ್ನು ತೆಗೆದು ಮಾರುವುದಷ್ಟೆ. ನಿಮಗೆ ಏನೂ ತಿಳಿಯದು. ನಿಮ್ಮದು ಪಂಚಾಂಗ ವೃತ್ತಿ. ಸುಮ್ಮನಿರಿ' ಎಂದು ನನ್ನ ಬಾಯನ್ನು ಮುಚ್ಚಿಸಿ ಹೋಗಿಬಿಟ್ಟ ಆ ಕೆಲಸಕ್ಕೆ. ಅದು ಅವನ ತಪ್ಪೇನು? ಇಲ್ಲ ಅದೊಂದು ತಪ್ಪು ಎಂದು ಆಲೋಚಿಸಿದರೆ ಈ ಕಲಿಗಾಲದಲ್ಲಿ ಎಲ್ಲವೂ ಸರಿಯೆಂದೇ ತೋರುತ್ತದೆ. ಯಾಕೆಂದರೆ ನನ್ನ ಮಕ್ಕಳು ನನ್ನಂತೆ ಜುಟ್ಟು ಬಿಟ್ಟು, ಪರಟು ಧರಿಸಲು, ಚಪ್ಪಲಿ ಧರಿಸುವ ಹಕ್ಕಿಲ್ಲದೆ ಈ ಕಾಲದಲ್ಲಿ ಎಲ್ಲರೂ ನೋಡಿ ಪರಿಹಾಸ ಮಾಡುವ ಗುಂಪಿಗೆ ಒಳಗಾಗಲೆಂದು ನಾನು ಆಸೆಪಡಲಿಲ್ಲ. ಅದರಿಂದಲೇ ಅವರಿಗೆ ಇಂಗ್ಲೀಷ್ ವಿದ್ಯಾಭ್ಯಾಸ ಕೊಡಿಸಿದೆ. ಕ್ರಾಪ್ ಕಟಿಂಗ್ ಮಾಡಿಸಿಕೊಳ್ಳಲು ಹೇಳಿದೆ. ಇದಕ್ಕೆ ಅರ್ಥವೇನು? ನಾನು ಹೇಗಿರಬೇಕೆಂದು ಆಸೆಪಟ್ಟು ಹಾಗೆ ಇರಲಾಗಲಿಲ್ಲವೋ ಹಾಗೆಯೇ ಅವರನ್ನೂ ಕಾಡಿ ತೃಪ್ತಿ ಹೊಂದಿದೆನೇನು? ಹೌದು; 'ಅತ್ತ ಹೋಗಿಬಿಡು, ಅತ್ತ

ಹೋಗಿಯೇಬಿಡು' ಎಂದು ಹೇಳಿ ನಾನೇ ಅತ್ತ ಹೋಗಿಬಿಟ್ಟೆ. ಒಂದು ಕುಲ ಕ್ಷೀಣಸ್ಥಿತಿಗೆ ಬಂದುದು ಎಷ್ಟು ಸುಳ್ಳೋ ಅಷ್ಟೇ ಸುಳ್ಳು ಇನ್ನೊಂದು ಕುಲ ಉತ್ತಮ ಸ್ಥಿತಿಗೇರಿದುದು. ಇದು ಯಾವಾಗ ಅರ್ಥವಾಗುವುದೆಂದರೆ ಕ್ಷೀಣ ಸ್ಥಿತಿಗೆ ಬಂದು ಪ್ರತ್ಯೇಕಿಸಲ್ಪಟ್ಟ ಕುಲದಂತಯೇ ಉತ್ತಮ ಸ್ಥಿತಿಗೇರಿ ಪ್ರತ್ಯೇಕಿಸಲ್ಪಟ್ಟ ಕುಲಪಡುವ ಕಷ್ಟದಲ್ಲಿ. ನನ್ನ ಮಕ್ಕಳು ಹೆಸರಿಗೆ ಉತ್ತಮ ಕುಲದವರೆಂದುಕೊಂಡರೂ ಊರಿನವರಿಗಾಗಿ ಜನಿವಾರ ಹಾಕಿಕೊಂಡರೆ ಅದೇ ದೊಡ್ಡದು! ನನ್ನಂತೆ ಪ್ರತ್ಯೇಕಿಸಲ್ಪಟ್ಟ ಕುಲದವರಾಗಿ ಬಿಡುವುದಿಲ್ಲ. ಆದರೆ ಅವರೇ ನನ್ನನ್ನು ಪ್ರತ್ಯೇಕಿಸಿಬಿಟ್ಟರಲ್ಲ, ನನ್ನನ್ನು ಅಪ್ಪಾ ಎಂದು ಕರೆಯಲು, ಅವರ ಸಮವಾಗಿರುವವರ ಮಧ್ಯೆ ನನ್ನನ್ನು ಅಪ್ಪಾ ಎಂದು ತೋರಿಸುವುದಕ್ಕೆ ಎಷ್ಟು ನಾಚಿಕೆಪಡುತ್ತಿದ್ದರೆಂಬುದನ್ನು ಎಷ್ಟೋ ಬಾರಿ ಕಂಡಿದ್ದೇನೆ.

"ಉಂ... ಮುಖವರಿಯದ ತಂದೆಯನ್ನು ನೆನೆದು ನಾನು ಹೆಮ್ಮೆಪಟ್ಟುಕೊಂಡಿದ್ದೇನೆ... ಕಣ್ಣೆದಿರೇ ಇರುವ ತಂದೆಯನ್ನು ಕಂಡು ನನ್ನ ಮಕ್ಕಳು ನಾಚಿಕೆಪಡುತ್ತಿದ್ದಾರೆ! ಅದು ಸರಿ, ನಾನೇ ನನ್ನನ್ನು ಕಂಡು ನಾಚಿಕೆಪಡುವಾಗ ಅವರು ನಾಚುವುದು ತಪ್ಪೆ?"

— ಮತ್ತೆ ಇಲ್ಲಿಂದ ಪೆನ್ಸಿಲ್‌ನಿಂದ ಬರೆದಿದ್ದುದು ಪ್ರಾರಂಭವಾಯಿತು. ಶಿವ ರಾಮನ್ ಕಣ್ಣುಗಳಲ್ಲಿ ಕಣ್ಣೀರು ತುಂಬಿ ಆ ಬರೆಹ ಮಂಜಾಯಿತು. ಅವನು ಕೆಲವು ಕ್ಷಣ ವಸ್ತ್ರದಿಂದ ಕಣ್ಣುಗಳನ್ನು ಮುಚ್ಚಿಕೊಂಡ. ಅಳುವೇನು? ನಂತರ ಒಂದು ಬಾರಿ ನಿಟ್ಟುಸಿರು ಬಿಟ್ಟು ಕೆಂಪಾದ ಕಣ್ಣುಗಳಿಂದ, ಕಂಪಿಸುವ ತುಟಿಗಳಿಂದ ಓದಲಾರಂಭಿಸಿದ.

"ಭಾರತಿಯಾರ್ ತುಂಬ ಕೋಪದಿಂದಲೇ ಕಠಿಣವಾಗಿ ನುಡಿದಿದ್ದಾರೆ 'ಅರ್ಥ ತಿಳಿಯದೆ ಮಂತ್ರ ಹೇಳುವುದಕ್ಕೆ ಬದಲಾಗಿ ಕುಲಗೆಟ್ಟು ಹೋಗಬಹುದೆಂದು.' ಒಂದು ಹತ್ತು ವರ್ಷಕ್ಕೆ ಹಿಂದೆ ಇದನ್ನು ಎಲ್ಲಿಯೋ ಓದಿದ್ದೆ. ನಾನು ಹೇಳುವ ಮಂತ್ರಗಳಿಗೆಲ್ಲಾ ನನಗೆ ಅರ್ಥ ಗೊತ್ತೆ ಎಂದು ಯೋಚಿಸಿಕೊಂಡೆ. ಆ ದಿನ ಪೂರ್ತಿ ಮುಖವರಿಯದ ನನ್ನ ತಂದೆಯನ್ನೂ ಆ ಮಹಾಪಂಡಿತರನ್ನೂ ನೆನಪಿಸಿಕೊಂಡು ನಾನು ಅತ್ತೆ. ಆ ಮಹಾ ಪಂಡಿತರ ಬಳಿ — ನನ್ನ ತಂದೆಯವರ ಬಳಿ — ಓದಿದ ಸುಂದರ ಘನಪಾಟಿಗಳೂ ಮಹಾ ಪಂಡಿತರೇ. ಅವರಲ್ಲಿ ವಿದ್ಯೆ ಕಲಿತವನು ನಾನು. ಆದರೆ ನನಗೆ ಅವರಲ್ಲಿ ಆಚಾರ್ಯರೆಂಬ ಭಕ್ತಿಗೆ ಬದಲಾಗಿ ಹೊಡೆದಾರು ಎಂಬ ಭಯವೇ ಹೆಚ್ಚಾಗಿತ್ತು. ಒಂದು ಬಾರಿ ಬಿಟ್ಟು ಮತ್ತೊಂದು ಬಾರಿ ಕೇಳಿದರೆ ಅವರಿಗೆ ಸಹಿಸಲಾಗದ ಕೋಪ ಬರುತ್ತಿತ್ತು. ಆ ಭಯದಿಂದ ಅವರು ಒಂದು ಬಾರಿ ಹೇಳುವುದನ್ನು ಕೂಡ ನಾನು ಸರಿಯಾಗಿ ಅರ್ಥ ಮಾಡಿಕೊಳ್ಳಲಿಲ್ಲ. ಗಿಳಿಯಂತೆ ವೇದಾಭ್ಯಾಸ ಮಾಡಿದೆ. ಆಗ ಅದು ನನಗೆ ತಪ್ಪು ಎನಿಸಲಿಲ್ಲ...

"...ಮಂತ್ರಗಳು ದೈವಿಕವಾದ ಪುನೀತವಾದ ಪವಿತ್ರವಾದ ವಿಷಯಗಳನ್ನು ಹೇಳುತ್ತವೆಯೆಂಬ ನಂಬಿಕೆಯಿಂದ ನಾನು ಅವನ್ನು ಮನನ ಮಾಡಿದೆ. 'ತಾಯಿಯ ಹಾಲಿನಲ್ಲಿ ಯಾವ ಯಾವ ವಿಟಮಿನ್ ಇವೆಯೆಂದು ತಿಳಿದು ಮಗು ಹಾಲು ಕುಡಿಯುತ್ತದೆಯೇನು? ಆದರೂ ಅದು ಆವಶ್ಯಕವಲ್ಲವೆ? ರೋಗಿಗೆ ಔಷಧ ಮುಖ್ಯವೇ ಹೊರತು

ಒಂದೊಂದು ಮಾತ್ರೆಯಲ್ಲೂ ಯಾವ ರಸ ಕೂಡಿದೆಯೆಂಬ ಜ್ಞಾನವು ಅವಶ್ಯಕವೆ? ಹಾಗೆಯೇ ಮಂತ್ರಗಳೂ ನಿನಗೆ ಅವರ ಅವಶ್ಯಕತೆಯಿದೆ. ಅದನ್ನು ಜಪಿಸುವುದರ ಮೂಲಕ ಅದಕ್ಕೆ ಮಿತ್ರವಾದ ಫಲಗಳು ಲಭಿಸುತ್ತವೆ'ಯೆಂದು ಮಹಾಮೇಧಾವಿಯೊಬ್ಬರು ಬರೆದಿದ್ದರು. ಅದನ್ನು ಓದಿದ ನಂತರ ನನಗೆ ಸಮಾಧಾನವೆನಿಸಿತು. ಆದರೆ. ಆ ಜ್ಞಾನಿಯು ಈ ವಾದ ನನಗೆ ಅವಶ್ಯಕವಾದ ವೇಳೆಯಲ್ಲಿ ಸಹಾಯ ಮಾಡಲಿಲ್ಲ......

"ಒಂದು ಬಾರಿ ವಕೀಲ್ ರಾಘವಯ್ಯರ್ ಮನೆಗೆ ತರ್ಪಣ ಬಿಡಿಸಲು ಹೋಗಿದ್ದೆ. ಅವರು ಬಹಳ ದೊಡ್ಡ ಮನುಷ್ಯರು. ನನ್ನ ತಂದೆಯವರ ಮೇಲಿಟ್ಟಿದ್ದ ಭಕ್ತಿಯನ್ನು ಯೋಗ್ಯತೆಯಿಲ್ಲದ ನನ್ನ ಮೇಲೆಯೂ ಹಾಗೆಯೇ ಇಟ್ಟಿದ್ದರು. ಕಳೆದ ವರ್ಷ ಒಂದು ಬಾರಿ ಅವರ ಮನೆಗೆ ಹೋಗಿದ್ದಾಗ, ಅವರ ಸೋದರಳಿಯ, ವೈದ್ಯನಾಥ್ ಅಯ್ಯರ್ ಎಂಬುವವರು ದೆಹಲಿಯಿಂದ ಬಂದಿದ್ದರು. ಅವರೂ ಆ ದಿನ ತರ್ಪಣ ಬಿಡಬೇಕಾಗಿತ್ತು. ಅವರನ್ನು ನೋಡಿದರೆ ವ್ಯಕ್ತಿ ವಿದೇಶೀಯರಂತಿದ್ದರು. ಆ ರೇಷ್ಮೆ ಪಂಚೆಯನ್ನು ಅವರು ಕಟ್ಟಿದ್ದ ರೀತಿ ನೋಡಿಯೇ ಇವರಿಗೆ ಪಂಚೆ ಕಟ್ಟಿ ಅಭ್ಯಾಸವಿಲ್ಲವೆಂದುಕೊಂಡೆ. ನಾಲ್ಕು ಅಂಗುಲ ಜರತಾರಿ ಪಂಚೆ. ರೇಷ್ಮೆ ವಸ್ತ್ರ ಉಟ್ಟು ಮಹಡಿಮೇಲಿಂದ ಇಳಿದು ಬರುವಾಗ ಕಾಲುಗಳಲ್ಲಿ ಮಿರುಗುವ ಸ್ಲಿಪರ್ಸ್ ಬೇರೆ... ಮಾಡುವುದೇನು? ಕಾಲ!

"...ನಾನು ಮುಖ ಕಿವಿಚಿ 'ತರ್ಪಣ ಬಿಡುವಾಗ, ಅವನ್ನು ತೆಗೆಯಬೇಕು' ಎಂದು ಹೇಳಿದೆ. 'ಐ ಆಂ ಸಾರಿ' ಎಂದು ಮರೆವಿಗಾಗಿ ಅವರೂ ಅಪಮಾನಗೊಂಡರು. ನಾನು 'ಇಟ್ ಈಸ್ ಆಲ್ ರೈಟ್' ಎಂದೆ... ನಾನೂ ಆಗಾಗ ಒಂದೆರಡು ಇಂಗ್ಲೀಷು ಪದಗಳನ್ನು ಜೋಡಿಸಿ ಮಾತನಾಡುತ್ತಿದ್ದೆ...ಜಗತ್ತು ನನ್ನನ್ನು ಪ್ರತ್ಯೇಕಿಸಿಟ್ಟಿದ್ದರೂ ಓಡೋಡಿ ಬಂದು ಅಂಟಿಕೊಳ್ಳುವ ಗುಣ ಅದು.

"ನಾನು ಆ ದಿನ ಇನ್ನೂ ಕೆಲವು ಕಡೆ ಹೋಗಬೇಕಾಗಿತ್ತು. ಅವಸರವಾಗಿ ಕರ್ತವ್ಯ ಮುಗಿಸಿ ಏಳುವಾಗ ನೋಡಿದರೆ ದಕ್ಷಿಣೆ ಕಡಿಮೆಯಾಗಿತ್ತು. 'ಈ ಮನುಷ್ಯನಿಗೆ ಏನೂ ತಿಳಿಯದಲ್ಲಾ' ಎಂಬ ಅಲಕ್ಷ್ಯದಿಂದ 'ಏನು ಸ್ವಾಮಿ ದಕ್ಷಿಣೆ ಕಡಿಮೆಯಿದೆಯಲ್ಲಾ' ಎಂದೆ. ಅವರು ನನ್ನನ್ನು ನೋಡಿ ನಗುತ್ತಾ 'ಮಂತ್ರವೂ ಕಡಿಮೆಯಾಗಿಯೇ ಇತ್ತಲ್ಲ' ಎಂದರು... ಅಂದಿನ ದಿನದಂತೆ ನಾನು ಬಾಳಿನಲ್ಲೆ ಅಷ್ಟು ಅವಮಾನಪಟ್ಟಿದ್ದಿಲ್ಲ. ಆ ಮೇಲೆ ಅಲ್ಲವೆ ನನಗೆ ಗೊತ್ತಾದುದು ಅವರು ದೆಹಲಿಯಲ್ಲಿ ಸಂಸ್ಕೃತದಲ್ಲಿ ದೊಡ್ಡ ಪ್ರೊಫೆಸರೆಂದು...

"ಅವರು ನನ್ನನ್ನು ಕೇಳಿದರು : 'ನಿಮ್ಮ ಪೀಠಕ್ಕೆ ನಾವಿಟ್ಟಿರುವ ಗೌರವವನ್ನು ನೀವು ರಕ್ಷಿಸಿಕೊಳ್ಳಬೇಡವೆ? ಅರ್ಥ ತಿಳಿಯದೆ ಮಂತ್ರ ಹೇಳಬಹುದೆ...?" ಎಂದು. ನಾನು ಹೇಳಿದೆ 'ಔಷಧ ಸೇವಿಸಿದರೆ ಸಾಕು ಅದರಿಂದ ಗುಣವುಂಟಾಗುತ್ತದೆ. ಔಷಧದಲ್ಲಿ ಏನಿದೆ ಎಂದು ತಿಳಿದರೇನು ಬಿಟ್ಟರೇನು' ಎಂದು ಯಾವಾಗಲೋ ಓದಿದ್ದುದನ್ನು ಎತ್ತಿ ಹೇಳಿದೆ. ಅವರು ನನ್ನನ್ನು ನೋಡಿ ನಗುತ್ತಲೇ 'ಔಷಧ ಕುಡಿಯುವುವವನಿಗೆ ತಿಳಿಯ

ದಿದ್ದರೆ ತೊಂದರೆಯಿಲ್ಲ. ಅದನ್ನು ಕೊಡುವವರಿಗೆ ತಿಳಿದಿರಬೇಕಿಲ್ಲ?' ಎಂದರು...... ಒಂದು ನಿಮಿಷ ಆಲೋಚಿಸಿ ನೋಡಿದೆ. ಏನು ಹೇಳುವುದೆಂದೇ ತಿಳಿಯಲಿಲ್ಲ...... 'ಕ್ಷಮಿಸಿ ಸ್ವಾಮಿ' ಎಂದು ಕೈಯೆತ್ತಿ ನಮಸ್ಕರಿಸಿ ಸೈಕಲ್ ಹತ್ತಿ ವೇಗವಾಗಿ ಹಿಂತಿರುಗಿದೆ.

— ಗಂಟೆ ಎಂಟಾಗಿತ್ತು. ರಾಜಂ ಅಡುಗೆ ಮನೆಯಿಂದ ಕೋಣೆಗೆ ಬಂದು ಅವನ ಬೆನ್ನಿನ ಮೇಲೆ ಬಾಗಿ ತೋಳಿನ ಪಕ್ಕ ತಲೆಯಿಟ್ಟು ಅವನು ಓದುತ್ತಿದದ ಪೇಪರುಗಳನ್ನು ನೋಡಿದರು — ಏನೋ ಆಫೀಸು ವ್ಯವಹಾರವೆಂಬ ಅಲಕ್ಷ್ಯದಿಂದ "ಇನ್ನೂ ಮುಗಿಯಲಿಲ್ಲವೇ? ಊಟಕ್ಕೆ ಏಳುತ್ತೀರಾ ಎಂಬ ಮಾತು ಕೇಳಿ ಅವನ ಗಮನ ಚದುರಿ ಅವಳನ್ನು ನೋಡಿದ.

"ಮಣಿಯೂ ಬರಲಿ ಬಿಡು" ಎಂದು ಭಯದಿಂದ ಕೂಡಿದ ಮಂದಹಾಸದೊಂದಿಗೆ ಅವನು ದೈನ್ಯವಾಗಿ ಹೇಳಿದ.

"ಈ ಕಸವನ್ನೆಲ್ಲಾ ಆಫೀಸಿನಲ್ಲಿಟ್ಟುಕೊಳ್ಳಬಾರದೇ" ಎಂದು ಸಿಡಿಮಿಡಿಗೊಂಡು ಮೇಜಿನ ಮೇಲಿದ್ದ ಒಂದು ವಾರ ಪತ್ರಿಕೆಯನ್ನು ಎತ್ತಿ ಅದನ್ನು ತೆಗೆದು ಗೋಡೆಗೆ ಬಾಗಿ ಕುಳಿತಳು ರಾಜಂ. ಅವನು ಮುಂದಿನ ಪುಟವನ್ನು ತಿರುಗಿಸಿದ.

"ಅರುವತ್ತು ವರ್ಷವಾಗಿ ಒದರಿಕೊಂಡೇ ಕಾಲ ಕಳೆದಿದ್ದೇನೆ. ನನ್ನಂತಹ ಮನುಷ್ಯರ ದೆಶೆಯಿಂದ ಬ್ರಾಹ್ಮಣ ಧರ್ಮವೇ ಅಪಮಾನಗೊಂಡಿತು. ಪ್ರತಿದಿನ ಪ್ರತಿವೇಳೆ ಸಂಧ್ಯಾ ವಂದನೆ ಮಾಡುವಾಗಲೆಲ್ಲಾ ಏನೋ ತಪ್ಪು ಮಾಡಿದವನಂತೆ ಒಂದು ಆತಂಕ. ಸುಳ್ಳು ಬದುಕು ಬದುಕಿದಂತೆ ಭಾವನೆ... ಶಾಸ್ತ್ರಗಳು, ವೇದಗಳು ಎಲ್ಲಾ ಈ ಕಾಲದಿಂದ ಮೌಲ್ಯ ಕಳೆದುಕೊಂಡುವೆಂದು ನಾನು ಹೇಳಲಾರೆ. ಅವಕ್ಕೆ ತಕ್ಕ ಗೌರವವನ್ನು ಮರ್ಯಾದೆಯನ್ನು ನಾವೇ ಅರ್ಥಮಾಡಿಕೊಳ್ಳಲಿಲ್ಲವೆಂದು ನನ್ನ ತಿಳುವಳಿಕೆ. ಈ ಒಂದು ತಿಂಗಳಿಂದ ನಾನು ಒಬ್ಬ ಮನುಷ್ಯನೆಂದು ನನಗೆ ಅರ್ಥವಾಗುತ್ತಿದೆ. ಇದಕ್ಕೆ ಮುಂಚೆ ನಾಟಕದಲ್ಲಿ ಬರುವಂತೆ ವೇಷಧಾರಿಯಾಗಿ, ಯಾರೋ ಬರೆದುಕೊಟ್ಟುದನ್ನು ಹೇಳುವಂತೆ ಮಂತ್ರಗಳನ್ನು ಮನಸ್ಸಿನಲ್ಲಿ ತಿಳಿಯದೆ ಬಾಯಲ್ಲಿ ಒದರಿಕೊಂಡು ತಿರುಗಿದೆ... ನನಗೆ ತಿಳಿದವರು ಯಾರಾದರೂ ಈಗ ನನ್ನನ್ನು ನೋಡಿದರೆ ಅವರಿಗೆ ಪರಿಚಯವಿರುವ ಗಣಪತಿಶಾಸ್ತ್ರಿ ನಾನೇ ಎಂದು ಹೇಳಿದರೆ ನಂಬುವುದಿಲ್ಲ. ಎಲ್ಲಿಯಾದರೂ ಕನ್ನಡಿಯಲ್ಲಿ ನನ್ನ ರೂಪ ಥಟ್ಟನೆ ಕಂಡರೆ ನನಗೇ ನಂಬಿಕೆ ಬರುವುದಿಲ್ಲ. ಹೌದು ನನ್ನ ಮನಸ್ಸಿನಲ್ಲಿರುವ ನನ್ನ ರೂಪ ಜುಟ್ಟು ಬಿಟ್ಟಿದೆ. ಕಚ್ಚೆ ಪಂಚೆಯುಟ್ಟಿದೆ... ಅರವತ್ತು ವರ್ಷಗಳ ನೆನಪು ಅಷ್ಟು ಶೀಘ್ರ ಬದಲಾವಣೆ ಹೊಂದುವುದೇ? ಉಂ... ನೆನಪಷ್ಟೇ...

"ಈಗ ನಾನು ಬ್ರಾಹ್ಮಣನೂ ಅಲ್ಲ, ಶಾಸ್ತ್ರಿಯೂ ಅಲ್ಲ. ನನಗೆ, ನನ್ನ ಮನಸ್ಸಾಕ್ಷಿಗೆ ದ್ರೋಹ ತಿಳಿಯದ ನ್ಯಾಯವಾದ ಮನುಷ್ಯ ನಾನು! ನಾನು ಹುಟ್ಟಿದ ಕುಲವನ್ನು ಬಹಳವಾಗಿ ಗೌರವಿಸುತ್ತೇನೆ. ಬಹಳ ದೊಡ್ಡವರು ಮಾಡಲೇಬೇಕಾದ ಕೆಲಸವನ್ನೆಲ್ಲಾ ನಕಲಿತನದಿಂದ ನಾನು ಮಾಡುವುದೂ ಅಂತಹವರನ್ನು ನಾನು ಗೌರವಿಸುವುದೂ

ಆಗದು. ಎಲ್ಲರೂ ನನ್ನನ್ನು 'ಕ್ರ್ಯಾಕ್' ಎಂದು ಹೇಳುತ್ತಾರೆ ಈಗಲೂ... ಹೇಳಿಕೊಳ್ಳಲಿ... ಅಂದು ತೆಪ್ಪ ಕೊಳದ ತೀರದಿಂದ ಬಂದ ರೀತಿಯನ್ನು ನೋಡಿದವರು ನನಗೆ ಹುಚ್ಚೆಂದು ಭಾವಿಸಿರಬಹುದು. ಸುಂದರ ಘನಪಾಟಿಯವರಂತೆ ಇರುವವರಿಗೆ ಪುರೋಹಿತವೃತ್ತಿ ಗೌರವವಾದ ಜೀವನ, ಅವರು ನನ್ನನ್ನು ಹೇಗಾದರೂ ನಿಂದಿಸಿರಲಿ, ಅವರನ್ನು ನೆನೆದು ನಮಸ್ಕಾರ ಮಾಡುತ್ತೇನೆ. ನನ್ನ ಕಣ್ತೆರೆದ ಗುರು ಅವರೇ. ಈ ಜಗತ್ತೇ ಅವರ ರೂಪದಲ್ಲಿ ಬಂದು ನನ್ನನ್ನು ಹಿಡಿದು 'ನೀನು ಬ್ರಾಹ್ಮಣನೇ ಹೇಳು. ಈ ಮಂತ್ರಕ್ಕೆ ಅರ್ಥ ತಿಳಿಯದವನು... ನೀನು ಬ್ರಾಹ್ಮಣನೇ ಹೇಳು' ಎಂದು ಅಲುಗಾಡಿಸುವಂತಿತ್ತು... ಅವರೇ ನನಗೆ ಬ್ರಹ್ಮೋಪದೇಶ ಮಾಡಿಸಿ ಜನಿವಾರ ಹಾಕಿದವರು... ಅವರು ಹೇಳಿಕೊಟ್ಟುದನ್ನೇ ನಾನು ಇಷ್ಟು ದಿನವೂ ಹೇಳುತ್ತಿದ್ದೆ. ಅದು ತಪ್ಪು ಎಂದು ಅವರೇ ಹೇಳಿಬಿಟ್ಟರು. ಹೇಗೆ ಆಲೋಚಿಸಿದರೂ ಅವರೇ ನನಗೆ ಗುರುವರ್ಯರು. ಅವರಿಗೆ ನನ್ನ ನಮಸ್ಕಾರ.

"ಈಗ ನಾನು ಕ್ರಾಪ್ ಬಿಟ್ಟಿದ್ದೇನೆ. ಷರಟು ಹಾಕಿದ್ದೇನೆ. ಚಪ್ಪಲಿ ಧರಿಸುತ್ತೇನೆ. ಇದೆಲ್ಲಾ ಚೆನ್ನಾಗಿಯೇ ಇದೆ. ನೆನೆಸಿಕೊಂಡರೆ ನನಗೆ ನಗು ಬರುತ್ತೆ. ಶಾಸ್ತ್ರಿಗಳಾದರೆ ಚಪ್ಪಲಿ ಹಾಕಬಾರದಂತಲ್ಲ. ಆದರೆ ಸೈಕಲ್ ಸವಾರಿ ಮಾಡಬಹುದಂತೆ. ನನ್ನ ಸೈಕಲ್ ನಲವತ್ತು ರೂಪಾಯಿಗೆ ಶಿವರಾಮನೇ ತೆಗೆದುಕೊಟ್ಟ. ಕೊಳ್ಳುವಾಗ ಅದು ಹಳೆಯದು... ಈಗ ಅದನ್ನು ಯಾರು ಉಪಯೋಗಿಸುತ್ತಾರೆ? ಶಿವರಾಮನೇ, ಮಣಿಯೇ... ಹಳೆಯದೂ ಉಪಯೋಗವುಂಟು. ಮನುಷ್ಯನಾದರೆ ಸಾಯುವವರೆಗೆ – "

ಮಲಗಿದ್ದ ಶಿವರಾಮನ್ ಗೋಡೆಗೆ ಒರಗಿಸಿದ್ದ ಸೈಕಲನ್ನು ತಲೆಯೆತ್ತಿ ನೋಡಿದ. ಅವನ ಮುಖವನ್ನು ನೋಡಿ ಅವನ ದೃಷ್ಟಿಯಿಟ್ಟಕಡೆ ಮುಖ ತಿರುಗಿಸಿ, ಗೋಡೆಗೆ ಒರಗಿಸಿದ್ದ ಗಣಪತಿ ಶಾಸ್ತ್ರಿಗಳ ಸೈಕಲ್ಲನ್ನು ರಾಜಂ ಕೂಡಾ ನೋಡಿದಳು. ಆ ನಿಮಿಷ ಮಾತೇ ಇಲ್ಲದ ಮೌನದಿಂದ, ಅವರಿಬ್ಬರೂ ಒಂದೇ ವಿಚಾರವನ್ನು ಕುರಿತು ಪರಸ್ಪರ ಕಸಿವಿಸಿಯನ್ನು ಹಂಚಿಕೊಂಡರು. ಥಟ್ಟನೆ ಅಳು ಪ್ರಾರಂಭಿಸಿ ರಾಜಂ ಮೌನವನ್ನು ಕದಡಿದಳು.

"ಈ ಹಾಳು ಬ್ರಾಹ್ಮಣ ಎಲ್ಲಿಗೆ ಹೋಗಿ ತೊಲಗಿದರೋ? ಒಂದು ವರ್ತಮಾನವೂ ಇಲ್ಲ... ದಿನಗಳೆದಂತೆ ಮನಸ್ಸಿಗೆ ದುಃಖವೆನಿಸುತ್ತೆ. ಈಗ ನಾನು ಮನಬಿಚ್ಚಿ ಹೇಳುತ್ತೇನೆ. ಅವರಿಲ್ಲದೆ ಈ ಮನೆಯೇ ನನಗೆ ಶೂನ್ಯವಾಗಿ ಕಾಣುತ್ತದೆ. ನೀವೇನಾದರೂ ಜಗಳವಾಡಿದಿರಾ? ಹೀಗೆ ಇಬ್ಬರು ಮಕ್ಕಳು ಬೆಳೆದಿದ್ದು ಅನಾಥರಾಗಿ ಓಡಿಹೋಗಲು ಅವರ ವಿಧಿಯಾಗಿತ್ತೇನೋ?" ಎಂದು ಕೈಯಲ್ಲಿದ್ದ ವಾರಪತ್ರಿಕೆಯಿಂದ ಮುಖವನ್ನು ಮುಚ್ಚಿಕೊಂಡು ಅತ್ತಳು ರಾಜಂ.

ಏನೂ ತಿಳಿಯದ ಪೆದ್ದು' ಎಂದು ತಾನು ತೀರ್ಮಾನಕ್ಕೆ ಬಂದಿದ್ದ ತನ್ನ ತಂದೆಯ ಸತ್ವಭಾವಗಳನ್ನು ಅರಿತು ದಿಗ್ಭ್ರಮೆಗೊಂಡ ಹಾಗೆಯೇ ಅವರ ಮೇಲೆ ದ್ವೇಷದ ಹೊರತು ಬೇರಾವ ಗೌರವ ಬಂಧನವೂ ಇಲ್ಲದವಳು ರಾಜಂ ಎಂದು ಇದುವರೆಗೆ ತಾನು

ಭಾವಿಸಿದ್ದ. ಈಗ ಅವಳ ನಿಜಭಾವ ಅರಿತು, ಎಲ್ಲಾ ವಿಷಯಗಳಲ್ಲೂ ಏನೋ ಒಂದು ಮಹತ್ವವಿದೆಯೆಂದು ತಿಳಿದು ಶಿವರಾಮನ್ ರೋಮಾಂಚನಗೊಂಡ. ಮೇಜಿನ ಮೇಲಿದ್ದ ಪೇಪರು ಕಟ್ಟಿನಲ್ಲಿ ತಾನು ಓದಿದ್ದ ಪುಟಗಳನ್ನು ಎತ್ತಿ ಮೌನವಾಗಿ ಅವಳ ಮುಂದಿಟ್ಟ.

ಆಗ ಅವನ ಕಣ್ಣುಗಳಲ್ಲಿ ಧೈರ್ಯವಾಗಿ ಎರಡು ಬಿಂದುಗಳಷ್ಟು ಕಣ್ಣೀರು ಮೂಡಿ ಬಿದ್ದುವು.

"ಏನು ಕಾಗದವೆ...? ಅವರು ಬರೆದಿದ್ದಾರೇನು?" ಎಂದು ಕಾತರದಿಂದ ಅವರೆಲ್ಲೋ ಜೀವಂತವಾಗಿದ್ದಾರೆ ಎಂದ ತೃಪ್ತಿಯಿಂದ ಆನಂದ ತನ್ಮಯಳಾಗಿ ಅವನ್ನು ತೆಗೆದು ಓದತೊಡಗಿದಳು ರಾಜಂ.

ಆಗ ತಾನೆ ಮನೆಗೆ ಬಂದ ಮಣಿ ಅವಳ ಮಾತುಗಳನ್ನು ಅರೆಬರೆ ಕೇಳಿ "ತಂದೆಯವರೇನು? ಎಲ್ಲಿದ್ದಾರೆ?" ಎಂದು ಕುತೂಹಲದಿಂದ ಕೂಗಿ ರಾಜಂ ಪಕ್ಕದಲ್ಲೇ ಕುಳಿತು ಅವಳೊಂದಿಗೆ ಸೇರಿ ಆ ಕಾಗದವನ್ನು ಓದಲು ಪ್ರಯತ್ನಿಸಿದ.

ಗಂಟೆ ಒಂಭತ್ತಾಯಿತು... ಅವರಲ್ಲಿ ಯಾರೂ ಇನ್ನೂ ಊಟಕ್ಕೇಳಲಿಲ್ಲ. ಆ ಪೇಪರು ಕಟ್ಟು ಈಗ ಮುಗಿಯುವುದಲ್ಲ.

ತಮ್ಮನ್ನು ಬಿಟ್ಟು ಎಲ್ಲಿಯೋ ಆಗಲಿ ಇರುವ ಅವರನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವ ಮನಸ್ಸಿನಿಂದ ಒಬ್ಬೊಬ್ಬರು ಒಂದೊಂದು ಪುಟವನ್ನು ಓದುತ್ತಿದ್ದರು.

ಆ ಕಾಗದದಲ್ಲಿ ಯಾವುದೋ ಒಂದು ಪುಟವನ್ನು ಓದುತ್ತಿದ್ದ ಮಣಿ ಥಟ್ಟನೆ ಕೂಗಿದ : "ವೆಲ್‌ಡನ್... ಫಾದರ್..."

ಆ ಕಾಗದಗಳಲ್ಲಿ ಅವರು ಅರಿತುದು, ಕಣ್ಣುಗಳಿಗೆ ಬಿದ್ದುದು, ಅವರು ದರ್ಶಿಸಿದುದು ಆ ಕುಟುಂಬಕ್ಕೆ ಸೇರಿದ, ಈ ಇಪ್ಪತ್ತನೆಯ ಶತಮಾನದಲ್ಲಿ ಜೀವಿಸುವ ಪರಿಸ್ಥಿತಿಗೊಳಗಾದ ಗಣಪತಿ ಶಾಸ್ತ್ರಿಗಳು ಎಂಬ ಪ್ರತ್ಯೇಕ ವ್ಯಕ್ತಿಯನ್ನು ಮಾತ್ರವೆ ಏನು?

# 8. ತಪ್ಪುಗಳು ಅಪರಾಧವಲ್ಲ

ತೆರೆಸಾ ಹೇಳಿದ ಮಾತುಗಳು ಒಂದೂ ಕಠಿಣವಾದುದಲ್ಲ. ಅವನ್ನು ಹೇಳುವಾಗ ಅವಳ ಧ್ವನಿ ಕೂಡ ಕಠಿಣವಾಗಿರಲಿಲ್ಲ.

ಸೌಮ್ಯ ಸ್ವಭಾವವುಳ್ಳ ತೆರೆಸಾಳ ಮೃದುವಾದ ಕಂಠದಿಂದ ಹೊರಬಂದ ಆ ಮಾತುಗಳಲ್ಲಿ ಇನ್ನೂ ಮರ್ಯಾದೆಯಿತ್ತು. ಅವರ ಬಗ್ಗೆ ಅವಳಿಗೆ ಚಿಂತೆಯಾಗಿತ್ತೇ ಹೊರತು, ಅವರನ್ನು ಅವಮಾನಗೊಳಿಸಬೇಕೆಂಬ ಉದ್ದೇಶವೋ ವಿರೋಧವೋ ಅವಳ ಮುಖ ಭಾವದಲ್ಲಿ ತಿಳಿಯಲಿಲ್ಲ.

'ಛಿ ಅವಳು ಉಗುಳು ಉಗಿದೋ ಅಥವಾ ಯು ಡ್ಯಾಮ್ ಇಟ್' ಎಂದು ಅರಚಿಕೊಂಡೋ ತನ್ನನ್ನು ಅಪಮಾನಗೊಳಿಸಿದ್ದರೆ ಚೆನ್ನಾಗಿರುತ್ತಿತ್ತು ಎನಿಸಿತು ನಾಗರಾಜನಿಗೆ. ಅಂತಹ ಅನುಭವಗಳು ಅವರಿಗೆ ಸಂಭವಿಸಿದ್ದುವು.

ಅಂತಹ ಸಂದರ್ಭಗಳಲ್ಲಿ ತಮ್ಮನ್ನು ರಕ್ಷಿಸಿಕೊಳ್ಳುವುದು ಹೇಗೆಂದು ನಾಗರಾಜನ್‌ಗೆ ಗೊತ್ತು. ಅವರ ಅಧಿಕಾರ, ಪ್ರಭಾವ, ಧೋರಣೆ, ವಯಸ್ಸು, ಸಾಮಾಜಿಕ ಅಂತಸ್ತು ಇವೆಲ್ಲಾ ಅಲ್ಲದೆ ಇವುಗಳಲ್ಲಿ ಏನಾದರೊಂದು ಅವರಿಗೆ ಸಹಾಯಕವಾಗುತ್ತಿತ್ತು. 'ಯಾವುದು ಸಹಾಯಕವಾಗಿ ಏನು ಪ್ರಯೋಜನ? ಪಟ್ಟ ಅವಮಾನ ಅವಮಾನವೇ ತಾನೇ! ಎಷ್ಟು ಅವಮಾನಪಟ್ಟರೂ ನನಗೆ ಬುದ್ಧಿ ಬರಲಿಲ್ಲವಲ್ಲ' ಎಂದು ತಮ್ಮನ್ನೇ ತಾವು ತಮ್ಮ ಮನಸ್ಸಿನಲ್ಲಿ ಆಕ್ಷೇಪಿಸಿಕೊಂಡಾಗ ಅವರ ಕಣ್ಣುಗಳು ನಾಚಿಕೆಯಿಲ್ಲದೆ ಕಣ್ಣೀರಿಂದ ತುಂಬಿದುವು. ಅವರು ಅವಮಾನದಿಂದಲೂ ತನ್ನ ಮೇಲೆ ಉಂಟಾದ ಜಿಗುಪ್ಸೆಯಿಂದಲೂ ತಲೆಬಾಗಿ ನಿಂತು ತಮ್ಮ ಬಗ್ಗೆ ಕಹಿಯಾಗಿ ಆಲೋಚಿಸಿದರು.

'ಛೀ ನಾನೆಂತಹ ಮನುಷ್ಯ. ವಯಸ್ಸು ಐವತ್ತಾಯಿತು. ತಲೆಗೆ ಸರಿಯಾಗಿ ಬಂದ ಮಗ, ಕಾಲೇಜಿನಲ್ಲಿ ಓದುವ ಹೆಣ್ಣು... ಅವರಿಗೆ ಮದುವೆ ಮಾಡಿದ್ದರೆ ಈ ವೇಳೆಗೆ ನಾಲ್ಕು ಮಂದಿ ಮಕ್ಕಳಿಗೆ ಅಜ್ಜನಾಗಿರುತ್ತಿದ್ದೆ.... ಛೀ ನಾನೆಂತಹ ಮನುಷ್ಯ ಎಂದು ಹಲ್ಲು ಕಚ್ಚಿಕೊಂಡರು. ಎರಡು ಕೈಗಳನ್ನೂ ಕೋಟು ಪಾಕೆಟ್‌ಗಳಲ್ಲಿ ಇಟ್ಟುಕೊಂಡು ಬೆರಳುಗಳನ್ನು ಒಸುಕಿಕೊಂಡರು. ಕಣ್ಣುಗಳನ್ನು ಬಲವಾಗಿ ಮುಚ್ಚಿ ಕುರ್ಚಿಯಲ್ಲಿ ಹಾಗೆಯೇ ಒರಗಿ ತಮ್ಮನ್ನು ತಾವೇ ಅರಿಯದಂತೆ 'ವಾಟ್ ಎ ಷೇಮ್' ಎಂದು ಗೊಣಗಿಕೊಂಡು ತಲೆಯನ್ನು ಎಡಬಲ ತಿರುಗಿಸಿದರು. ಏನು ಮಾಡುವುದೆಂದೇ ಅವರಿಗೆ ಅರ್ಥವಾಗಲಿಲ್ಲ.

ತೆರೆಸಾಳ ಆ ಮುಖ ಅವರ ಕಣ್ಮುಂದೆ ಬಂದು ನಿಂತಿತು.

ಸ್ವಲ್ಪ ಹೊತ್ತಿನ ಹಿಂದೆ...

ಮುಖ ಕೆಂಪೇರಿ ಹಣೆಯಲ್ಲಿ ಕೇಶ ಹಾರಲು ತುಟಿಗಳು ಉರಿದು ಹೋದಂತೆ ಕೆಂಪು ಛಾಯೆ ಹರಡಿ ಕಂಪಿಸುತ್ತಾ ಅಶ್ರುಧಾರೆ ಸುರಿಯುತ್ತಿರಲು—

"ಪ್ಲೀಸ್ ಲೀವ್ ಮಿ... ಐ ರಿಗ್ರೇಟ್..." ಎಂದು ಅವರಿಂದ ಬಿಡಿಸಿಕೊಂಡು ದೂರ ಹೋಗಿ ಅವಳು ನಿಂತ ರೀತಿ...

ಅವಳ ನಯನಗಳಿಂದ ಬೀದ ಕಣ್ಣೀರನ್ನು ಸ್ಕರ್ಟ ಜೇಬಿನಿಂದ ಕರವಸ್ತ್ರವನ್ನು ಎತ್ತಿ ಒರೆಸಿಕೊಳ್ಳುವುದರೊಳಗೆ ಎರಡು ಹನಿ ಕಣ್ಣೀರು ಅವರ ಮೇಜಿನ ಮೇಲೆ ಉದುರಿದ್ದು ಆರಲಿಲ್ಲ...

ಅವರ ಎದಿರು ನಿಂತು ತಾನು ಅತ್ತ ಅನಾಗರಿಕತೆಗಾಗಿ ಪಶ್ಚಾತ್ತಾಪಪಟ್ಟು "ಐ ಅಮ್ ಸಾರಿ" ಎಂದು ತನ್ನೊಳಗೆ ಬಿಕ್ಕಿ ಅತ್ತು ಕರ್ಚೀಫಿನಲ್ಲಿ ಮುಖವನ್ನು ಮರೆಸಿಕೊಂಡು ಅಲ್ಲಿಂದ ತನ್ನ ಕೋಣೆಗೆ ಓಡಿದಳಲ್ಲ – ಅದೋ ಅವಳ ಸ್ಲಿಪ್ಪರ್ ಶಬ್ದ. ಈಗ ತಾನೆ ನಿಂತು ಧೊಪ್ಪೆಂದು ಕುರ್ಚಿಯಲ್ಲಿ ಕುಳಿತ ಶಬ್ದ.

ಅವರ ಕಿವಿಯಲ್ಲಿ ಮತ್ತೆ ಮತ್ತೆ ಅವಳ ಮಾತುಗಳು – ಅವರ ನೆನಪಿನಲ್ಲಿ, ಅಪಮಾನ, ವ್ಯಥೆಯಿಂದ ಅವಳು ಓಡಿದಳಲ್ಲಾ ಆ ದೃಶ್ಯ ಈ ಕೆಲವು ನಿಮಿಷಗಳಲ್ಲಿ ಮತ್ತೆ ಮತ್ತೆ ಬಂದು ನಿಂತಿತು.

ಅವಳು ಎಷ್ಟು ದೊಡ್ಡ ಮನಸ್ಸಿನವಳು! ಎಷ್ಟು ಉನ್ನತವಾದ ಮೃದುವಾದ ಗುಣ ಶಾಲಿ ಎಂಬುದನ್ನು ಅರಿತು ಅವರಿಗೆ ಎದೆ ಒಡೆಯಿತು.

'ನಾನು ಅವಳ ಬಳಿ ಹೀಗೆ ವರ್ತಿಸುತ್ತೇನೆ ಎಂದು ಅವಳು ಕನಸಿನಲ್ಲೂ ನೆನೆಸಿರ ಲಾರಳು' ಎಂಬುದು ಅರ್ಥವಾಗಲು ತಮ್ಮನ್ನು ತಾನು ಇಬ್ಭಾಗವಾಗಿ ಸೀಳಿಕೊಳ್ಳು ವಂತೆನಿಸಿತವರಿಗೆ.

ಒಂದು ನಿಮಿಷದಲ್ಲಿ ತಾನು ಪಡೆದ ಸೋಲನ್ನು ನೆನೆದು ಅವರ ಹೃದಯ ಹಿಂಡಿ ದಂತಾಯಿತು.

'ತೆರೆಸಾಳಿಗೆ ಸಮಾಧಾನ ಹೇಳುವುದು ಹೇಗೆ? ಈ ಮಸಿಯನ್ನು ಒರೆಸುವುದೆಂತು? ಮತ್ತೆ ಅವಳ ಮನಸ್ಸಿನಲ್ಲಿ ತನ್ನ ಹಳೆಯ ಗೌರವವನ್ನು ಹೇಗೆ ನೆಲೆಗೊಳಿಸುವುದು?

'ಉಂ... ಅಷ್ಟೇ. ಎಲ್ಲಾ ಹೋಯಿತು! ಚೆಲ್ಲಿ ಮುಚ್ಚಿದ್ದಾಯಿತು! ಎಷ್ಟು ದೊಡ್ಡ ನಷ್ಟ' ನಾಗರಾಜನ್ ಇದನ್ನು ನೆನೆಸಿಕೊಂಡು ನಿಟ್ಟುಸಿರುಬಿಟ್ಟರು. ಹಣೆಯಲ್ಲಿ ಬೆವರನ್ನು ಪದೇ ಪದೇ ಒರೆಸಿಕೊಂಡರು. ಎಲ್ಲಾದರೂ ಹೋಗಿ ಚೆನ್ನಾಗಿ ಅತ್ತುಬಿಡೋಣವೆನಿಸಿತು.

ತಾವು ಕೆಲವು ದಿನಗಳಿಂದ ಅವಳ ಬಗ್ಗೆ ಕಲ್ಪಿಸಿಕೊಂಡ ಚಪಲಬುದ್ಧಿಗೆ ಅವಳ ವರ್ತನೆ, ಮುಗುಳ್ನಗೆ, ಉಪಚಾರ, ಎಲ್ಲಕ್ಕೂ ಮಿಂಚಿ ತನ್ನ ವಯಸ್ಸು, ತಾವು ಅವಳ ಬಳಿ ತೋರುವ ಪ್ರೀತಿಯನ್ನು ಉದ್ದೇಶಿಸಿ ಓರ್ವ ತಂದೆಯ ಬಳಿ ಹೇಳಿಕೊಳ್ಳುವಂತೆ ಅವಳು ತನ್ನ ಬಾಳಿನ ಕಷ್ಟ ನಷ್ಟ, ಮೋಸಹೋದ ಪ್ರಸಂಗಗಳನ್ನು ಹೇಳಿ ಮನನೊಂದುದು.

– ಇದನ್ನು ಸಾಧನವಾಗಿಟ್ಟುಕೊಂಡು ಅವಳಿಗೆ ತನ್ನ ಮೇಲೆ ದೃಷ್ಟಿಯಿದೆ ಎಂದು ನಂಬಿದ ತಮ್ಮ ಕೀಳ್ತನವನ್ನು ಜ್ಞಾಪಕಮಾಡಿಕೊಂಡು ಅವರ ಹೃದಯ ನೊಂದಿತು.

ಹಾಗೆ ಒಂದು ಪೆದ್ದು ನಂಬಿಕೆಯಿಂದ ಅವಳು ತಡೆಯಲಾರಳು ಎಂಬ ಧೈರ್ಯದಿಂದ ಅವರು ಅವಳೊಂದಿಗೆ ಹಾಗೆ ವರ್ತಿಸಿದರು.

ಈ ಹತ್ತು ದಿನ ಪದ್ಧತಿಯಂತೆ ಊಟ ಬಡಿಸುವ ಆ ಕನ್ನಯ್ಯ ಹೇಳದೆ ಕೇಳದೆ ಓಡಿಹೋದನಲ್ಲ. ಆ ತಾರೀಖಿನಿಂದ – ಒಂದೊಂದು ದಿನವೂ ಲಂಚ್ ವೇಳೆಯಲ್ಲಿ ತೆರೆಸಾ ಮತ್ತು ನಾಗರಾಜನ್ ಇಬ್ಬರೂ ಸೇರಿ ಊಟ ಮಾಡುತ್ತಿದ್ದರು.

ಮಧ್ಯಾಹ್ನ ಆಫೀಸಿನಲ್ಲಿಯೇ ಊಟ ಮಾಡುವ ಪದ್ಧತಿ ಉಂಟು ಮಾಡಿದವನು ಕನ್ನಯ್ಯ. ಅವನು ಅವರ ಮನೆಗೆ ಬಂದು ಸೇರುವ ಮೊದಲು ಎರಡು ವರ್ಷಕ್ಕೆ ಮೊದಲು, ಮಧ್ಯಾಹ್ನದ ಊಟಕ್ಕೆ ಮನೆಗೆ ಹೋಗಿ ಬರುತ್ತಿದ್ದರು. ಆದರೆ ಮನೆಗೆ ಹೋದರೆ ಹಾಗೆ ಹೋಗಿ ಊಟ ಮಾಡಿ ಹೀಗೆ ಬಂದು ಬಿಡಲು ಸಾಧ್ಯವೆ...? ಸ್ವಲ್ಪ ವಿಶ್ರಾಂತಿ, ಮಲಗ ಬೇಕು; ಸಣ್ಣ ನಿದ್ರೆ. ಮತ್ತೆ ಆಫೀಸಿಗೆ ಬರಲು ನಾಲ್ಕು ಗಂಟೆಯಾಗುತ್ತಿತ್ತು.

ನಾಗರಾಜನ್ ಎಷ್ಟು ಹೊತ್ತಿಗೆ ಬೇಕಾದರೂ ಆಫೀಸಿಗೆ ಬರಬಹುದು, ಹೋಗ ಬಹುದು. ಅವರನ್ನು ಹೀಗೇಕೆ ಎಂದು ಯಾರೂ ಆಕ್ಷೇಪಿಸುತ್ತಿರಲಿಲ್ಲ. ಆ ಸಂಸ್ಥೆಯ ಯಜಮಾನರ ನಂತರ ಅಧಿಕಾರವೆಲ್ಲಾ ಅವರದೇ. ಆದರೂ ಕೆಲವು ವಿಷಯಗಳಲ್ಲಿ ಯಜಮಾನರಿಗಿಂತ ಸ್ವಲ್ಪ ಹೆಚ್ಚು ಎಂದು ಹೇಳುವಷ್ಟರ ಮಟ್ಟಿಗೆ ಜವಾಬ್ದಾರಿ ಯುಳ್ಳವರು. ಇಪ್ಪತ್ತೈದು ವರ್ಷ ಕಾಲ ಈ ಪ್ರಧಾನ ಕಛೇರಿಯಲ್ಲಿದ್ದುಕೊಂಡು ರಾಜ್ಯಾದ್ಯಂತ ಹಲವಾರು ಶಾಖೆಗಳನ್ನು ತೆರೆದು ಈ ಸಂಸ್ಥೆಯನ್ನು ಇಂದಿನ ಸ್ಥಿತಿಗೆ ತಂದವರು ನಾಗರಾಜನ್ ಎಂದರೆ ಅವರು ವಹಿಸಿದ ಜವಾಬ್ದಾರಿ ಮತ್ತು ಅವರ ಮೇಲೆ ಯಜಮಾನರಿಟ್ಟ ನಂಬಿಕೆಯಿಂದ.

ಕನ್ನಯ್ಯ ತಮ್ಮ ಮನೆಗೆ ಬಂದು ಸೇರಿದ ಮೇಲೆ ಆಫೀಸಿಗೆ ಊಟ ತಂದು ತಾನೇ ಬಡಿಸಿ ಹೋಗುತ್ತಿದ್ದ. ಮುಖ್ಯವಾಗಿ ಅವರು ಮನೆಗೆ ಹೋಗಿ ಊಟ ಮಾಡುತ್ತಿದ್ದುದು ತಾವೇ ಬಡಿಸಿಕೊಂಡು ಊಟ ಮಾಡುವ ಅಭ್ಯಾಸವಿಲ್ಲದ ಕಾರಣದಿಂದ. ಆ ಕೆಲಸ ಅವರಿಗಾಗುತ್ತಿರಲಿಲ್ಲ.

ಕನ್ನಯ್ಯ ನಾಗರಾಜನ್ ಮನೆಯ ಕೆಲಸಗಾರನೋ ಅಡುಗೆಯವನೋ ಎಂದು ಎಲ್ಲರೂ ಭಾವಿಸಿದ್ದರು. ಆದರೆ ಅವನು ಅವರ ಸ್ವಂತ ಅತ್ತೆಯ ಮಗನೆಂಬುದೂ ಬಾಲ್ಯ ಕಾಲದ ಮಿತ್ರನೂ ಹೌದು ಎಂಬುದು ಬಹಳ ಮುಂದಿಗೆ ತಿಳಿಯದು. ತಿಳಿಯುವಂತೆ ಅವನು ವರ್ತಿಸುತ್ತಿರಲೂ ಇಲ್ಲ.

ಅವನಿಗೆ ಕುಟುಂಬ ವಿವಾಹ, ಮನೆ, ಸಂಬಂಧ ಎಂದು ಯಾವುದೂ ಆಗಲಿಲ್ಲ. ಬಂಧುಗಳ ಮನೆಯಲ್ಲಿ – ಅವನು ಬಂಧುವೆಂದು ಪರಿಗಣಿಸುವವರ ಮನೆಯಲ್ಲಿ ಬಂದು ಸ್ವಲ್ಪ ಕಾಲ ತಂಗುತ್ತಿದ್ದ. ಹಾಗೆ ತಂಗಿರುತ್ತಿದ್ದ ಕಾಲ ಆ ಮನೆಗೆ ಅವನು ಒತ್ತಾಸೆಯಾಗಿರು

ತ್ತಿದ್ದ. ಮಕ್ಕಳಿಗೆ ದಾದಿಯಂತೆ ಕೂಗಿದೊಡನೆ ಓಡಿ ಬರುವ ಸೇವಕನಾಗಿಯೂ ಇರುತ್ತಿದ್ದ. ತೋಟಗಾರಿಕೆ ಮಾಡುತ್ತಿದ್ದ, ಬಟ್ಟೆಗಳನ್ನು ಒಗೆಯುತ್ತಿದ್ದ. ಅಂಗಡಿಗೆ ಹೋಗುತ್ತಿದ್ದ, ಸೌದೆ ಹೊಡೆಯುತ್ತಿದ್ದ, ಭಾರ ಹೊರುತ್ತಿದ್ದ. ಸರಸವಾಗ ಮಾತನಾಡಿಕೊಂಡಿರುತ್ತಿದ್ದ.

'ಹೇಳದೆಯೇ ಓಡಿಹೋದನಲ್ಲಾ ಆ ರ್‍ಯಾಸ್ಕಲ್...' ಎಂದು ಈಗ ಹಲ್ಲುಗಳನ್ನು ಕಚ್ಚಿದ ನಾಗರಾಜನ್ ಸ್ವಲ್ಪ ಹೊತ್ತಿಗೆ ಮುಂಚೆ ತಾನು ಮಾಡಿದ ಕೃತ್ಯಕ್ಕೆ ಅವನೇ ಕಾರಣ ಎಂದು ಸುತ್ತಿ ಬಳಸಿ ತಪ್ಪನ್ನು ಅವನ ಮೇಲೆ ಹೊರಿಸಲು ಪ್ರಯತ್ನಿಸಿದರು.

'ಅವನು ಕಾಲಕ್ಕೆ ಸರಿಯಾಗಿ ಬಂದು ಮೀಲ್ಸ್ ಸರ್ವ್ ಮಾಡಿದ್ದರೆ ಇವಳು ಇಷ್ಟು ನಿಕಟವಾಗಿರುತ್ತಿರಲಿಲ್ಲ' ಎಂದು ನೆನೆದಾಗ ಕನ್ನಯ್ಯನ ಬಗ್ಗೆ ನೆನಪುಗಳು ಹೆಚ್ಚಿದುವು...

...ಎರಡು ವರ್ಷಗಳ ಹಿಂದೆ ಒಂದು ದಿನ ರಾತ್ರಿ ಎಂಟು ಗಂಟೆಗೆ ಮನೆಗೆ ಹಿಂತಿರುಗಿದ ನಾಗರಾಜನ್ ಕಾರನ್ನು ಷೆಡ್‌ನಲ್ಲಿ ಬಿಡಲು ಹೋದಾಗ ಷೆಡ್ಡಿನ ಒಂದು ಮೂಲೆಯಲ್ಲಿ ದಾಡಿ ಮೀಸಿ ಬೆಳೆದು ಓರಣವಿಲ್ಲದ ತಲೆಗೂದಲುಳ್ಳ ಮನುಷ್ಯ ಎದ್ದು ನಿಲ್ಲುವುದನ್ನು ಕಂಡರು. ಕಾರಿನ ಲೈಟುಗಳನ್ನು ಆರಿಸದೆ ತಲೆಯನ್ನು ಹೊರಹಾಕಿ—

"ಯಾರಲ್ಲಿ...?" ಎಂದು ಗದರಿಸಿ ಕೇಳಿದರು. ಅವನು ಸಮೀಪಕ್ಕೆ ಓಡಿ ಬಂದು

"ನಾನು ಕನ್ನಯ್ಯ... ನನ್ನ ಗುರುತು ಸಿಕ್ಕಲಿಲ್ಲವೆ?" ಎಂದು ರಹಸ್ಯವನ್ನು ಬಯಲಿಗೆಳೆಯುವಂತೆ ಪರಿಚಯ ಮಾಡಿಕೊಂಡಾಗ ನಾಗರಾಜನ್‌ಗೆ ಮನಸ್ಸು ಏನೋ ಒಂದು ತರಹೆ ಆಯಿತು.

"ಏನಯ್ಯಾ ಇದು ಅವತಾರ? ಬಾರಯ್ಯ ಬಾ." ಎಂದು ಕರೆದುಕೊಂಡು ಬಂದು ಮನೆಯಲ್ಲಿದ್ದವರಿಗೆ ಪರಿಚಯ ಮಾಡಿಕೊಟ್ಟು ಅಲ್ಲಿಯೇ ತಂಗಲು ಹೇಳಿದರು. ಸ್ವಲ್ಪ ದಿನಗಳಲ್ಲಿ ಅವರ ಕುಟುಂಬಕ್ಕೆ ಅವನು ಉಪಯುಕ್ತ ವ್ಯಕ್ತಿಯಾದ.

ಪ್ರಾರಂಭದಲ್ಲಿ ಅವನನ್ನು ಮನೆಯಲ್ಲಿ ಸೇರಿಸಿಕೊಂಡುದಕ್ಕಾಗಿ ಉಳಿದ ಬಂಧುಗಳು ನಾಗರಾಜನ್ ಅವರನ್ನೂ ಅವರ ಕುಟುಂಬದವರನ್ನೂ ಎಚ್ಚರಿಕೆಗೊಳಿಸಿದರು.

ಆದರೆ ನಾಗರಾಜನ್ ಅದಕ್ಕೆ ಬೆಲೆ ಕೊಡಲಿಲ್ಲ. ಇನ್ನೂ ಅವನಿಗೆ ಆಶ್ರಯವಿತ್ತುದು ತಮ್ಮ ಕರ್ತವ್ಯವಾಗಿತ್ತು ಎಂದೇ ಭಾವಿಸಿದರು. ಆದರೂ ಆ ಕಾರಣವನ್ನು ಅವರು ಯಾರ ಬಳಿಯೂ ಬಹಿರಂಗಪಡಿಸಲಿಲ್ಲ.

ಆ ಬಾಲ್ಯದ ಹಳೆಯ ಅನುಭವಗಳನ್ನು ನೆನಪುಗಳನ್ನು ಯಾವಾಗಲಾದರೂ ಏಕಾಂತದಲ್ಲಿದ್ದಾಗ ಅವನೊಂದಿಗೆ ಹೇಳಿಕೊಂಡು ಸಂತೋಷಪಡುತ್ತಿದ್ದರು ನಾಗರಾಜನ್

ಆ ಕಾಲದಲ್ಲಿ ಕನ್ನಯ್ಯ ಬಹಳ ಒಳ್ಳೆಯ ಹುಡುಗನೆನಿಸಿಕೊಂಡಿದ್ದ. ಏನೂ ಅರಿಯದ ಅವನಿಗೆ ಧೂಮಪಾನ, ಮದ್ಯಪಾನ – ಆ ವಿಧವಾದ ರಂಜನೆಯಲ್ಲಿ ಪ್ರವೇಶಗೊಳಿಸಿದುದು ನಾಗರಾಜನ್ ಅವರೇ. ಅದನ್ನು ಅವರು ಮರೆತಿರಲಿಲ್ಲ. ನಂತರ ಅದೆಲ್ಲಾ ಒಂದು ವಯಸ್ಸಿನ ಅವಸ್ಥೆ ಎಂದು ತಳ್ಳಿ – ಅಥವಾ ನಿಜವಾಗಿ ಒಂದು ವಯಸ್ಸಿನ ಅವಸ್ಥೆಯಾಗಿ

ಅವು ಇವರಿಂದ ದೂರವಾದಾಗ – ಇವರಿಂದ ಅಭ್ಯಾಸಮಾಡಿಕೊಂಡ ಕನ್ನಯ್ಯ ಅದರಲ್ಲೇ ಮುಳುಗಿ ತೇಲುತ್ತಿದ್ದಾನೆ ಎಂದರಿತಾಗ ನಾಗರಾಜನ್ ತಮ್ಮ ತಪ್ಪಿಗಾಗಿ ವ್ಯಥೆಪಟ್ಟರು.

ನಾಗರಾಜನ್ ವಿಚಾರವಾಗಿ – ಆ ವಾಸನೆಗಳೆಲ್ಲಾ ಮಹಾಪಾಪ ಎಂದು ತಿಳಿಯುವ – ಓರಣ ದೃಷ್ಟಿಯಿಂದೇನೂ ಅವರು ಅವನಿಗಾಗಿ ಪರಿತಪಿಸಲಿಲ್ಲ. ಈ ದುರಭ್ಯಾಸಗಳಿಗೆ ಗುರಿಯಾಗಿ ಒಬ್ಬನ ಬಾಳಿನಲ್ಲಿ ಸಕಲ ಮರ್ಯಾದೆಗಳನ್ನು ತೆಗೆದುಕೊಳ್ಳುವುದು ಪರಿತಾಪ ಕರವಾದ ವಿಷಯವೆಂದು ಅವರು ಅವನ ಬಗ್ಗೆ ಅನುತಾಪಗೊಂಡರು.

ಈಗಲೂ ನಾಗರಾಜನ್ ಯಾವಾಗಲಾದರೂ ಪಾರ್ಟಿಗಳಲ್ಲಿಯೂ ಕೆಲವು ವೇಳೆ ಮನೆಯಲ್ಲಿಯೂ ಮದ್ಯಪಾನ ಮಾಡುವುದುಂಟು. ಅದು ಯಾರಿಗೂ ತಿಳಿಯದು. ನಾಗರಾಜನ್ ಕೂಡ ಧೂಮಪಾನ ಮಾಡುತ್ತಾರೆ. ಹೆಣ್ಣನ್ನು ಬಯಕೆಯಿಂದ ನೋಡು ತ್ತಾರೆ. ಎಲ್ಲಕ್ಕೂ ಒಂದು ಅಡ್ಡಿ ಮಿತಿ ಇಲ್ಲದಿದ್ದರೆ ತಾನೆ ಮನುಷ್ಯ ತಲೆಕೆಳಗಾಗಿ ಬೀಳು ತ್ತಾನೆ?

ಹಾಗೆ ಬಿದ್ದವನು ಕನ್ನಯ್ಯ. ಅವನು ಹಾಗೆ ಬೀಳಲು ಕಾರಣ ಯಾವುದೋ ಒಂದು ರೀತಿಯಿಂದ ತಾವೇ ಎಂದು ನೆನೆದು ಅವನನ್ನು ನೋಡಿ ನಿಟ್ಟುಸಿರು ಬಿಡುತ್ತಿದ್ದರು ನಾಗರಾಜನ್.

ಪರರ ದೃಷ್ಟಿಯಲ್ಲಿ ಸಮಾಜದ ಅಂತಸ್ತಿನಲ್ಲಿ ಅವನು ಜಾರಿದವನು ಎಂದರೂ ಕೂಡ ಅವನನ್ನು ತಮ್ಮ ಅಂತರಂಗದಲ್ಲಿ ಸರಿಸಮನಾಗಿಯೇ ಭಾವಿಸಿದರು ನಾಗರಾಜನ್. ಅವನೂ ಅದೇ ರೀತಿ ಆ ಎಲ್ಲೆ ಮೀರದೆ ಅವರಿಗೆ ಸಮನಾಗಿ ಮಾತ್ರವೇ ಇದ್ದ.

ಯಾವಾಗಲಾದರೂ ತಾವು ಮದ್ಯಪಾನ ಮಾಡುವಾಗ ಅವನನ್ನೂ ಕರೆದು ಕೊಡು ತ್ತಿದ್ದರು. ತನಗೆ ಮಕುಟಾಭಿಷೇಕ ನಡೆದಂತೆ ಅವನು ಸಂತೋಷಪಡುತ್ತಿದ್ದ. ಆಗಲೂ ಬಹಳ ನಾಚಿಕೆಯಿಂದ ಕೈಯಲ್ಲಿ ಟಂಬ್ಲರ್ ಹಿಡಿದು ಒಂದು ಮೂಲೆಗೆ ಹೋಗಿ ತಿರುಗಿ ನಿಂತು ಮರೆಯಾಗಿ ಪಾನ ಮಾಡುತ್ತಿದ್ದ. "ಸಾಕು, ಸಾಕು" ಎಂದು ಹೇಳಿ ಟಂಬ್ಲರನ್ನು ಇಟ್ಟು ಓಡಿಬಿಡುತ್ತಿದ್ದ.

ಕೇಳಿದರೆ "ನನಗೆ ಈ ಸರಕು ಸರಿಹೊಂದದು" ಎಂಟು ರೂಪಾಯಿ ಕೊಡಿ. ಇದನ್ನು ಯಾಕೆ ವೇಸ್ಟ್ ಮಾಡಬೇಕು? ಎಂದು ಹಣ ತೆಗೆದುಕೊಂಡು ಹೋದರೆ ರಾತ್ರಿ ಎಷ್ಟು ಹೊತ್ತಿಗೆ ಬಂದು ಷೆಡ್‌ನಲ್ಲಿ ಮಲಗಿಕೊಳ್ಳುತ್ತಾನೆ ಎಂದು ಯಾರಿಗೂ ತಿಳಿಯುತ್ತಿರಲಿಲ್ಲ.

ಯಾರಿಗೂ ತಿಳಿಯದಂತೆ ಆ ಖರ್ಚಿಗಾಗಿ ವಾರದಲ್ಲಿ ಒಂದೆರಡು ಬಾರಿ ಅವರು ಅವನಿಗೆ ಹಣ ಕೊಡುತ್ತಿದ್ದರು.

ಅವನು ಊಟ ಬಡಿಸಿದರೆ ಊಟ ಮಾಡಲು ಅವರಿಗೆ ಯಾವಾಗಲೂ ಬಹಳ ತೃಪ್ತಿಯಾಗಿರುತ್ತಿತ್ತು. ಮನೆಯಲ್ಲಿರುವಾಗಲೂ ಕೆಲವು ಬಾರಿ ಅವನೇ ಅವರಿಗೆ ಬಡಿಸುತ್ತಿದ್ದ.

ನಾಗರಾಜನ್ ಪಕ್ಕ ಸ್ಥೂಲಕಾಯದವರು. ಪದೇ ಪದೇ ಮೈಗೆ ಸರಿಯಿಲ್ಲದೆ ಮಲಗಿ ಬಿಡುತ್ತಿದ್ದರು. ಆರಾಮ ಕುರ್ಚಿಯಿಂದ ಅವರನ್ನು ಕರೆದು ಎಬ್ಬಿಸಲು ಅವನು ಇಷ್ಟಪಡುತ್ತಿರಲಿಲ್ಲ.

ಕೆಲವು ವೇಳೆ ಡ್ರೈವರ್ ಇಲ್ಲದಿದ್ದಾಗ ಕನ್ನಯ್ಯನೊಂದಿಗೆ ಕಾರಿನಲ್ಲಿ ಹೋಗುತ್ತಿದ್ದರು. ಆಗ ಅವನೊಂದಿಗೆ ವಿನೋದವಾಗಿ ಸರಸದಿಂದ ಹಳೆಯ ಕಾಲದಂತೆ ಮಾತನಾಡಿ ಸಂತೋಷಪಡುತ್ತಿದ್ದರು, ನಾಗರಾಜನ್. ಅಂತಹ ಸಂದರ್ಭಗಳಲ್ಲಿ ಅವನೂ ತನ್ನನ್ನು ತಾನು ಮರೆತು 'ಏಯ್' ಎಂದು ಕೂಡ ಮಾತನಾಡುತ್ತಿದ್ದ. ಅದು ತುಂಬಾ ಸಹಜವಾಗಿ ಶ್ರುತಿಕೆಡದಂತಿರುತ್ತಿತ್ತು.

"ಏಯ್ ಕನ್ನಯ್ಯ... ನಮ್ಮ ಸೆಕ್ರೆಟರಿ ಹೇಗಿದ್ದಾಳೆ?"

—ಸೀರೆ ಉಡದ ಆ ಆಂಗ್ಲೋ ಇಂಡಿಯನ್ ಹುಡುಗಿ ಎದುರಾದಾಗ ಅವನು ನಾಚಿ ಸಂಕೋಚದಿಂದ ನಿಲ್ಲುವುದನ್ನು ಅವರು ಹಲವು ಬಾರಿ ಕಂಡಿದ್ದರು. ಆದ್ದರಿಂದಲೇ ಕೇಳಿದರು.

ಅಂತಹ ಸಂದರ್ಭಗಳಲ್ಲಿ ಅವನು ಮೊದಲು ನಗುತ್ತಿದ್ದ ಅಷ್ಟೆ.

"ಹೇಳು... ಅವಳನ್ನು ನೋಡಿದರೆ ನಿನಗೇನು ಅನಿಸುತ್ತೆ?"

"ನನಗೇನು ಅನಿಸುತ್ತೆ...?" ಕನ್ನಯ್ಯ ತಲೆಬಾಗಿ ಹೇಳುತ್ತಿದ್ದ. ಸ್ವಲ್ಪ ಹೊತ್ತು ಬಿಟ್ಟು ಒಂದು ಪೆದ್ದು ನಗೆಯೊಡನೆ 'ನೀನು ಸುಮ್ಮನೆ ಬಿಟ್ಟಿದ್ದೀಯೇನಪ್ಪ ಅಳಿಯ ದೇವ... ನನಗೆ ಗೊತ್ತು' ಎಂದು ಮೊಳಕೈಗಳನ್ನು ಪಕ್ಕೆಗೆ ಬಡಿದುಕೊಂಡು ನಗು ನಗುತ್ತಲೇ ಹೇಳಿದ.

"ಛೀ ಛೀ ಅದೆಲ್ಲಾ ಏನೂ ಇಲ್ಲ. ನೀನು ನನ್ನನ್ನೂ ನಿನ್ನಂತೆಯೇ ಎಂದು ಕೊಂಡಿದ್ದೀಯಾ? ವಯಸ್ಸಾಯಿತಲ್ಲ ಎನ್ನುತ್ತಿದ್ದರು ನಾಗರಾಜನ್.

"ಹಾಗೆಂದರೆ... ಅವಳು ನಿನ್ನ ಮೇಲೆ ಒಂದು ಕಣ್ಣು ಇಟ್ಟಿದ್ದಾಳೆ. ಅದಂತೂ ಸ್ಪಷ್ಟ" ಎಂದು ಕಣ್ಣು ಮಿಟುಕಿಸಿ ಅವರನ್ನು ಸಂತೋಷಗೊಳಿಸಿದನವ.

'ಆ ಪಾಪಿಯೇ ಈ ಭಾವನೆಗೆ ಮೊದಲು ಬೀಜವಿಟ್ಟನೋ?'

ಇಷ್ಟನ್ನೂ ಕನ್ನಯ್ಯ ಹಿಂದೆ ಮಾತನಾಡುತ್ತಿದ್ದನೇ ಹೊರತು ಅವಳ ಮುಂದೆ ಸೊಂಟಕ್ಕೆ ಕಟ್ಟಿದ ವಸ್ತ್ರವನ್ನು ಬಿಚ್ಚದೆ ತಲೆಯೆತ್ತಿ ನೋಡದೆ ಅವರಿಗೆ ಊಟ ಬಡಿಸುತ್ತಿದ್ದ. ತಟ್ಟೆಯನ್ನು ನೋಡಿ ಯಾವುದು ರುಚಿ ಎಂದರಿತು ಕೇಳುವ ಮೊದಲೇ ಬಡಿಸುತ್ತಿದ್ದ.

ಅವನು ಬಡಿಸುವುದನ್ನೂ ಅವರ ಉಪಚಾರ ಮಾಡುವುದನ್ನೂ ತೆರೆಸಾ ನೋಡಿದ್ದಳು.

ಆದುದರಿಂದಲೇ ಅವನು ಬಾರದೆ – ಅಂದು ಆ ಡ್ರೈವರೇ ನಾಗರಾಜನ್‌ಗೆ ಬಡಿಸಲಾರಂಭಿಸಿದ. ಸರಿಯಾಗಿ ಬಡಿಸಲಿಲ್ಲವೆಂದು ಕೂಗಾಡಿದ್ದಕ್ಕೆ ಹೆದರಿ ಕೈಯಲ್ಲಿದ್ದುದನ್ನು ಕೆಳಗೆ ಹಾಕಿಬಿಟ್ಟ. ಏನೂ ಊಟ ಮಾಡದೆ ಎತ್ತಿಕೊಂಡು ಹೋಗಾಚೆ ಎಂದು ಗದರಿ

ಸಿದರು. ಹೋಟಲಿನಿಂದ ಟಿಫಿನ್ ತರಿಸಿ ತಿಂದುದನ್ನು ತೆರೆಸಾ ಗಮನಿಸಿದ್ದಳು. ಮೂರನೆಯ ದಿನ ಮಧ್ಯಾಹ್ನ ಅವರು ತಾವೇ ಬಡಿಸಿ ಪ್ರಯತ್ನಿಸಿದಾಗ—

"ನಿಮ್ಮ ಆಕ್ಷೇಪಣೆಯಿಲ್ಲದಿದ್ದರೆ ನಾನು ಬಡಿಸುತ್ತೇನೆ..." ಎಂದು ವಿನಯದಿಂದ ಆಂಗ್ಲಭಾಷೆಯಲ್ಲಿ ಕೇಳಿದಳು.

ಆಗ ನಾಗರಾಜನಿಗೆ ಕನ್ನಯ್ಯ ಹೇಳಿದ್ದುದು ನೆನಪಿಗೆ ಬಂತು : 'ಅವಳು ನಿನ್ನ ಮೇಲೆ ಒಂದು ಕಣ್ಣಿಟ್ಟಿದ್ದಾಳೆ. ಅದಂತೂ ಸ್ಪಷ್ಟ.'

ನಾಲ್ಕು ವರ್ಷಗಳಿಂದ ತನ್ನ ಬಳಿ ಸ್ಟೆನೋ ಆಗಿ ಕೆಲಸ ಮಾಡುತ್ತಿದ್ದ ತೆರೆಸಾಳನ್ನು ಅಂದು ಅವರು ದೃಷ್ಟಿಸಿ ನೋಡಿದರು.

"ಯು ಲುಕ್ ನೈಸ್ ಟುಡೇ" ಎಂದು ಅವಳ ಸೌಂದರ್ಯವನ್ನು ಅವರು ಹೊಗಳಿದರು.

"ಥ್ಯಾಂಕ್ಯು" ಎಂದು ಅವಳು ಕೃತಜ್ಞತೆ ಸೂಚಿಸಿದಳು.

ಅಂದು ತಮ್ಮೊಂದಿಗೆ ಕುಳಿತು ಊಟ ಮಾಡಲು ಹೇಳಿದರವರು.

ಮೊದಲು ತಾನು ಟಿಫಿನ್ ಬಾಕ್ಸ್‌ನಲ್ಲಿ ತಂದಿದ್ದ ಸಾಧಾರಣವಾದ ಊಟವನ್ನು ಅವರೊಂದಿಗೆ ಕುಳಿತು ತಿನ್ನಲು ಅವಳು ಹಿಂದೆಗೆದಳು. ಆದರೆ ಅವರು ಬಹಳ ಒತ್ತಾಯ ಮಾಡಲಾಗಿ, ಅವಳು ಅವರ ಎದಿರು ಕುಳಿತು ಒಂದೇ ಮೇಜಿನ ಮೇಲೆ ಊಟ ಮಾಡಿದಳು.

ಊಟ ಮಾಡುವಾಗ ಅವಳು ಕನ್ಯಯ್ಯನ ಬಗ್ಗೆ ವಿಚಾರಿಸಿದಳು. "ವೇರ್ ಈಸ್ ದಟ್ ಮ್ಯಾನ್?"

"ಆ ರ್‍ಯಾಸ್ಕಲ್ ಐನೂರು ರೂಪಾಯಿ ಹಣ ಕದ್ದುಕೊಂಡು ಹೇಳದೆ ಕೇಳದೆ ಓಡಿ ಹೋದ" – ಎಂದು ಕೋಪದಿಂದ ಹೇಳಿದರು. ನಾಗರಾಜನ್.

"ಐನೂರು ರೂಪಾಯಿ? ಹಣವನ್ನು ಅಷ್ಟು ಅಜಾಗರೂಕತೆಯಿಂದ ಕೆಲಸಗಾರರ ಕಣ್ಣಿಗೆ ಬೀಳುವಂತೆ ಇಡಬಾರದಿತ್ತು."

"ಅವನು ಕೆಲಸಗಾರನಲ್ಲ. ಅವನು ನನ್ನ ಕಸಿನ್"

"ಓಹ್, ಐ ಅಮ್ ಸಾರಿ..."

"ಪರವಾಯಿಲ್ಲ. ಕಳ್ಳನಾದವನಿಗೆ ಕೆಲಸಗಾರನೆಂಬ ಹೆಸರೇ ಸ್ವಲ್ಪ ಹೆಚ್ಚಾಯಿತು..."

"ಪೂರ್ ಮ್ಯಾನ್" ಎಂದು ಅವಳು ಅವನಿಗಾಗಿ ವ್ಯಥೆಪಟ್ಟುದು ಅವರಿಗೆ ಆಶ್ಚರ್ಯವೆನಿಸಿತು. "ಹಿ ವಾಸ್ ವೆರಿ ನೈಸ್ – ಅಂಡ್ ಹೆಲ್ಪ್‌ಫುಲ್..." ಎಂದು ತನಗೆ ತಾನೇ ಹೇಳಿಕೊಳ್ಳುವಂತೆ ನುಡಿದಳು.

ನಾಗರಾಜನ್ ನಿಟ್ಟುಸಿರುಬಿಟ್ಟರು.

ಅವರು ತಮಗೆ ಬಂದಿದ್ದ ಊಟವನ್ನು ಅವಳಿಗೂ ಸ್ವಲ್ಪ ನೀಡಿದರು. ಅವಳು, ಅವರು ವಾತ್ಸಲ್ಯದಿಂದ ನೀಡಿದುದನ್ನು ಕೃತಜ್ಞತೆಯಿಂದ ಸ್ವೀಕರಿಸಿದಳು. ಅವಳೂ ಕನ್ನಯ್ಯನಂತೆ ಬಹಳ ನಮ್ರತೆಯಿಂದ ಅವರ ರುಚಿ ಅರಿತು ಅವರಿಗೆ ಬಡಿಸಿದಳು.

ಹೆಚ್ಚಿನ ಸ್ವತಂತ್ರವಹಿಸಿ ಅವಳ ಟಿಫಿನ್ ಬಾಕ್ಸ್ ಊಟವನ್ನು ಅವರು ಕೇಳಿ ತೆಗೆದು ಕೊಂಡು ಊಟ ಮಾಡುತ್ತಿದ್ದರು.

ಆಫೀಸು ವಿಷಯದ ಹೊರತು ಬೇರೇನೂ ಮಾತನಾಡದ ಅವರು ಈ 'ಲಂಚ್' ವೇಳೆಯಲ್ಲಿ ಇತರ ವಿಚಾರಗಳ ಬಗ್ಗೆ ಸ್ವಂತ ವಿಚಾರಗಳನ್ನು ಮಾತನಾಡಿ ವಿನಿಮಯ ಮಾಡಿಕೊಳ್ಳಲಾರಂಭಿಸಿದರು.

ಹಿಂದೆಲ್ಲಾ ಆ 'ಏರ್ ಕಂಡೀಷನ್ಡ್' ಕೋಣೆಯಲ್ಲಿ ಅವರಿಗಾಗಿದ್ದ ಆರಾಮ ಕುರ್ಚಿ ಯಲ್ಲಿ ಒರಗಿ ಕಣ್ಮುಚ್ಚುತ್ತಿದ್ದರು. ಈ ಹತ್ತು ದಿನಗಳಿಂದ ಆರಾಮ ಕುರ್ಚಿಯಲ್ಲಿ ಒರಗಿ ಮೇಜಿನ ಪಕ್ಕದಲ್ಲಿ ಕುಳಿತಿರುತ್ತಿದ್ದ ತೆರೆಸಾಳ ಜೊತೆ ಏನಾದರೂ ಮಾತನಾಡುತ್ತಿದ್ದರು.

ಅವಳು ತನ್ನ ಬಗ್ಗೆ ಏನೂ ಮರೆಮಾಚದೆ ನಂಬಿಕಾರ್ಹರಾದ ದೊಡ್ಡ ವ್ಯಕ್ತಿಯ ಅನುತಾಪಕ್ಕೆ ಕೃತಜ್ಞತೆ ತೋರಿಸುವ ಭಾವದಂತೆ, ಇಂತಹ ದೊಡ್ಡ ಮನುಷ್ಯ ತನ್ನ ಬಗ್ಗೆ ತೋರುವ ಆತ್ಮೀಯತೆಗಾಗಿ ಹೆಮ್ಮೆಯಿಂದಲೋ ಎಂಬಂತೆ ಮನಬಿಚ್ಚಿ ಮಾತ ನಾಡುತ್ತಿದ್ದಳು. ಮಗುವಿನಂತೆ ನಗುತ್ತಿದ್ದಳು. ತನ್ನ ನಗೆಯಿಂದ, ಮಾತಿನಿಂದ ಅವರಿಗೆ ಬಹಳ ಸಂತೋಷವಾಗುತ್ತದೆಯೆಂಬ ಕಾರಣದಿಂದ ಹಾಗೆ ಅವರು ಸಂತೋಷಪಡ ಲೆಂದೇ ಅವಳು ನಗುತ್ತಾ ವಿನೋದವಾಗಿ ಮಾತನಾಡುತ್ತಾ ಒಳ್ಳೆಯ ಜೊತೆಗಾತಿ ಯಾಗಿದ್ದಳು. ಅವರು ಅವಳ ಮಾತನ್ನು ಮಾತ್ರವಲ್ಲದೆ ಅವಳನ್ನೇ ಕಂಡು ಸಂತಸ ಪಟ್ಟರು. ಅವಳ ನಗು, ಆತ್ಮೀಯತೆ, ಸರಸತನ, ಮೋಹಕವಾದ ಸಾಹಸವನ್ನು ಭಾವಿಸಿ ಕೊಂಡು ಪ್ರತಿದಿನ ತನ್ನತನವನ್ನು ತಾವು ಕಳೆದುಕೊಳ್ಳಲಾರಂಭಿಸಿದರು.

ಕೆಲವು ದಿನಗಳ ಹಿಂದೆ ಅವಳು ಮುಂದಿನ ವಾರ ಬರಲಿದ್ದ ತನ್ನ ಹುಟ್ಟುಹಬ್ಬಕ್ಕೆ ಬರಬೇಕೆಂದು ಆಹ್ವಾನಿಸಿದಳು. ಈ ನಾಲ್ಕು ವರ್ಷಗಳಿಂದ ಅವರಿಗೆ ಸ್ವೀಟ್ ತಂದು ಕೊಟ್ಟು ಆಶೀರ್ವಾದ ಪಡೆಯುವುದರ ಹೊರತು ಹಬ್ಬಕ್ಕೆ ಕರೆದುದಿಲ್ಲ. ಅದಕ್ಕೆ ಕಾರಣ, ಈ ನಾಲ್ಕು ವರ್ಷಗಳಿಂದ ಅವರು ಅವಳಿಗೆ ಅಧಿಕಾರ ಸ್ಥಾನದಲ್ಲಿ ಇದ್ದವರಾದ್ದರಿಂದ ಈಗ ತಾನೆ ಆತ್ಮೀಯರಾಗಿದ್ದಾರೆ ಎಂದು ಭಾವಿಸಿದ್ದಾರೆಂಬ ಸಹಜತನ ಬಿಟ್ಟು ಅಸಹಜವಾದುದನ್ನು ನಾಗರಾಜನ್ ಕಲ್ಪಿಸಿಕೊಂಡರು.

"ವಿಲ್ ಇಟ್ ಬಿ ಎ ಕಾಕ್‌ಟೈಲ್ ಪಾರ್ಟಿ?" ಎಂದು ಕಣ್ಣು ಹೊಡೆದು ಅವರು ಕೇಳಿದಾಗ—

"ಆಫ್‌ಕೋರ್ಸ್ ನನ್ನ ತಂದೆ-ತಾಯಿ ಇಬ್ಬರೂ ಪರ್ಮಿಟ್ ಪಡೆದಿದ್ದಾರೆ" ಎಂದು ಅವಳು ಹೇಳಿದಳು.

"ನೀನೂ ಒಂದು ಪರ್ಮಿಟ್ ಪಡೆದುಕೊಳ್ಳಬಾರದೆ?" ಎಂದು ಕೇಳಿದರು ನಾಗರಾಜನ್.

"ನೋ, ನಾನು ಕುಡಿಯುವುದಿಲ್ಲ" ಎಂದಳು ತೆರೆಸಾ.

"ನಿನ್ನ ಹುಟ್ಟಿದ ಹಬ್ಬದಲ್ಲಿ ನಾನು ನೀನು ಕುಡಿಯುವಂತೆ ಮಾಡುತ್ತೇನೆ ನೋಡಿ ಕೊಂಡಿರು" ಎಂದರು ನಾಗರಾಜನ್.

ಅವಳು ನಗುತ್ತಲೇ, "ಅಂತಹ ವಿಶೇಷ ಸಂದರ್ಭಗಳಲ್ಲಿ 'ಫಾರ್ ಕಂಪನೀಸ್ ಸೇಕ್' ಸ್ವಲ್ಪ ರುಚಿ ನೋಡುವುದುಂಟು" – ಎಂದು ಮುಂದುವರಿದು ತನ್ನ ತಂದೆ ಕ್ರಿಸ್‌ಮಸ್ ಹಬ್ಬ ಬಂದಾಗ ಮಕ್ಕಳಿಗೆ ವೈನ್ ತರುವ ವಿಷಯ ಹೇಳಿದಳು.

ತಮ್ಮ ಆಚಾರ ಪದ್ಧತಿಯಂತೆ ಕುಡಿಯುವುದು, ಗಂಡಸರು, ಹೆಂಗಸರು ಜೋಡಿ ಯಾಗಿ ನರ್ತಿಸುವುದು ಎಷ್ಟು ಪರವಶವಾಗಿರುತ್ತದೆಂಬುದನ್ನು ತನ್ನನ್ನು ತಾನೇ ಮರೆತ ಲಯದಲ್ಲಿ ವಿವರಿಸಿದಳು. ಹಾಗೆ ಹೇಳುತ್ತಿರುವಾಗ ಅವಳು ತನ್ನ ಹಿಂದಿನ ವರ್ಷದ ಹುಟ್ಟುಹಬ್ಬದ ವೈಭವದ ಸನ್ನಿವೇಶಗಳನ್ನು ನೆನಪಿಸಿಕೊಂಡಳು. ಆ ನೆನಪಿನಲ್ಲಿ, ಆಗ ಅವಳ ನಂಬಿಕೆಗೆ ಪ್ರಣಯಕ್ಕೂ ಪಾತ್ರವಾಗಿದ್ದ ನಂತರ ಅವಳಿಂದ ಅಗಲಿದ 'ಬಾಯ್ ಫ್ರೆಂಡ್' ಬಗ್ಗೆ ಅವರ ಬಳಿ ಹೇಳಿದಳು. ಆಗ ಅವಳು ಸ್ವಲ್ಪ ಭಾವಪರವಶಳಾದಳು. ನಂತರ ತನ್ನನ್ನು ತಾನೇ ಸಮಾಧಾನಪಡಿಸಿಕೊಂಡು ನಸುನಕ್ಕಳು.

ಇದೆಲ್ಲವನ್ನೂ ನಾಗರಾಜನ್ ಬೇರೆ ದೃಷ್ಟಿಕೋಣದಿಂದ ಅರ್ಥೈಸಿದರು.

ಅದರ ಫಲವೇ ಸ್ವಲ್ಪ ಹೊತ್ತಿನ ಹಿಂದೆ ಪದ್ಧತಿಯಂತೆ ಉಲ್ಲಾಸವಾಗಿ ಊಟಮಾಡಿ ಮುಗಿದ ಮೇಲೆ ಅವಳು ಮೇಜಿನ ಬಳಿ ನಿಂತು ಕೈಚೀಲದಿಂದ ಕನ್ನಡಿ ತೆಗೆದು ಲಿಪ್‌ಸ್ಟಿಕ್ ಸರಿಪಡಿಸಿಕೊಳ್ಳುತ್ತಿರಲಾಗಿ ನಾಗರಾಜನ್ ಅವಳ ಹಿಂದೆ ಬಂದು ನಿಂತರು. ಆ ಟವಲಿ ನಿಂದ ಕೈ ಒರೆಸಿಕೊಂಡು ಅವಳ ಹಿಂದೆ ಬಂದು ನಿಂತ ನಾಗರಾಜನ್...

ಸ್ವಲ್ಪ ಹಿಂದೆ...

ಮುಖ ಕೆಂಪೇರಿ ಹಣೆಯಲ್ಲಿ ಕೇಶರಾಶಿ ಹಾರಲು ತುಟಿಗಳು ಉರಿದುಹೋದಂತೆ ಕೆಂಪು ಛಾಯೆ ಹರಡಿ ಕಂಪಿಸುತ್ತಾ ಅಶ್ರುಧಾರೆ ಸುರಿಯುತ್ತಿರಲು "ಪ್ಲೀಸ್ ಲಿವ್ ಮಿ ಐ ರಿಗ್ರೆಟ್ ಫಾರ್ ಎವ್ವೆರಿ ಥಿಂಗ್..." ಎಂದು ಅವರಿಂದ ಸರಿದು ದೇಹವೆಲ್ಲಾ ನಡುಗಿ ಅವಳು ನಿಂತ ರೀತಿ...

ತೆರೆಸಾಳ ಆ ಮುಖವೇ ಅವರ ನೆನಪಿನ ತೆರೆಯ ಮೇಲೆ ಬಂದು ನಿಂತಿತು.

ಗಂಟೆ ಎರಡು.

ಮಧ್ಯಾಹ್ನ ಬಿಡುವಿನ ವೇಳೆಗೆ ಹೊರಗೆ ಹೋಗಿದ್ದ ನೌಕರರ ನಡೆದಾಟ, ಟೈಪ್ ರೈಟರ್‌ಗಳ ಶಬ್ದವೂ ಮಂದವಾಗಿ ಆ ಏರ್‌ಕಂಡೀಷನ್ಡ್ ಕೋಣೆಗೆ ಕೇಳಿಸಿತು.

ನಾಗರಾಜನ್ ಒಂದು ಗಂಟೆ ಕಾಲದಲ್ಲಿ ಏಳೆಂಟು ಸಿಗರೇಟ್‌ಗಳನ್ನು ಸೇದಿ ಬಿಸಾಡಿದ್ದರು.

ತೆರೆಸಾಳನ್ನು ಕರೆಯುವ ಕಾಲಿಂಗ್ ಬೆಲ್ ಬಾರಿಸಿದರು.

ಮರುಕ್ಷಣ ತೆರೆಸಾ ಅವರ ಎದಿರು ಬಂದು ನಿಂತಳು.

ನಾಗರಾಜನ್ ತಲೆಯೆತ್ತಿ ಅವಳನ್ನು ನೋಡಲಾಗಲಿಲ್ಲ. ಅವರ ತಲೆ ಬಾಗಿತ್ತು. "ಐ ಆಮ್ ಸಾರಿ – ತೆರೆಸಾ"

ಅವಳು ಏನು ಉತ್ತರ ಹೇಳಿದಳೆಂದು ಅವರಿಗೆ ತಿಳಿಯಲಿಲ್ಲ. 'ಅವಳು ಇನ್ನೂ ಅತ್ತು ಕೊಂಡು ಅದೇ ರೀತಿ ನಿಂತಿದ್ದಾಳೆಯೋ. ತನ್ನ ರಾಜಿನಾಮೆ ಕಾಗದವನ್ನು ಮುಖಕ್ಕೆ ಎತ್ತಿ ಬಿಸಾಡುವಳೋ?' ಎಂಬ ಆತಂಕದಿಂದ ತಲೆಯೆತ್ತಿ ಅವಳನ್ನು ನೋಡಿದರು.

ಅವಳು ಎಂದಿನಂತೆ ಏನೂ ನಡೆಯಲಿಲ್ಲವೆಂಬಂತೆ, ಸ್ವಲ್ಪ ಹಿಂದೆ ಕರ್ಚಿಫ್‌ನಿಂದ ಮುಖ ಮುಚ್ಚಿಕೊಂಡು ಓಡಿದವಳು ತಾನಲ್ಲ ಎಂಬ ನಸುನಗೆಯಿಂದ ಕೈಯಲ್ಲಿ ಷಾರ್ಟ್ ಹ್ಯಾಂಡ್ ನೋಟ್‌ಬುಕ್ ಮತ್ತು ಪೆನ್ಸಿಲ್ ಹಿಡಿದು ನಿಂತಿದ್ದಳು.

ಇವಳು ರಾಜಿನಾಮೆ ಕೊಡುವುದಿಲ್ಲವೆಂದು ಅವರಿಗೆ ಅರ್ಥವಾಯಿತು. ಅವಳು ಬಂದು ನಿಂತ ರೀತಿ ತನ್ನ ಡಿಕ್ಟೇಷನ್ ಬರೆದುಕೊಳ್ಳಲು ಕಾದಿರುವಂತೆ ತೋರಿತು. ಅಂದು ಕೆಲವಾರು ಕೆಲಸ – ಹಲವಾರು ಕಾಗದಗಳನ್ನು ಹಾಕಬೇಕಾಗಿದ್ದುದು ಅವಳಿಗೆ ಗೊತ್ತು. ಎಲ್ಲಕ್ಕೂ ಮೊದಲು ಒಂದು ಕಾಗದ ಡಿಕ್ಟೇಟ್ ಮಾಡಬೇಕೆಂಬ ಅರಿವು ಥಟ್ಟನೆ ಅವರಿ ಗುಂಟಾಯಿತು.

ಕೆಲವು ಬಾರಿ ಅವರು ಎದ್ದು ನಡೆದಾಡುತ್ತಾ ಡಿಕ್ಟೇಟ್ ಮಾಡುತ್ತಿದ್ದರು. ಎಂದಿನಂತೆ ಅವರು ಎದ್ದು ತಮ್ಮ ಕುರ್ಚಿಯ ಹಿಂದೆ ತಲೆಬಾಗಿ ಶತಪಥ ನಡೆದರು. ನಂತರ ಅವಳನ್ನು ನೋಡಿ, "ಪ್ಲೀಸ್ – ಸಿಟ್ ಡೌನ್" ಎನ್ನಲಾಗಿ ತೆರೆಸಾ ಅವರ ಮೇಜಿನ ಮುಂದಿದ್ದ ಕುರ್ಚಿಯಲ್ಲಿ ಕುಳಿತಳು.

"ಡಿಯರ್. ಮಿಸ್ ತೆರೆಸಾ..." ಎಂಬ ಅವರ ಮಾತು ಕೇಳಿ—

"ಯಸ್ ಸರ್" ಎಂದು ತಲೆಯೆತ್ತಿದ್ದಳು ತೆರೆಸಾ.

"ಪುಟ್ ಡೌನ್ ದಿಸ್ ಈಸ್ ಎ ಲೆಟರ್" – 'ಇದು ಕಾಗದ. ಬರೆದುಕೊ' ಎಂದು ಹೇಳಲಾಗಿ ಅವಳು ಮೌನವಾಗಿ ತನ್ನ ಕರ್ತವ್ಯವೆಂಬಂತೆ ಬರೆಯಲಾರಂಭಿಸಿದಳು. ಅವರು ಮುಖ ತಿರುಗಿಸಿ ಬೆನ್ನು ಮಾತ್ರ ಅವಳಿಗೆ ಕಾಣುವಂತೆ ಹೇಳಿದರು :

"ಮಿಸ್ ತೆರೆಸಾ... ಮಗಳಂತೆ ಭಾವಿಸಿ ವಾತ್ಸಲ್ಯ ತೋರಿಸಬೇಕಾದ ನಿನ್ನ ಬಗ್ಗೆ ವರ್ತನೆತಪ್ಪಿ ನಡೆದುಕೊಂಡುದಕ್ಕಾಗಿ ನನಗೆ ನಾಚಿಕೆಯೆನಿಸುತ್ತದೆ. ನನ್ನನ್ನು ಮನ್ನಿಸು ವುದು, ದಂಡಿಸುವುದು ನಿನಗೇ ಸೇರಿದೆ. ನಾನು ನಿನ್ನ ಅಭಿಪ್ರಾಯದಲ್ಲಿ, ಗೌರವದಲ್ಲಿ, ಸ್ಥಾನದಲ್ಲಿ, ಒಂದು ಕ್ಷಣದೊಳಗೆ ಜಾರಿಬಿಟ್ಟೆ. ಇದೇ ನನಗೆ ದಂಡನೆ.

"ತೆರೆಸಾ... ನಾನು ಯಾಕೆ ಹಾಗೆ ಮಾಡಿದೆನೆಂದು ಯೋಚಿಸಿ ನೋಡಿದೆ."

"ಇದು ಹೀಗೆ, ನಾನು ವರ್ತಿಸಿದುದು ಇದೇ ಮೊದಲ ಬಾರಿಯಲ್ಲ. ನಿನ್ನ ಬಳಿ ನನ್ನ ಬಲಹೀನತನವನ್ನು ಒಪ್ಪಿಕೊಳ್ಳುವುದರ ಮೂಲಕ, ಹಾಗೆ ಒಪ್ಪಿಕೊಳ್ಳುವ ಪ್ರೌಢಬುದ್ಧಿ ಈ ನಿಮಿಷ ನನಗೆ ಬರುವ ಮೂಲಕ ನನ್ನನ್ನು ಹಿಡಿದಿದ್ದ ವ್ಯಾಧಿಯೊಂದು, ವಿಕಾರ ನನ್ನಿಂದ ತೊಲಗಿತು ಎಂಬ ನಂಬಿಕೆಯಿಂದ ಇದನ್ನು ನಿನ್ನ ಬಳಿ ಹೇಳುತ್ತಿದ್ದೇನೆ. ಈ ವಯಸ್ಸಿನಲ್ಲಿ ಯುವತಿಯಾಗಿದ್ದರೂ, ದೊಡ್ಡಸ್ತಿಕೆಯವಳು; ಗಣ್ಯಳು; ಎಂದು ನಾನು

ಅರ್ಥಮಾಡಿಕೊಂಡಿದ್ದೇನೆ. ಎಂತಲೇ, ಪಾಪದ ಕ್ಷಮಾಪಣೆ ಕೇಳುವಂತೆ ನಿನ್ನ ಬಳಿ 'ಕನ್‌ಫೆಸ್' ಮಾಡಿಕೊಳ್ಳುತ್ತಿದ್ದೇನೆ.

"ನಿನ್ನ ಬಳಿ ವರ್ತಿಸಿದಂತೆ – ನಡತೆ ತಪ್ಪಿ ನಾನು ಹಲವು ಬಾರಿ ನಡೆದುಕೊಂಡಿದ್ದೇನೆ.

"ಪ್ರಯಾಣ, ಥಿಯೇಟರುಗಳಲ್ಲಿ ಸಂಭವಿಸುವ ಸಂದಣಿಯ ದುರುಪಯೋಗಪಡಿಸಿಕೊಂಡಿದ್ದೇನೆ. ಆಗ ಅವರು ಯಾವುದೋ ಭಯದಿಂದಲೋ ಅವಮಾನಕ್ಕೆ ಅಂಜಿಯೋ ನಾಗರೀಕತೆಯನ್ನು ನೆನೆದು ಸುಮ್ಮನಿದ್ದುದನ್ನು ಅದೇ ಸಮ್ಮತಿಯೆಂದು ವಂಚಿತನಾಗುತ್ತಿದ್ದೆ. ನಂತರ ಅದಕ್ಕಾಗಿ ವ್ಯಥೆಪಟ್ಟುದೂ ಉಂಟು. ನನಗೆ ಈಗ ತಿಳಿಯುತ್ತಿದೆ. ಇದೊಂದು ವ್ಯಾಧಿ. ನಿನ್ನ ದೊಡ್ಡಸ್ತಿಕೆಯಿಂದ ನಾನು ಇದರಿಂದ ಗುಣಪಡೆಯುತ್ತೇನೆ. ನೀನು ಇದನ್ನು ಮರೆತು, ಓರ್ವ ತಂದೆ, ನೀವು ಮುಖ ತಿರುವಿದರೂ ಮಗಳ ಮೇಲೆ ಪ್ರೀತಿಯಿಂದ ಮುತ್ತಿಟ್ಟಂತೆ ಭಾವಿಸೆಂದು ಕೋರುತ್ತೇನೆ. ಇಲ್ಲದಿದ್ದರೆ ನನ್ನ ಈ ತಪ್ಪಿಗೆ ನನ್ನ ಈ ಪಶ್ಚಾತ್ತಾಪ ಸಾಲದು. ಆದರೆ ನೀನು ಕೊಡುವ ಯಾವ ಶಿಕ್ಷೆಗೂ ಸಿದ್ಧನಾಗಿದ್ದೇನೆ" – ಎಂದು ಭಾರವನ್ನು ಇಳಿಸಿಕೊಂಡ ದಾರಿಹೋಕನಂತೆ ಆಶ್ವಾಸನೆಯಿಂದ ನಾಗರಾಜನ್ ಅವಳನ್ನು ನೋಡಿದರು.

ತೆರೆಸಾ ಕರ್ಚೀಫಿನಿಂದ ಎರಡು ಬಾರಿ ಒತ್ತಿಕೊಂಡಳು. ಅವಳ ಮೂಗು ಕೆನ್ನೆಗಳಲ್ಲಿ ಕೆಂಪಡರಿತ್ತು.

ಇದನ್ನು ಟೈಪ್ ಮಾಡಿಕೊಂಡು ಬಾ ಎಂದು ಅವಳನ್ನು ಕಳುಹಿಸಿದ ನಂತರ ಒಂದು ಸಿಗರೇಟ್ ಹಚ್ಚಿ ತನ್ನ ಎರಡು ಕೈಗಳಲ್ಲಿ ಮುಖ ಹಿಡಿದು ಕುಳಿತರು. ತೆರೆಸಾಳ ಕೋಣೆಯಲ್ಲಿ ಟೈಪ್‌ರೈಟರ್ ಶಬ್ದ ಮಾಡಿತು.

ತೆರೆಸಾ ಟೈಪ್ ಮಾಡಿದ ಕಾಗದಗಳನ್ನು ತಂದು ಅವರ ಮೇಜಿನ ಮೇಲಿಟ್ಟು ಅವರ ಮುಖವನ್ನು ನೋಡುತ್ತಾ ನಿಂತಳು. ಅವರು ಕನ್ನಡಕವನ್ನು ಎತ್ತಿ ಹಾಕಿಕೊಂಡು ಕಾಗದದ ಮೊದಲ ಪಂಕ್ತಿಯನ್ನು "ಗೌರವಾನ್ವಿತ ಮಿತ್ರರೆ" ಎಂಬ ಆಂಗ್ಲದ ಮಾತುಗಳನ್ನು ಉಚ್ಚರಿಸಿದವರು ಅವಳನ್ನು ನೋಡಿದರು. ಅವಳು ನಮ್ರತೆಯಿಂದ ತಲೆಬಾಗಿದಳು.

ಅವರು ಮುಂದುವರಿದು ಅದನ್ನು ಓದತೊಡಗಿದರು : "ನೀವು ಡಿಕ್ಟೇಷನ್ ಕೊಟ್ಟು ಟೈಪ್‌ಮಾಡಿಕೊಂಡು ಬರಲು ಹೇಳಿದ ನಿಮ್ಮ ಆಜ್ಞಾಪನೆಯನ್ನು ನೆರವೇರಿಸಲಾಗದೆ ಬೇರೊಂದು ಕಾಗದವನ್ನು ನಿಮ್ಮ ಬಳಿಗೆ ತರುವ ನನ್ನ ಉದ್ಧಟತನವನ್ನು ಮೊದಲು ಮನ್ನಿಸಿ. ನೀವು ಮನಬಿಚ್ಚಿ ಮಾತನಾಡುವ ರೀತಿ ಅದನ್ನು ಕಾಗದವೆಂದು ಡಿಕ್ಟೇಷನ್ ಕೊಟ್ಟಿರಿ. ನನ್ನಿಂದ ಕ್ಷಮಾಪಣೆ ಕೋರುವ ಒಂದು ಕಾಗದವನ್ನು ನನ್ನಿಂದಲೇ ಬರೆಸಿದುದು ನಿಮ್ಮ ಶುದ್ಧ ಹೃದಯಕ್ಕೆ ಮೊದಲು ಸಾಕ್ಷಿ. ಕಾಗದ ಎಂದ ಹೇಳಲ್ಪಡುವ, ನಿಮ್ಮ ಮನಬಿಚ್ಚಿ ಆಡಿದ ಮಾತಿನಲ್ಲಿ ಹೆಚ್ಚು ಸತ್ವವುಳ್ಳ – ನನ್ನ ಭಾವವನ್ನು ಹಾಗೆಯೇ ಪ್ರತಿಫಲಿಸಿದ ವಾಕ್ಯಗಳು : 'ಓರ್ವ ತಂದೆ, ಮುಖ ತಿರುವಿದರೂ ಮಗಳ ಮೇಲೆ ಪ್ರೀತಿಯಿಂದ' ಎಂದು

ಹೇಳಿದಿರಲ್ಲಾ ಅದೇ. ನಾನು ಹಾಗೆಂದು ಸಮಾಧಾನಗೊಂಡನಂತರ ನೀವೂ ಹಾಗೆಂದುದು ನನಗೆ ಮಿತಿಮೀರಿದ ಆನಂದವನ್ನುಂಟುಮಾಡಿತು. ಇದು ನಿಮ್ಮ ಅಪರಾಧವಲ್ಲ. ಸ್ವಲ್ಪ ಜಾರಿದುದಷ್ಟೇ..."

ಈ ಸ್ಥಳದಲ್ಲಿ ಆ ಮಾತುಗಳನ್ನು ಹೊಗಳುವ ರೀತಿಯಿಂದ 'ಜಸ್ಟ್ ಎ ಸ್ಲಿಪ್ ನಾಟ್ ಎ ಫಾಲ್" ಎಂದು ಒಂದು ಬಾರಿ ಬಿಟ್ಟು ಉಚ್ಚರಿಸಿ ಅವಳನ್ನು ನೋಡಿ ನಂತರ ನಾಗ ರಾಜನ್ ಕಾಗದವನ್ನು ಓದತೊಡಗಿದರು.

"ನೀವು ಹೇಳುವಂತೆ ಅದೊಂದು ವ್ಯಾಧಿಯೆಂಬುದಾದರೆ ಅದಕ್ಕೆ ದಂಡನೆಯಿಲ್ಲ. ಚಿಕಿತ್ಸೆ ಅವಶ್ಯಕ. ಅಂತಹ ನಡತೆಗೆಟ್ಟ ವರ್ತನೆ ತಪ್ಪು ಆದರೆ ಅಪರಾಧವಲ್ಲ. ಅಪರಾಧ ಗಳಿಗೇ ಶಿಕ್ಷೆಯಾಗಬೇಕಾದುದು. ತಪ್ಪುಗಳನ್ನು ತಿದ್ದಬಹುದು; ಕ್ಷಮಿಸಬಹುದು. ನಾನು ನಿಜವಾಗಿ ಕ್ರೈಸ್ತ ಹೆಣ್ಣು. ಕ್ಷಮಿಸುವವರನ್ನು ಕ್ಷಮಿಸುತ್ತಾರೆ. ನಾನು ನಿಮ್ಮನ್ನು ದೈನ್ಯ ವಾಗಿ ಕೇಳಿಕೊಳ್ಳುತ್ತೇನೆ: "ಇದನ್ನು ಮರೆತುಬಿಡಿ. ಇದಕ್ಕಾಗಿ ಚಿಂತೆಪಡುವುದನ್ನು ಬಿಡಿ.

"ಒಪ್ಪಿಕೊಂಡಂತೆ ನೀವು ನನ್ನ ಹುಟ್ಟುಹಬ್ಬಕ್ಕೆ ಬರುತ್ತೀರಲ್ಲವೆ? ನಿಮ್ಮ ಒಳಿತಿಗಾಗಿ ನಾನು ಮದ್ಯಪಾನ ಮಾಡುತ್ತೇನೆ"

"ನಿಮ್ಮ ನಲ್ಮೆಯ—"

"ತೆರೆಸಾ ನೀನು ಎಷ್ಟು ಉದಾರ ಚಿತ್ತವುಳ್ಳವಳು!"

ರಾತ್ರಿ ಎಂಟು ಗಂಟೆಗೆ ಮನೆಗೆ ಹಿಂತಿರುಗಿ ನಾಗರಾಜನ್ ಕಾರನ್ನು ಷೆಡ್‌ನಲ್ಲಿ ಬಿಡಲು ಹೋದಾಗ, ಷೆಡ್ಡಿನ ಒಂದು ಮೂಲೆಯಲ್ಲಿ, ದಾಡಿ ಮೀಸೆ ಬೆಳೆದು ಓರಣವಿಲ್ಲದ ತಲೆಗೂದಲುಳ್ಳ ಕನ್ನಯ್ಯ ಎದ್ದು ನಿಲ್ಲುವುದನ್ನು ಕಂಡರು. ಕಾರಿನ ಲೈಟುಗಳನ್ನು ಆರಿಸದೆ ತಲೆಯನ್ನು ಹೊರಹಾಕಿ ಅವನನ್ನು ದೃಷ್ಟಿಸಿ ನೋಡಿದರು. ಬೆಳಕಿನಿಂದಲೋ ನಾಚಿಕೆಯಿಂದಲೋ ಸಂಕೋಚದಿಂದ ಮುಖವನ್ನು ಮುಚ್ಚಿಕೊಂಡ ಕನ್ನಯ್ಯ.

ವರಾಂಡದಲ್ಲಿ ನಾಗರಾಜನ್ ಅವರ ಮಗಳೂ ಪತ್ನಿಯೂ ಕನ್ನಯ್ಯನನ್ನು ಒಳಗೆ ಬರದಂತೆ ತಡೆಯಲು ದ್ವಾರಪಾಲಕರಂತೆ ನಿಂತಿದ್ದರು.

"ಅವನು ಬಂದರೆ ಒಳಗೆ ಬಿಡಬೇಡಿ" – ಎಂದು ನಾಗರಾಜನ್ ಅವರೇ ಆಜ್ಞಾಪಿ ಸಿದ್ದರು.

"ಏನೋ ತಪ್ಪು ಮಾಡಿಬಿಟ್ಟೆ. ಯಾಕೆ ಹಾಗೆ ಮಾಡಿದೆನೆಂದು ಗೊತ್ತಿಲ್ಲ. ಹಾಗೆ ತಪ್ಪು ಮಾಡಿದ ಮರುಕ್ಷಣದಿಂದ ಒಂದೊಂದು ನಿಮಿಷವೂ ವ್ಯಥೆಪಟ್ಟಿದ್ದೇನೆಯೇ ಹೊರತು ಸಂತೋಷವಾಗಿಲ್ಲಪ್ಪ ನಾನು. ನಾನು ತಿಳಿವುಗೇಡಿ" – ಎಂದು ಹಣೆ ಚಚ್ಚಿಕೊಂಡು ಅವನು ರೋದಿಸಿದ.

ನಾಗರಾಜನ್ ಮೌನವಾಗಿ ಟೈಯನ್ನು ಕಳಚುತ್ತಾ ವರಾಂಡದಲ್ಲಿ ಇದ್ದ ಬೆತ್ತದ ಕುರ್ಚಿಗಳೊಂದರಲ್ಲಿ ಕುಳಿತರು.

ಅವರ ಮಗಳೂ ಪತ್ನಿಯೂ ಒಳಗೆ ಹೋದರು.

ಕನ್ನಯ್ಯ ಬೆಳಕಿಗೆ ಬಂದು ಅವರೆದುರು ನಿಂತ.

ಅವನು ಮೌನವಾಗಿ ತಲೆಬಾಗಿ ನಿಂತುದನ್ನು ನೋಡಿ ಅವರಿಗೆ ಪರಿತಾಪವೆನಿಸಿತು. ಅವರೆಂದುಕೊಂಡರು :

'ಇವನು ಬರಿಯ ಕಳ್ಳನಾಗಿದ್ದರೆ ಈಗ ಯಾಕೆ ಹಿಂತಿರುಗಿ ಬರಬೇಕು? ಈ ಮನೆಯಲ್ಲಿ ಪಡುವ ಶ್ರಮ ಬೇರೆಲ್ಲಿ ಪಟ್ಟರೂ ಅವನ ಹೊಟ್ಟೆಯ ಪಾಡು ಸಾಗುವುದು... ಆದರೂ, ಜೀವನ ನೂಕಲು ಇಲ್ಲಿಗೆ ಹಿಂದಿರುಗಿ ಬಂದಿದ್ದಾನೆ ಎಂದುಕೊಳ್ಳುವುದು ಸರಿಯಲ್ಲ. ಇದೋ ಎದಿರುಗಡೆ ನೆನ್ನೆಯಿಂದ ಹೂ ಬಿಡಲು ಪ್ರಾರಂಭಿಸಿದೆಯಲ್ಲ ಈ ಮಲ್ಲಿಗೆ ಗಿಡ, ಇದನ್ನು ತಂದು ನೆಟ್ಟು, ಪಾತಿ ತೆಗೆದು ನೀರು ಹಾಕಿದ ಪಾಶ ಇವನು ಹಿಂತಿರುಗಿ ಬರುವಂತೆ ಮಾಡಿರಲಾರದೆ...? ಊಟ ಮಾಡುವಾಗ ಪ್ರತಿಯೊಂದು ಬಾರಿಯೂ ನಾನು ಇವನನ್ನು ಜ್ಞಾಪಕ ಮಾಡಿಕೊಳ್ಳುವಂತೆ ಇವನೂ ನನ್ನನ್ನು ಜ್ಞಾಪಿಸಿಕೊಂಡಿರ ಲಾರನೆ? ಮತ್ತೆ ಯಾಕೆ ಆ ಹಣಕ್ಕೆ ಆಶೆಪಟ್ಟು ಅದನ್ನು ಎತ್ತಿಕೊಂಡು ಓಡಿದ...?'

"ಏನೋ, ನನ್ನನ್ನು ಕೇಳಿದ್ದರೆ ನಿನಗೆ ಹಣ ಕೊಡುತ್ತಿರಲಿಲ್ಲವೆ? ಕಳ್ಳನಂತೆ ಯಾಕೆ ಹೀಗೆ ಮಾಡಿದೆ?" – ಮನೆಯಲ್ಲಿದ್ದ ಇತರರ ತೃಪ್ತಿಗಾಗಿ ಎತ್ತಿದ ಧ್ವನಿಯಲ್ಲಿ ವಿಚಾರಿಸಿದರು.

"ಅದನ್ನೇ ಯೋಚಿಸಿ ನೋಡುತ್ತಿದ್ದೇನೆ. ಹಣವನ್ನು ಆ ಷೆಲ್ಫ್‌ನಲ್ಲಿ ನೋಡಿದಾಗ... ಬೇರೆ ಯಾರೂ ಇರಲಿಲ್ಲ. ಯಾರೂ ಇಲ್ಲದ ಕಡೆ ಹಣವನ್ನು ಕಂಡರೆ ಎತ್ತಿಕೊಳ್ಳಬೇಕೆಂಬ ಕಳ್ಳ ಮನೋಭಾವದಿಂದ ಎತ್ತಿಕೊಂಡೆ. ಇದು ಮೊದಲನೆಯ ಬಾರಿಯೇನು...? ಎಷ್ಟೋ ಬಾರಿ, ಛಿ" – ಅವನು ತನ್ನನ್ನು ತಾನೇ ಹಳಿದುಕೊಂಡ.

ಇಂದು ಮಧ್ಯಾಹ್ನ ಇದೇ ಪದ್ಧತಿಯಲ್ಲಿ ತಾವಿದ್ದುದನ್ನು ನೆನೆಸಿಕೊಂಡರು ನಾಗರಾಜನ್

"ಅದೊಂದು ವ್ಯಾಧಿಯಪ್ಪ" – ಎಂದರು.

"ಹೌದು. ವ್ಯಾಧಿಯೇ" – ಎಂದು ತಲೆಯ ಮೇಲೆ ಹೊಡೆದುಕೊಂಡ ಕನ್ನಯ. "ನೀವು ಏನು ದಂಡನೆ ವಿಧಿಸಿದರೂ ಅನುಭವಿಸುತ್ತೇನೆ..." ಎಂದು ಕೈಗಳನ್ನು ಹಿಸುಕಿ ಕೊಂಡು ಕಣ್ಣೀರು ಬಿಟ್ಟ.

ನಾಗರಾಜನ್ ನಿರ್ಮಲವಾಗಿ ನಕ್ಕರು.

"ವ್ಯಾಧಿಗೆ ಚಿಕಿತ್ಸೆ ಅವಶ್ಯಕ, ದಂಡನೆಯಲ್ಲ." ಎಂದು ಹೇಳುವಾಗ ಅವರಿಗೇ ಕಣ್ಣೀರು ಬಂತು.

"ನಿನ್ನ ವ್ಯಾಧಿ ವಾಸಿಯಾಗಿದೆ... ಮನಃಪೂರ್ವಕವಾಗಿ ಕ್ಷಮಿಸುವುದೇ ಇದಕ್ಕೆ ಚಿಕಿತ್ಸೆ. ಈ ಚಿಕಿತ್ಸೆಯನ್ನು ಯಾರೂ ನಿನಗೆ ಮಾಡಿದುದಿಲ್ಲ. ಇನ್ನು ಮೇಲೆ ಸರಿಹೋಗುತ್ತೆ ಬಿಡು. ಒಳಗೆ ಹೋಗು. ನೀನು ಮಾಡಿದುದು ತಪ್ಪು – ದಂಡನೆ ಮಾಡಬೇಕಾದ ಅಪರಾಧವಲ್ಲ" ಎಂದು ಅವರು ಹೇಳಿದುದನ್ನು ಕೇಳಿ ಒಳಗೆ ಕುಳಿತಿದ್ದ ಅವರ ಮಗಳೂ

ಪತ್ನಿಯೂ 'ಇವರು ಎಷ್ಟು ಉದಾರಚಿತ್ತವುಳ್ಳವರು' ಎಂದು ನಾಗರಾಜನ್ ಅವರ ಬಗ್ಗೆ ಹೆಮ್ಮೆಗೊಂಡರು.

ಅವರಿಗೇನು ಗೊತ್ತು?

—ಕ್ಷಮಿಸಲ್ಪಟ್ಟವರೇ ಕ್ಷಮಿಸುತ್ತಾರೆ ಎಂಬುದು.

# 9. ಅಗ್ರಹಾರದ ಬೆಕ್ಕು

ನಮ್ಮ ಊರು ಬಹಳ ಸೊಗಸಾದ ಊರು. ನಮ್ಮ ಅಗ್ರಹಾರವೂ ಚೆಂದ. ನಮ್ಮ ಅಗ್ರಹಾರದವರು ತುಂಬಾ ಸುಂದರರು. ಸೌಂದರ್ಯವೆಂದರೆ ನೀವು ಏನೆಂದು ಅರ್ಥ ಮಾಡಿಕೊಂಡಿರುವಿರೋ ನನಗೆ ತಿಳಿಯದು. ನನ್ನಷ್ಟರ ಮಟ್ಟಿಗೆ ಹೇಳುವುದಾದರೆ ಒಂದರ ಬಗ್ಗೆ ಸಂತೋಷವೆನಿಸಿದರೆ ಅದು ಬಹಳ ಸುಂದರವಾಗಿದೆಯೆಂದು ತಿಳಿಯಬೇಕು. ಮೂವತ್ತೈದು ವರ್ಷಗಳ ಹಿಂದೆ ಅಲ್ಲಿ, ಆ ಬೀದಿಯಲ್ಲಿ ಒಂದು ಹಳೆಯ ಕಾಲದ ಮನೆಯಲ್ಲಿ ಗರ್ಭಗುಡಿಯಂತೆ ಕತ್ತಲು ಕವಿದ ಕೋಣೆಯಲ್ಲಿ ಜನ್ಮವೆತ್ತಿ ಆ ಬೀದಿಯ ಮಣ್ಣಿನಲ್ಲಿ ಆಟವಾಡಿ ಅಲ್ಲಿಯವರ ಪ್ರೀತಿಗೂ ಕೋಪಕ್ಕೂ ಗುರಿಯಾಗಿ ಬೆಳೆದು, ಈಗ ಆಗಲಿ ಇಪ್ಪತ್ತೈದು ವರ್ಷಗಳಾದ ನಂತರವೂ ಆ ನೆನಪುಗಳು, ಅನುಭವಗಳು, ಸಂದರ್ಭಗಳು ಎಲ್ಲಾ ಜ್ಞಾಪಕ ಮಾಡಿಕೊಳ್ಳುವುದರಲ್ಲಿ ಸಂತೋಷವಿದೆಯೆಂದರೆ ಅವೆಲ್ಲಾ ಸುಂದರವಾದ ಅನುಭವ ಮತ್ತು ನೆನಪುಗಳೇ ಅಲ್ಲವೆ.

ನಾನು ನೋಡಿದ ಊರು – 'ಇವು ಎಂದೂ ಹೊಸದಾಗಿದ್ದಿರಲಾರದು' ಎಂಬ ದೃಢ ಭಾವವನ್ನು ಅಳಿಸುವ ಮಟ್ಟಕ್ಕೆ ಹಳೆಯದಾಗಿ ಹೋದ ಆ ಅಗ್ರಹಾರದ ಮನೆಗಳೂ 'ಇವರು ಎಂದೂ ನವ್ಯವಾಗಲಾರರು' ಎಂಬ ರೀತಿ ತೋರಿ ಅಲ್ಲಿ ಬಾಳಿದ ಮನುಷ್ಯರು ಈಗಲೂ ಹಾಗೆಯೇ ಇದ್ದಾರೆ ಎಂದು ನಿಶ್ಚಯವಾಗಿ ನಾನು ಹೇಳಲಾರೆ. ಆದರೂ, ಅವರು ಹಾಗೆಯೇ ಇದ್ದಾರೆ ಎಂದು ನೆನಪಿಸಿಕೊಳ್ಳುವುದರಲ್ಲಿ ಒಂದು ಸೌಂದರ್ಯವಿದೆ, ಆನಂದವಿದೆ.

ನಾನು ಈಗ ಬಹಳ ಬೆಳೆದಿದ್ದೇನೆ. ಬಹಳ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ನನ್ನಲ್ಲಿದ್ದ ಚೇಷ್ಟೆಯ ಗುಣ ಬಹಳವಾಗಿ ಬಿಟ್ಟುಹೋಗಿವೆ. ಆದರೂ ಕಲ್ಪನೆಗಾಗಿ ಇಷ್ಟು ಮೈಲಿ ದೂರದಲ್ಲಿದ್ದುಕೊಂಡು ಆ ಊರಿನ ಬೀದಿ ಪ್ರವೇಶಿಸಿದಾಗ – ಕಲ್ಪನೆಯಿಂದ ದೂರವನ್ನು ಮಾತ್ರ ದಾಟಬಹುದೆ? – ಕಾಲವನ್ನೂ ದಾಟಿ ನಾನು ಹತ್ತು ವರ್ಷದ ಬಾಲಕನಾಗಿಯೇ ಪ್ರವೇಶಿಸುತ್ತೇನೆ.

ಆ ಕೊಳದ ತೀರದಲ್ಲಿ ನಾನು ಬರುವಾಗ, ನನ್ನ ಇರುವಿಕೆಯನ್ನು ಸ್ವಲ್ಪವಾದರೂ ಮನಸ್ಸಿಗೆ ತಂದುಕೊಳ್ಳದೆ ಆ ಹೆಣ್ಣು ಮಂದಿ ಸ್ನಾನ ಮಾಡುತ್ತಿರುವಾಗ ನಾನು ಮೆಟ್ಟಲು ಮೇಲೆ ನಾನು ಸ್ವಲ್ಪ ಹೊತ್ತು ಕುಳಿತುಕೊಳ್ಳುತ್ತಿದ್ದೆ. ಅಲ್ಲಿ ತಂಪಾದ ಹವೆ. ಕೊಳದಲ್ಲಿ ನೀರಿನ ಮೇಲೆ ಒಂದಡಿ ಎತ್ತರ ಮೀನುಗಳು ಹಾರಿ ಮತ್ತೆ ನೀರಿಗೆ ಬೀಳುತ್ತಿದ್ದುವು.

ಸಣ್ಣ ಕಲ್ಲುಗಳನ್ನು ಸಂಗ್ರಹಿಸಿಕೊಂಡು ಕೊಳದಲ್ಲಿ ಬೀರುತ್ತಾ, ಎಷ್ಟು ಹೊತ್ತಾದರೂ ಕುಳಿತಿರಬಹುದಲ್ಲ – ಎಲ್ಲೆಲ್ಲಿ ಹೋಗಿ ಏನೇನು ತಳ್ಳಿ, ಬಾಚಿ ಕೂಡಿಸಿದೆವು – ?

ವೆಂಕಟು, ಉದ್ದಂಡಂ, ಸುಂದರಂ, ದಂಡಪಾಣಿ ಎಲ್ಲರೂ ಹೆಂಗಸರು ಸ್ನಾನ ಮಾಡುವ, ಗಂಡಸರು ಸ್ನಾನ ಮಾಡುವ ಮೆಟ್ಟಿಲುಗಳ ಮಧ್ಯೆ ಅಡ್ಡಗೋಡೆ ಮೇಲೆ ಸಾಲಾಗಿ ನಿಂತು, ಒಬ್ಬೊಬ್ಬರಾಗಿ 'ಡುಬುಕ್, ಡುಬುಕ್' ಎಂದು ನೀರಿಗೆ ಕುಣಿದು ನೀರು ಸುರಿಯುತ್ತಿರಲು ಒಂದು ರಿಬ್ಬನ್ ಕೌಪೀನವನ್ನು ಎಳೆದು ಕಟ್ಟಿಕೊಂಡು ಮತ್ತೆ ಗೋಡೆಯ ಮೇಲೇರಿ ಬಂದು ಸಾಲುಗಟ್ಟುತ್ತಿದ್ದರು.

ನಾನು ಯಾವಾಗಲೂ ಒಬ್ಬನೇ. ನನ್ನನ್ನು ಅವರು ಸೇರಿಸಿಕೊಳ್ಳುತ್ತಿರಲಿಲ್ಲ. ನಾನು ದುಷ್ಟನಂತೆ.

ನಾನು ಆ ಬಾಲಕರೊಡನೆ ಸೇರದೆ ಶಾಂತಿಯಾಗಿ ಕುಳಿತಿರುವುದನ್ನು ನೋಡಿದ ಹಿರಿಯರು ನನ್ನನ್ನು ಮಾದರಿಯಾಗಿ ತೋರಿಸಿ ಮಾತನಾಡುತ್ತಿದ್ದರು. ನಾನು ಚೇಷ್ಟೆ ಮಾಡದೆ 'ದೇವರೇ' ಎಂದಿದ್ದೇನಂತೆ. ನಾನು ಸುಶಿಕ್ಷಿತನಾದ ಶಾಂತವಾದ ಹುಡುಗನಂತೆ... 'ಛೀ, ಪಾಪಿ ಅವನನ್ನೂ ಸೇರಿಸಿಕೊಂಡು ಆಟವಾಡಿ. ಹೋಗಲಿ ನೀನು ಬಾರೋ ಮಗು. ಅವರು ನಿನ್ನನ್ನು ಸೇರಿಸಿಕೊಂಡು ಆಟವಾಡಲಿಲ್ಲವೆಂದರೆ ಕೊರಗಬೇಕಾದ್ದಿಲ್ಲ... ನೀನು ಬಾರೋ, ನಿನಗೆ ತಿನ್ನುವುದಕ್ಕೆ ಕೊಡುತ್ತೇನೆ... ಕಾಫಿಬೀಜ ಪುಡಿಮಾಡೋಣ ಬರುತ್ತೀಯಾ...?' ಎಂದೆಲ್ಲಾ ನನ್ನ ಮೇಲೆ ಪ್ರೀತಿ ತೋರುತ್ತಿದ್ದ ಹಿರಿಯರ ವಾತ್ಸಲ್ಯ ನನ್ನ ಮನಸ್ಸಿಗೆ ಹಿತವಾಗಿರುತ್ತಿತ್ತು. ನಾನು ಅವರಿಗೆ ಕಾಫಿಬೀಜವನ್ನು ಪುಡಿಮಾಡಿಕೊಡುವುದರಿಂದ ಹಿಡಿದು ಕೆಲವು ವೇಳೆ ಕಾಲು ಒತ್ತುವುದರವರೆಗೆ ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದೆ. ನಮ್ಮ ತಾಯಿ ಹೇಳಿದರೆ ಮಾತ್ರ ಕೇಳುತ್ತಿರಲಿಲ್ಲ. 'ಹೋಗು ಹೋಗು' ಎಂದು ಓಡುತ್ತಿದ್ದೆ.

ನನಗೆ ಹತ್ತು ವರ್ಷ ವಯಸ್ಸಾಗುವುದರೊಳಗೆ ನನ್ನ ತಾಯಿಗೆ ಐದು ಜನ ಮಕ್ಕಳು. ತಾಯಿಯ ಪ್ರೀತಿ ಉಪಚಾರ ನನಗೆ ನೆನಪಿನಲ್ಲೂ ಇಲ್ಲ.

ನನ್ನ ತಾಯಿ ನನ್ನನ್ನು ಕರೆಯುತ್ತಿದ್ದ ಹೆಸರೇ 'ಏಯ್ ಋಣಪಾತಕ' ಎಂದು. ಊರಿಗೆ, ಬೀದಿಗೆ, ಪರರಿಗೆ, ಒಳ್ಳೆಯವನಂತೆ 'ದೇವರೇ' ಅಂತಿದ್ದಾನೆ ಎಂದು ತೋರುತ್ತಿದ್ದ ನಾನು ಮನೆಯಲ್ಲಿ ಅಷ್ಟೂ ಚೇಷ್ಟೆ ಮಾಡುತ್ತಿದ್ದೆ.

ಏನು ಚೇಷ್ಟೆ? ಯಾವುದಾದರೂ ಮಗು ಓಡಿ ಬರುವಾಗ ಸುಮ್ಮನೆ ಕುಳಿತಿರುತ್ತಿದ್ದ ನಾನು ಸುಮ್ಮನೆಯೇ ಅಡ್ಡವಾಗಿ ಕಾಲು ನೀಡುತ್ತಿದ್ದೆ... ಕೆಳಗೆ ಬಿದ್ದು ರೋದಿಸುವ ಮಗುವಿಗೆ ಕೆಲವು ವೇಳೆ ಬಾಯಿಯಿಂದಲೋ ಹಲ್ಲಿನಿಂದಲೋ ರಕ್ತ ಬರುತ್ತಿತ್ತು. ನಾನು ಮತ್ತೆ ಸುಮ್ಮನೆಯೇ ಕುಳಿತಿರುತ್ತಿದ್ದೆ. ಆ ಶನಿಗಳಿಗೆ ಮಾತು ಬರದಿದ್ದರೂ ಅತ್ತುಕೊಂಡೇ, ಕೈನೀಡಿ ಸನ್ನೆಮಾಡಿ ನಾವು ಬಿದ್ದುದಕ್ಕೆ ನಾನೇ ಕಾರಣ ಎಂದು ಹೇಗೋ ತಿಳಿಸಿಬಿಡುತ್ತಿದ್ದರು.

"ಋಣಪಾತಕ ಮಾಡುವುದನ್ನು ಮಾಡಿಬಿಟ್ಟು ಬೆಕ್ಕಿನಂತೆ ಕುಳಿತಿರುವುದು ನೋಡು" ಎಂದು ನನ್ನ ತಾಯಿ ಬಂದು ಬೆನ್ನಿನ ಮೇಲೆ ಹೊಡೆಯುತ್ತಿದ್ದರು. ಹೊಡೆದುಬಿಟ್ಟು "ಕೈಯೆಲ್ಲಾ ಉರಿಯುತ್ತೆ... ಕತ್ತೆ" ಎಂದು ನೋವಿನಿಂದ ನನ್ನನ್ನು ಅಲ್ಲಿಂದ ಓಡಿಸು ತ್ತಿದ್ದರು.

"ಯಾಕೇ, ಅವನನ್ನು ಹಾಗೆ ಹೊಡೆಯುತ್ತಿದ್ದೀಯೆ. ಪಾಪ ದೇವರೇ ಎಂದು ಕುಳಿತಿ ದ್ದಾನೆ" ಎಂದು ಯಾರಾದರೂ ನೆರೆಹೊರೆಯವರು – ಎದಿರು ಮನೆ ಅತ್ತೆ ಬಂದು – ಅವರು ಬಂದಮೇಲೆ ಅಳಲಾರಂಭಿಸಿದ ನನ್ನನ್ನು ಅಪ್ಪಿ ಕರೆದುಕೊಂಡು ಹೋಗು ತ್ತಿದ್ದರು. ತಿಂಡಿ ಸಿಕ್ಕಿದ ಮೇಲೆ ನಾನು ಸಮಾಧಾನಗೊಳ್ಳುತ್ತಿದ್ದೆ. ಆದರೂ ಅಲ್ಲಿಯೂ ಸುಮ್ಮನಿದ್ದುಕೊಂಡೇ ಏನಾದರೊಂದು ಮಾಡಿಬಿಡುತ್ತಿದ್ದೆ. ನಂತರ ಹೇಗಾದರೂ ಆಪಾದನೆಯಿಂದ ತಪ್ಪಿಸಿಕೊಂಡುಬಿಡುತ್ತಿದ್ದೆ... ಕಾಫಿಬೀಜ ಪುಡಿ ಮಾಡುವ ಮಿಷನ್ನಿ ನೊಳಗೆ ಮಣ್ಣು ಹಾಕಿ ಅರೆಯುವುದು... ಥಟ್ಟನೆ "ಅತ್ತೆ... ಇಲ್ಲಿ ನೋಡಿ. ಯಾರೋ ಮಿಷನ್ನಿನೊಳಗೆ ಮಣ್ಣು ಹಾಕಿ ಪುಡಿ ಮಾಡಿದ್ದಾರೆ ಎಂದು ಕೂಗಿಕೊಳ್ಳುತ್ತಿದ್ದೆ."

"ಬೇರೆ ಯಾರು? ನಮ್ಮ ಮನೆಯ ಋಣಪಾತಕನೇ ಇರಬೇಕು" ಎಂದು ಅವರ ಮನೆಯ ಋಣಪಾತಕ ಮಕ್ಕಳನ್ನು ಹುಡುಕಿ ಹಿಡಿದು ನಾಲ್ಕೇಟು ಬಿಡಿಸಿದರೆ ಒಂದು ಸಂತೋಷ, ನೆಮ್ಮದಿ.

ನನ್ನ ತಾಯಿ ಮಾತ್ರ ನನ್ನ ಮೇಲೆ ಅನುತಾಪ ತೋರುವವರನ್ನು ಎಚ್ಚರಿಸುತ್ತಲೇ ಇರುತ್ತಿದ್ದರು : "ಅವನನ್ನು ನಂಬಬೇಡಿ. ನೋಡಿದರೆ ಮುಸುಮುಸು ಅಂತ ಬೆಕ್ಕಿನಂತಿರು ತ್ತಾನೆ. ಮೈಯೆಲ್ಲಾ ವಿಷ... ಏನೋ ಹೇಳುತ್ತಾರಲ್ಲ ಹಾಗೆ ಬೆಕ್ಕು ಮಾಡುವುದೆಲ್ಲಾ ಚೇಷ್ಟೆ, ಹೊಡೆದರೆ ಪಾಪ ಹಾಗೆ..."

ಅದನ್ನು ಕೇಳಿ "ಯಾಕೋ, ಹೌದೇನೋ?" ಎಂದು ನೆರೆಹೊರೆಯವರು ನನ್ನನ್ನು ನೋಡುತ್ತಿದ್ದರು. ನಾನು ಏನೂ ಅರಿಯದವನಂತೆ ಅವರನ್ನು ನೋಡುತ್ತಿದ್ದೆ.

"ಛೀ, ಹೋಗು ಮಗುವನ್ನು ಯಾಕೆ ಹೀಗೆ ಅರೆಯುತ್ತೀಯ! ನೀನು ಬಾರೋ..." ಎಂಬ ಪ್ರೀತಿ, ಅಪ್ಪುಗೆ ಎಷ್ಟು ಹಿತವಾಗಿ ಆನಂದವಾಗಿರುತ್ತಿತ್ತು! ಆದರೆ ಆ ಅನುತಾಪ ತೋರುವ ಅವರಲ್ಲೂ ನಾನು ನಿಜವಾಗಿ, ಸತ್ಯವಾಗಿರುತ್ತಿರಲಿಲ್ಲವೆಂಬುದು ನನಗೆ ಮಾತ್ರ ಗೊತ್ತು.

ಸರಿ! ನಾನೇನು ಹೇಳುತ್ತಿದ್ದೇನೆ! ಆ ಅಗ್ರಹಾರದ ಬೆಕ್ಕಿನ ವಿಚಾರ ಹೇಳಲು ಪ್ರಾರಂಭಿಸಿ – ಅಗ್ರಹಾರದ ವಾಸಿಗಳ ಬಗ್ಗೆಯೂ ನನ್ನ ಬಗ್ಗೆಯೂ ಹೇಳುತ್ತಿದ್ದೇನಲ್ಲಾ – ಇಪ್ಪತ್ತೈದು ವರ್ಷಗಳ ಹಿಂದೆ ಹತ್ತು ವರ್ಷಗಳವರೆಗೆ ಬಾಳಿದ್ದ ಒಂದು ಗ್ರಾಮವನ್ನೂ ಅಗ್ರಹಾರವನ್ನೂ ಅಲ್ಲಿ ವಾಸಿಸಿದವರ ಬಗ್ಗೆ ಇನ್ನೂ ಎಷ್ಟು ದಿನ ಬೇಕಾದರೂ ವಿವರಿಸಿ ಕೊಂಡಿರಬಲ್ಲೆ. ನನಗೆ ಬೇಸರವಾಗದು. ಆಯಾಸವಾಗದು. ಹಾಗೆ ನೋಡಿದರೆ ನಾನು ವಿವರಿಸಿಕೊಂಡು, ಮಾತಾಡಿಕೊಂಡು, ಬರೆದುಕೊಂಡಿರುವುದೆಲ್ಲಾ ಒಂದು ಊರು

ಒಂದು ಬೀದಿಗೆ ಸೇರಿದವರ ಬಗ್ಗೆ ಮಾತ್ರ. ಮೀನಾ, ರುಕ್ಕು, ಪಟ್ಟು, ಗೌರಿ ಅಜ್ಜಿ, ಆನಂದಶರ್ಮ, ವೈದ್ಯ ರಾಘವಯ್ಯರ್, ಗಣಪತಿ ಅಯ್ಯರ್, ಶಂಕರಶರ್ಮ ಇವರೆಲ್ಲರೂ ಪರಸ್ಪರ ಪರಿಚಯಸ್ಥರು. ಇವರು ಆಗ ಇದ್ದುದು ಈಗ ಹೇಗಿದ್ದಾರೆಂದು ನಾನು ಈಗ ಕಲ್ಪನೆ ಮಾಡಿಕೊಳ್ಳುವುದು. ಇವರುಗಳಲ್ಲಿ ಕೆಲವರು ಸಿಕ್ಕಾಪಟ್ಟೆ ಪಟ್ಟಣದ 'ಮರ್ಕ್ಯುರಿ ಲೈಟ್' ಬೆಳಕಿನಲ್ಲಿ ನನ್ನ ಬಳಿ ಸಿಕ್ಕಿ – ಕೊಂಡುದು, ಕಾಲ ಹೆಜ್ಜೆಯ ತುಳಿತದಲ್ಲಿ ಇವರು ಬಾಗಿಹೋದುದು, ಬಿದ್ದುಹೋದುದು, ಏಟು ತಪ್ಪಿಸಿಕೊಂಡು ಓಡಿಹೋದುದು, ಏಟು ಬಿದ್ದರೂ 'ಏನೂ ಇಲ್ಲವಲ್ಲ' ಎಂದು ಏಟು ಬಿದ್ದಕಡೆ ಒರೆಸಿಕೊಂಡುದು, ಎಲ್ಲಿಯೋ ಬಿದ್ದ ಏಟಿಗೆ, ಎಲ್ಲಿಯೋ ಹೋಗಿ ಬಿದ್ದುದು, ಸಮಯದಲ್ಲಿ ನನ್ನ ಬಳಿಗೇ ಬಂದು ಡಿಕ್ಕಿ ಹೊಡೆದು ಗುದ್ದು ತಿಂದುದು – ಇವೆಲ್ಲದರ ಬಗ್ಗೆ ಹೇಳುವುದರಲ್ಲಿ ನನಗೆ ಬೇಸರವೇ ಇಲ್ಲ; ಆಯಾಸವೇ ಇಲ್ಲ. ನನಗೆ ಅವರ ಬಗ್ಗೆ ಒಂದು ಪ್ರೀತಿ, ಅವರಿಗೆ ಸಂಬಂಧಪಟ್ಟು ದೆಲ್ಲಾ ನನಗೆ ಹೆಚ್ಚಿನದು!

ಆದರೆ ಅವರಲ್ಲಿ ಕೆಲವರಿಗೆ ಇದೇ ಬೇಸರವಾಗಿ ಹೋಯಿತೇನೋ... ಉಂ ಭಯ ವಾಗಿರಬೇಕು. ಏನೋ ಸಂಕಟವಾದಂತೆ 'ಏನ್ ಸಾರ್, ಅಗ್ರಹಾರದ ಜನರ ಬಗ್ಗೆಯೇ ಬರೆದುಕೊಂಡು' ಎಂದು.

ನಾನೇನು ಮಾಡಲಿ? ನನಗೆ ಗೊತ್ತಿದ್ದುದನ್ನು ತಾನೆ ಬರೆಯುತ್ತೇನೆ? ಸರಿ, ಈ ಸಾರಿ ಬದಲಾವಣೆಗೆ ಆ ಅಗ್ರಹಾರದ ಜನರನ್ನು ಬಿಟ್ಟು ನನಗೆ ಗೊತ್ತಿರುವ ಬೆಕ್ಕಿನ ಬಗ್ಗೆ ಬರೆಯುತ್ತೇನೆ. ಬೆಕ್ಕುಗಳಿಗೆ ನಿಶ್ಚಯವಾಗಿ ಬೇಸರ, ಆಯಾಸ, ಸಂಕಟ ಯಾವುದೂ ಉಂಟಾಗುವುದಿಲ್ಲ. ಬೆಕ್ಕುಗಳು ಕತೆಯನ್ನು ಬರೆಯುವುದೋ ಕತೆಯನ್ನು ಕದಿಯು ವುದೋ ಇಲ್ಲ. ಬೆಕ್ಕುಗಳನ್ನು ಕಂಡರೆ ನಮ್ಮ ಕಣ್ಣಿಗೆ ಮಾತ್ರ 'ಆಷಾಢಭೂತಿ' ಮಾದರಿ ಇರುತ್ತವೆಯೇ ಹೊರತು. ಪಾಪ, ಅವುಗಳಿಗೆ ಅಂತಹ ಗುಣಗಳು ನಿಶ್ಚಯವಾಗಿಯೂ ಇಲ್ಲ.

ನನಗೆ ಬೆಕ್ಕುಗಳನ್ನು ಕಂಡರೆ ಸ್ವಲ್ಪವೂ ಇಷ್ಟವಾಗುವುದಿಲ್ಲ. ಒಂದು ತರಹ ಅವರ್ಷಣೆ. ಸಾಧಾರಣವಾಗಿ ನನಗೆ ಯಾವ ಸಾಕುಪ್ರಾಣಿಗಳೂ ಇಷ್ಟವಾಗುವುದಿಲ್ಲ. ಅಸಹ್ಯವಾಗು ತ್ತದೆ. ಸಿಂಹ, ಹುಲಿ ಎಂದರೆ ಇಷ್ಟ. ಅವನ್ನು ನೋಡಿರುವುದಿಲ್ಲ ಅಲ್ಲವೆ? ಆದುದರಿಂದ ಇಷ್ಟ. ನೋಡಿ ಅಭ್ಯಾಸವಾಗಿಬಿಟ್ಟರೆ, ಯಾವುದೂ ಇಷ್ಟವಾಗದೆ ಹೋಗುವುದು ಮನುಜಸ್ವಭಾವ ತಾನೆ? ಅದರಲ್ಲೂ ಬೆಕ್ಕು, ನಾಯಿ, ಹೆಗ್ಗಣ ಇವೆಲ್ಲಾ ಯಾರಿಗೆ ಇಷ್ಟವಾಗುತ್ತೆ? ಹೆಗ್ಗಣವೆಂದರೆ ಯಾರಿಗೂ ಇಷ್ಟವಾಗುವುದಿಲ್ಲ – ಆಗೆಲ್ಲಾ ಸಾಯಿಸು ವುದೇ ಕಾಲಹರಣ ಮಾರ್ಗ.

ದೇವರೇ ಎಂದು ಕುಳಿತಿದ್ದು ಒಂದು ಕಟ್ಟಿರುವೆಯನ್ನು ಹಿಡಿದು ಎರಡು ಕಾಲುಗಳನ್ನು ಕಿತ್ತುಹಾಕಿ ಅದು ಆಡುವ ರೀತಿಯನ್ನು ನೋಡುವುದು...ಒಂದು ಕಡ್ಡಿಯಿಂದ ಅದರ ನಡುಬೆನ್ನಲ್ಲಿ ಚುಚ್ಚಿ, ಎರಡು ಭಾಗ ಮಾಡಿ, ಆ ಎರಡು ತುಂಡೂ ಹೇಗೆ ಒದ್ದಾಡುತ್ತವೆ

ಪರಿಶೀಲಿಸುವುದು, ಹಲ್ಲಿಯನ್ನು ಹೊಡೆದು, ಅದರ ಬಾಲ ಕಂಪಿಸುವುದನ್ನು ನೋಡುವುದು, ತುಂಬಿಹುಳುವನ್ನು ಹಿಡಿದು ಬಾಲದಲ್ಲಿ ದಾರಕಟ್ಟಿ, ಸಂಗೀತ ಹಾಡಿಸುವುದು. ಸಾವಿರ ಕಾಲಿನ ಹುಳು, ಗುಂಗುರು ಹುಳ, ಓತಿಕೇತ, ಇದಕ್ಕೆಲ್ಲಾ ಆ ಕಾಲದಲ್ಲಿ ನಾನು ಯಮಕಿಂಕರ! ನಮ್ಮ ಬೀದಿಯಲ್ಲಿ ಪ್ರವೇಶಿಸುವ ಯಾವ ನಾಯಿಯಾದರೂ ಸರಿ, ನನ್ನನ್ನು ನೋಡಿದರೆ ಧೈರ್ಯದಿಂದ ಮುಂದಕ್ಕೆ ಬರುತ್ತಿರಲಿಲ್ಲ. ಹಾಗೆಯೇ ವಾಪಸು!

ಜಯಾ ಅತ್ತೆ ಜಗುಲಿಯ ಮೇಲೆ ನನ್ನ ಪಾಡಿಗೆ ಸುಮ್ಮನೆ ಕುಳಿತಿರುತ್ತಿದ್ದೆ. ಪಕ್ಕದಲ್ಲಿ ಒಂದು ರಾಶಿ ಕರಿಗಲ್ಲು. ನಾನೇ ಸೆಲೆಕ್ಟ್ ಮಾಡಿ ಸಂಗ್ರಹಿಸಿ ಇಟ್ಟುದು. ಅದೋ ದೂರದಲ್ಲಿ ಒಂದು ನಾಯಿ; ಇದಕ್ಕೆ ಮುಂಚೆಯೇ ಒಂದು ಬಾರಿ ಅದನ್ನು ಮೂರು ಕಾಲಿನಲ್ಲಿ ಓಡಿಸಿದ್ದೆ. ಒಡನೆಯೇ ಕಂಭದ ಹಿಂದೆ ಮರೆಯಾಗಿ ನಿಲ್ಲುತ್ತಿದ್ದೆ. ಹೊಡೆಯುವವನಿಗೆ ಇಷ್ಟು ಜಾಗ್ರತಭಾವವಿದ್ದರೆ ಹೊಡೆತ ತಿನ್ನುವ ಅದಕ್ಕಿರುವುದಿಲ್ಲವೆ? ಎರಡು ಕಿವಿಗಳನ್ನೂ ಮೇಲಕ್ಕೆತ್ತಿ ನಿಮಿರಿಸಿಕೊಂಡು ಥಟ್ಟನೆ ನನ್ನನ್ನು ನೋಡಿಬಿಟ್ಟಿತು. 'ಏಯ್ ಹೊಡೆಯುತ್ತೀಯಾ? ನನ್ನ ಪಾಡಿಗೆ ಹೋಗಿಬಿಡುತ್ತೇನೆ ಬಿಡು' ಎಂಬಂತೆ ಒಂದು ನೋಟ. ನಾನು ಒಡನೆಯೇ ಅದನ್ನು ನೋಡದಂತೆ ಮುಖವನ್ನು ತಿರುಗಿಸಿಕೊಂಡು ಬಿಡುತ್ತೇನೆ. ಅದಕ್ಕೆ ಸ್ವಲ್ಪ ಧೈರ್ಯ. ಆ ಎದಿರು ಮನೆ ಸಾಲಿನ ಚಿಕ್ಕ ಹಿಂಭಾಗದ ಎರಡು ಕಾಲುಗಳ ಮಧ್ಯೆ ಬಾಲವನ್ನು ಮುದುರಿಕೊಂಡು ನನ್ನ ಮೇಲಿಟ್ಟ ಕಣ್ಣನ್ನು ತೆಗೆಯದೆ ಸರಿದು ಬರುತ್ತದೆ. ನನ್ನ ಕೈ ನವೆಯೆನಿಸುತ್ತಿದೆ. ಹಲ್ಲು ಕಚ್ಚಿ ನನ್ನ ಅಡಕ ತಂದುಕೊಳ್ಳುತ್ತೇನೆ. ಇದೋ ಅದು ನನ್ನ ಎದುರಿಗೇ ಬಂದುಬಿಟ್ಟಿತು... ಛೀ ಆ ಆವೇಶವೆಲ್ಲಾ ಈಗ ಬರುವುದಿಲ್ಲ. ನಾನು ಏನು ಮಾಡಿದೆನೆಂದು ಯಾರಿಗೂ ತಿಳಿಯದು. ಬೀದಿಯವರೆಲ್ಲಾ ಸೇರುವಂತೆ ಕೂಗಿಕೊಂಡು ಅದೇನು ಓಟ ಓಡುತ್ತಿದೆ! ತಲೆಯಲ್ಲಿ ಗುರಿಯಿಟ್ಟರೆ ಕಾಲಿನಲ್ಲಿ ಏಟು ಬೀಳುತ್ತೆ. ಬಿದ್ದೇ ಬಿಟ್ಟಿತು! ನಾನು ಸುಮ್ಮನೆಯೇ ಕುಳಿತಿದ್ದೆ.

ಶಬ್ದ ಕೇಳಿ ಜಯಾ ಅತ್ತೆ ಮನೆಯಿಂದ ಬಂದರು. ಥಟ್ಟನೆ ಜಗುಲಿಯ ಮೇಲಿದ್ದ ಕಲ್ಲಿನ ರಾಶಿಯನ್ನು ಕೆಳಗೆ ತಳ್ಳಿದೆ.

"ಯಾಕೋ, ನಾಯಿಯನ್ನು ಯಾರು ಹೊಡೆದವರು?"

"ಅಯ್ಯಯ್ಯೋ, ನಾನಲ್ಲ ಅತ್ತೆ."

"ಸರಿ, ಯಾರನ್ನಾದರೂ ಕರಿ. ಬಚ್ಚಲಿನಲ್ಲಿ ಒಂದು ಹೆಗ್ಗಣ ಹೊರಗೆ ಹೋಗಲಾರದೆ ಸೇರಿಕೊಂಡಿದೆ. ಯಾರನ್ನಾದರೂ ಕರೆಯಪ್ಪ."

ಸರಿ, ಒಂದು ಸೌದೆಯ ತುಂಡನ್ನೆತ್ತಿಕೊಂಡು ನಾನು ಹೊರಟೆ, ಅತ್ತೆ ಕೂಗಿಕೊಂಡರು "ಬೇಡವೋ, ಬೇರೆ ಯಾರನ್ನಾದಗೂ ಕರೆ. ಅದು ನಿನ್ನ ಮೇಲೆ ಹಾರೀತು."

ಬಚ್ಚಲುಮನೆ ಮೂಲೆಯಲ್ಲಿ ಅದನ್ನು ಕಾರ್ನರ್ ಮಾಡಿಬಿಟ್ಟೆ ನಾನು. ಹೆಗ್ಗಣ ತಲೆಯತ್ತಿ ನನ್ನನ್ನು ನೋಡಿ ಚೀರಿತು. ತಲೆಗೆ ಗುರಿಯಿಟ್ಟು ಫಟ್ ಎಂದು ಒಂದೇಟು. ಶನಿ ತನಗೆ ತಾನೇ ಪ್ರದಕ್ಷಿಣೆ ಹಾಕುವಂತೆ ಸುತ್ತಿ ಸುತ್ತಿ ಬಚ್ಚಲುಮನೆಯಲ್ಲೆಲ್ಲಾ ರಕ್ತಕಾರಿ

ಸತ್ತು ಹೋಯಿತು. ಜಯಾ ಅತ್ತೆಗೆ ಭಯವಾಯಿತು. ನಾನೂ ಭಯಪಟ್ಟವನಂತೆ "ಅತ್ತೆ ಅತ್ತೆ" ಎಂದು ಕೂಗಿಕೊಂಡೆ. ಜಯಾ ಅತ್ತೆ ಓಡಿಬಂದು ನನ್ನನ್ನು ಹಿಡಿದುಕೊಂಡರು. "ನಿನಗೆ ಈ ಕೆಲಸ ಬೇಡ ಎಂದು ಹೇಳಿದೆನಲ್ಲಾ... ಕರ್ಮ, ಅಲ್ಲಿ ನೋಡಬೇಡ ಬಿಡು, ಬಾ. ರಾಕ್ಕಾಯಿ ಬಂದಾಗ ತೊಳೆಯುವುದಕ್ಕೆ ಹೇಳಿದರಾಯಿತು.

ಭಯಪಟ್ಟು ನಿಂತಿದ್ದ ನನ್ನನ್ನು ಆದರದಿಂದ ಜಯಾ ಅತ್ತೆ ಅಪ್ಪಿಕೊಂಡರು. ದೊಡ್ಡವರು ಅಪ್ಪಿಕೊಂಡರೆ ಎಷ್ಟು ಆನಂದವಾಗಿರುತ್ತೆ!

ಆ ಹೆಗ್ಗಣ ನನ್ನನ್ನು ನೋಡಿ ಚೀರಿಕೊಳ್ಳದಿದ್ದರೆ ನನಗೆ ಅಷ್ಟು ಕೋಪ ಬರುತ್ತಿರಲಿಲ್ಲ. ಅದು ನನ್ನನ್ನು ನೋಡಿ ಚೀರಿ ತಪ್ಪಿಸಿಕೊಂಡು ಹೋಗಿದ್ದರೆ ನನಗೆ ಅಳು ಬರುತ್ತಿತ್ತು.

ಸಾಯಿಸುವುದರ ವಿನಃ ಇನ್ನೂ ಒಂದು ಹವ್ಯಾಸ ನನಗಿತ್ತು. ಅದೇನೆಂದರೆ ಸಾಯಿಸುವುದು. ಅದನ್ನು ಕತ್ತರಿಸಿ ಮಾರುವುದನ್ನು ನೋಡಲು ನನಗೆ ವಿನೋದ. ಆ ಅಗ್ರಹಾರದ ಕಡೆಯಲ್ಲಿ ಒಂದು ಮಣ್ಣಿನ ದಿಬ್ಬ ಇತ್ತು. ಅಲ್ಲಿನವರೆಲ್ಲಾ ಒಂದು ವಿಧವಾದ ಭಾಷೆ ಯಾಡುತ್ತಿದ್ದರು. ಕುರಿ, ಹಸು, ಕೋಳಿ ಎಲ್ಲಾ ಇದ್ದುವಲ್ಲ. ಅಲ್ಲಿ ಕಟ್ಟಾ ಮೀಸೆಯವನೊಬ್ಬನಿದ್ದ. ವೆಂಕಟು, ಸುಂದರಂ, ಉದ್ಯಡಂ ಇವರಿಗೆಲ್ಲಾ ಅವನನ್ನು ಕಂಡರೆ 'ಡಬಲ್ಸ್'. ನನಗಾದರೆ ಯಾವ ಭಯವೂ ಇಲ್ಲ. ಅವನು ಯಾವಾಗ ನಮ್ಮ ಬೀದಿಯಲ್ಲಿ ಬರುತ್ತಾನೆ ಎಂದು ಕಾಯುತ್ತಿದ್ದೆ. ಸಾಯಂಕಾಲ ನಾಲ್ಕು ಗಂಟೆಗೆ ನಮ್ಮ ಬೀದಿಯ ಮೂಲಕ ಆ ದಿಬ್ಬಕ್ಕೆ ಹಿಂತಿರುಗುತ್ತಿದ್ದ. ನಾನು ಅವನನ್ನೇ ನೋಡಿಕೊಂಡಿರುತ್ತಿದ್ದೆ. ಅವನ ಮೀಸೆ ನನಗೆ ಇಷ್ಟವೆನಿಸುತ್ತಿತ್ತು. ತುಕ್ಕುಹಿಡಿದುಹೋದ ಕಪ್ಪು ಸೈಕಲ್ ಮೇಲೆ ಬರುತ್ತಿದ್ದ. ಆ ಸೈಕಲ್ ಮೇಲೆ ಅವನನ್ನು ನೋಡಿದರೆ ಕುರಿಯ ಮೇಲೆ ಒಬ್ಬ ಮನುಷ್ಯ ಕುಳಿತು ಸವಾರಿ ಮಾಡುವಂತೆ ಕಾಣುತ್ತಿತ್ತು. ಸೈಕಲ್ ಹ್ಯಾಂಡ್‌ಬಾರ್‌ನಲ್ಲಿ ಒಂದು ಕಾಕಿ ಚೀಲ ವಿರುತ್ತಿತ್ತು. ಅದು ರಕ್ತಕಲೆಯಿಂದ ಕೂಡಿರುತ್ತಿತ್ತು. ನೊಣಗಳು ಮುತ್ತಿರುತ್ತಿದ್ದುವು. ಅದರೊಳಗಿಂದ ಕತ್ತಿಯ ಹಿಡಿ ಮಾತ್ರ ಗೋಚರವಾಗುತ್ತಿತ್ತು. ನಾನು ದೊಡ್ಡವನಾದ ಮೇಲೆ ಅವನಂತೆ ಮೀಸೆ ಬಿಡಬೇಕೆನಿಸುತ್ತಿತ್ತು. ಇನ್ನೂ ದೊಡ್ಡ ಕತ್ತಿ ಇಡಬೇಕೆಂದಿದ್ದೆ. ಯಾರಾದರೂ ಜಗಳಕ್ಕೆ ಬಂದರೆ ಕತ್ತರಿಸಿಬಿಡುತ್ತೇನೆ. ದೊಡ್ಡವನಾದ ಮೇಲೆ ನಿಶ್ಚಯವಾಗಿ ಮನುಷ್ಯರನ್ನೂ ಕತ್ತರಿಸುವ ಧೈರ್ಯ. ನನ್ನನ್ನು ಕಂಡು ಎಲ್ಲರೂ ಭಯಪಡಬೇಕು. ಇಲ್ಲದಿದ್ದಲ್ಲಿ ಕತ್ತಿಯಿಂದ ಕತ್ತರಿಸಿ ಬಿಡುವುದೇ – ನಾನೇನು ಹೇಳುತ್ತಿದ್ದೇನೆ? ಅಗ್ರಹಾರದ ಬೆಕ್ಕಿನ ಬಗ್ಗೆ ಹೇಳತೊಡಗಿದೆನಲ್ಲವೆ? ಪರವಾಯಿಲ್ಲ. ಬೆಕ್ಕಿನ ಬಗ್ಗೆ ಹೇಳುವ ಸಂದರ್ಭ ಬಂದಾಯಿತು. ಹೇಳುತ್ತೇನೆ—

ನಮ್ಮ ಅಗ್ರಹಾರದಲ್ಲಿ ಒಂದು ಬೆಕ್ಕೂ ಇತ್ತು. ತುಂಬಾ ನಟೋರಿಯಸ್. ಬೆಕ್ಕು ಎಂದರೆ, ಒಂದು ಚಿಕ್ಕ ಹುಲಿ ಇದ್ದಹಾಗಿತ್ತು. ಮೈಯೆಲ್ಲಾ ಪಟ್ಟೆಗಳು. ಈ ಶನಿಗೆ ಅಗ್ರಹಾರದಲ್ಲೇನು ಕೆಲಸ? ಬೆಕ್ಕು ನಾನ್‌ವೆಜಿಟೇರಿಯನ್ ತಾನೆ! ಇದು ಮಾಂಸ ಸಿಕ್ಕುವ ಸ್ಥಳ ಬಿಟ್ಟು ಈ ಅಗ್ರಹಾರದಲ್ಲಿತ್ತು. ಆದುದರಿಂದ ಅಗ್ರಹಾರದ ಬೆಕ್ಕು ಕಂಪಲ್ಸರಿಯಾಗಿ

ಶೈವಧರ್ಮದ ಬೆಕ್ಕಾಗಿ ಬಿಟ್ಟಿತು. ನನಗೂ ಅದಕ್ಕೂ ಒಂದು ಹೋಲಿಕೆಯುಂಟು. ನಾನು ಸುಮ್ಮನೆ ಇರುತ್ತಿದ್ದೆ. ಅದೂ ಹಾಗೆಯೇ. ನಾನೂ ಚೇಷ್ಟೆ ಮಾಡುತ್ತಿದ್ದೆ. ಅದೂ ಅಷ್ಟೆ. ನಾನೂ ಎಲ್ಲರ ಮನೆಗೆ ಹೋಗಿ ಚೇಷ್ಟೆ ಮಾಡುತ್ತಿದ್ದೆ. ಅದೂ ಎಲ್ಲರ ಮನೆಗೂ ಹೋಗಿ ಹಾಗೆಯೇ ಮಾಡುತ್ತಿತ್ತು.

ಒಂದು ದಿನ ಜಯಾ ಅತ್ತೆ ಕೂಗಿಕೊಂಡು ಶಪಿಸಿದರು :

"ಈ ಹಾಳಾದ ಬೆಕ್ಕು ಒಂದು ಪಡಿ ಹಾಲನ್ನು ತಳ್ಳಿ ಚೆಲ್ಲಿಬಿಟ್ಟಿತು... ಆ ಹೆಗ್ಗಣವನ್ನು ಹೊಡೆದಂತೆ ಇದನ್ನೂ ಹೊಡೆದು ಹಾಕಿದರೆ ಒಳ್ಳೆಯದು."

ತೂಗುಯ್ಯಾಲೆಯಲ್ಲಿ ಮಲಗಿ ಗಾಳಿ ಬೀಸಿಕೊಂಡಿದ್ದ ಮಾವ ಅಂದರು : "ಬಾಯಿ ತೊಳೆದುಕೋ... ಪಾಪ! ಪಾಪ! ಬೆಕ್ಕನ್ನು ಕೊಲ್ಲುವ ವಿಚಾರ ಯೋಚಿಸಿದರೇನೇ ಮಹಾಪಾಪ!" -- ನಾನು ಸುಮ್ಮನೆ ನಿಂತು ಕೇಳುತ್ತಿದ್ದೆ.

ಹೆಗ್ಗಣವನ್ನು ಹೊಡೆದು ಹಾಕಿದಂತೆ ಬೆಕ್ಕನ್ನು ಹೊಡೆಯಲು ಸಾಧ್ಯವಿಲ್ಲವೆಂದು ನನಗೆ ಗೊತ್ತು. ಹೆಗ್ಗಣ ಚೀರಿತಲ್ಲಾ – ಆದರೆ ಬೆಕ್ಕು ಹಾರಿ ಮೈಮೇಲೆ ಬಿದ್ದು ಪರಚಿ ಬಿಡುತ್ತೆ... ಬೆಕ್ಕು ಮೊದಲು ಭಯಪಟ್ಟು. ಕೂಗಿಕೊಳ್ಳುತ್ತೆ, ಓಡಿಹೋಗಲು ಪ್ರಯತ್ನಿಸುತ್ತದೆ. ಬೇರೆ ದಾರಿಯಿಲ್ಲವೆಂದರೆ ಸ್ಟ್ರೈಟ್ ಅಟ್ಯಾಕ್... ನನಗೆ ಜ್ಞಾಪಕವಿಲ್ಲದ ವಯಸ್ಸಿನಲ್ಲಿ ಒಂದು ಬೆಕ್ಕು ನನ್ನ ಹೊಟ್ಟೆಯ ಮೇಲೆ ಕೀರಿದ ಚಿನ್ಹೆ ಈಗಲೂ ಉಡಿದಾರ ಕಟ್ಟುವ ಕಡೆ ಉದ್ದವಾಗಿದೆ... ಚಿಕ್ಕ ಮಗುವಾಗಿ ತೆವಳುತ್ತಿದ್ದ ವಯಸ್ಸು... ಬೆಕ್ಕನ್ನು ಹಿಡಿದು ಸರ್ಕಸ್ ಮಾಡಿದ್ದೇನೆ. ಸಿಕ್ಕಾಪಟ್ಟೆ ಕುತ್ತಿಗೆ ಹಿಡಿಗೇನೋ... ಚೀರಿ ಕೂಗಿ ಅದು ನನ್ನನ್ನು ಕೀರಿತುತೆ. ನಾನು ನೋವಿನಿಂದ ಅಳುತ್ತಾ ಅದರ ಕುತ್ತಿಗೆಯನ್ನು ಬಿಡದೆ ಹಿಸುಕಿದೆನಂತೆ... ತಾಯಿ ಈಗಲೂ ಹೇಳುತ್ತಾರೆ... ಆ ಮಚ್ಚೆ ಈಗಲೂ ಕೆಳಹೊಟ್ಟೆಯ ಮೇಲಿದೆ.

ಆದಿನ ಸಾಯಂಕಾಲ ನಮ್ಮ ಮನೆ ತೋಟದಲ್ಲಿ ಆ ಬೆಕ್ಕನ್ನು ನಾನು ನೋಡಿದೆ. ನಮ್ಮ ಮನೆಗೂ ಪಕ್ಕದ ಮನೆಗೂ ಮಧ್ಯೆ ಬೇಲಿಯ ಪಕ್ಕದಲ್ಲಿ ಹೋಗುತ್ತಿತ್ತು. ಹೋಗುವಾಗ ಒಂದುಬಾರಿ ತಿರುಗಿ ನೋಡಿತು. ನಾನೂ ನೋಡಿದೆ. ದೃಷ್ಟಿಸಿ ನೋಡಿದೆ. ಒಡನೆಯೇ ಅದೂ ಎಚ್ಚರಿಕೆಯಲ್ಲಿ ಸರಿಯಾಗಿ ಮುಖ ತಿರುಗಿಸಿ-ನನ್ನನ್ನೇ ದೃಷ್ಟಿಸಿತು. ನಾನು ಅದರ ಮೇಲೆ ಹಾಯುವಂತೆ ಕುಣಿದು ಭಯ ತೋರಿಸಿದೆ. ಅದು ಭಯಪಡಲಿಲ್ಲ. ಸ್ವಲ್ಪ ಬಾಗಿ ನಿಂತಿತು ಅಷ್ಟೇ. 'ಇದಕ್ಕೇನು ಭಯವೇ ಇಲ್ಲ' ಎಂದು ನನಗೆ ಕೋಪ. ರೋಷದಿಂದ ದೃಷ್ಟಿಸಿ ನೋಡಿದೆ. ಅದು ಲಕ್ಷ್ಯ ಮಾಡಲಿಲ್ಲ. ಅದು ಮೌನದಿಂದ ಸವಾಲಿನಂತಿತ್ತು. ಕೆಂಪಾದ ಬಾಯನ್ನು ತೆರೆದು ನನ್ನನ್ನು ನೋಡಿಕೊಂಡೇ... 'ಮಿಯಾವ್' ಎಂದು ಅರಚಿದಾಗ – ಅದು ತನ್ನ ಭಾಷೆಯಲ್ಲಿ ನನ್ನನ್ನು ಸವಾಲಿಗೆ ಕರೆಯುವಂತಿತ್ತು.

ಅದೆಲ್ಲಾ ಹೆಗ್ಗಣದ, ಬಳಿ ಇರಲಿ... ನನ್ನದುರು ನಡೆಯದು.'

'ಇರು... ಇರು. ಒಂದು ದಿನ ನಿನ್ನನ್ನು ಹಿಡಿದು ಗೋಣಿಚೀಲದಲ್ಲಿ ಹಾಕಿ ಬಟ್ಟೆ ಒಗೆಯುವ ಕಲ್ಲಿನ ಮೇಲೆ ಒಗೆದು...'

'ಮಿಯಾವ್ – ಸುಮ್ಮನೆ ಭಯಪಡಿಸಬೇಡ. ಮೊದಲು ನಿನಗೆ ನನ್ನನ್ನು ಹಿಡಿಯುವುದಕ್ಕೆ ಸಾಧ್ಯವೆ?' – ಥಟ್ಟನೆ ಬೇಲಿಯನ್ನು ದಾಟಿಬಿಟ್ಟಿತು. ಪಕ್ಕದ ಮನೆಯ ತೋಟದಲ್ಲಿ ನಿಂತು ಬೇಲಿಯ ಮೂಲಕ ನನ್ನನ್ನು ದುರುಗುಟ್ಟಿ ನೋಡಿತು.

'ಎಲ್ಲಿಗೆ ತಾನೆ ಹೋಗಿಬಿಡುತ್ತಿಯಾ? ನಿನ್ನನ್ನು ಹಿಡಿಯದೆ ಹೋದರೆ ನನ್ನ ಹೆಸರು ಬದಲಾಯಿಸಿಬಿಡು' ಎಂದೆ ನಾನು.

ಅದಕ್ಕೆ ಉತ್ತರ ಕೊಡುವಂತೆ ಒಂದು ಸಣ್ಣ 'ಮಿಯಾವ್' – 'ನೋಡೋಣವೇ?' ಎಂದು ಅದಕ್ಕೆ ಅರ್ಥ.

'ಹುಂ... ನೋಡೋಣ' ಎಂದೆ. ಆ ದಿನ ರಾತ್ರಿ ಪೂರ್ತಿ ನಾನು ನಿದ್ರೆ ಮಾಡಲಿಲ್ಲ. ಆ ಬೆಕ್ಕೂ ನಿದ್ರೆ ಮಾಡಲಿಲ್ಲ. ರಾತ್ರಿಯೆಲ್ಲಾ ಗುಡುಗುಡು ಎಂದು ಹೆಂಚಿನ ಮೇಲೆ ಓಡುತ್ತಿತ್ತು. ಮತ್ತೊಂದು ಬೆಕ್ಕನ್ನೂ ಜೊತೆಗೆ ಹಾಕಿಕೊಂಡು ರಾಕ್ಷಸ ಶಿಶು ಅಳುವಂತೆ ಎರಡೂ ಅರಚಿ ಕಸಮುಸವೆಂದು ಒಂದರ ಮೇಲೆ ಒಂದು ಬಿದ್ದು ಹೊರಳಾಡಿ... ನಮ್ಮ ಮನೆ ಹೆಂಚಿನ ಮಾಳಿಗೆಯ ಮೇಲೆ ಒಂದೇ ಗಲಭೆ. ಎಲ್ಲಿಯೋ ಒಂದು ಹೆಂಚು ಬೇರೆ ಒಡೆದು ಧೊಪ್ಪನೆ ಕೆಳಗೆ ಬಿತ್ತು. ಜಗುಲಿಯಲ್ಲಿ ಮಲಗಿದ್ದ ತಾತ ನೆಲತಟ್ಟಿ ಹೆದರಿಸಿದರು. ಎರಡೂ ಒಂದರಹಿಂದೊಂದು ಕುಣಿದು ಹಾರಿ ಬೀದಿಯಲ್ಲಿ ಅಡ್ಡವಾಗಿ ಓಡಿ ಜಯಾ ಅತ್ತೆಯ ಮನೆಯ ಮೇಲೆ ಏರಿದುದನ್ನು ಬೆಳದಿಂಗಳ ಬೆಳಕಿನಲ್ಲಿ ನಾನು ಚೆನ್ನಾಗಿ ನೋಡಿದೆ.

ಮಾರನೆಯ ದಿನ ಅದನ್ನು ಭೇಟಿಯಾಡಿಬಿಡಬೇಕೆಂದು ತೀರ್ಮಾನ ಮಾಡಿಕೊಂಡು ಜಯಾ ಅತ್ತೆ ಮನೆಯ ಬಚ್ಚಲಮನೆಯಲ್ಲಿ ಒಂದು ತಟ್ಟೆ ತುಂಬಾ ಹಾಲನ್ನಿಟ್ಟೆ. ಒಂದು ಬಾಗಿಲು ಮಾತ್ರ ತೆರೆದಿಟ್ಟುಕೊಂಡೆ. ಕಿಟಕಿ ಬಾಗಿಲನ್ನು ಮುಚ್ಚಿದೆ. ಮಧ್ಯಾಹ್ನ ಊಟಕ್ಕೆ ಮನೆಗೆ ಕೂಡ ಹೋಗದೆ ಕಾದುಕೊಂಡಿದ್ದೆ... ಕಡೆಗೆ ಮಧ್ಯಾಹ್ನ ಮೂರು ಗಂಟೆಗೆ 'ಬೆಕ್ಕು ಮಹಾಶಯ' ಬಂತು... ಹೇಳಿಕೊಟ್ಟಂತೆ ಬಚ್ಚಲುಮನೆಗೆ ಹೋಯಿತು. ನಾನು ಬಾವಿಯ ಹಿಂದಿನಿಂದ ಇಷ್ಟನ್ನೂ ನೋಡುತ್ತಿದ್ದೆ... ಮೆಲ್ಲನೆ ಹೆಜ್ಜೆಯಿಕ್ಕುತ್ತಾ ಬೆಕ್ಕಿನಂತೆ ಮುಂದೆ ಹೋದೆ. ಅದರ ಬೆನ್ನು ಮಾತ್ರ ಗೋಚರವಾಗುತ್ತಿತ್ತು. ಒಂದು ತಟ್ಟೆ ಹಾಲನ್ನು ಸ್ವಾರಸ್ಯವಾಗಿ ಕುಡಿಯುತ್ತಿತ್ತು. ಆಗ ನಾನು ಥಟ್ಟನೆ ಬಾಗಿಲು ಹಾಕಿದೆ... ಒಳಗೆ ಸಿಕ್ಕಿಕೊಂಡೊಡನೆ ಹಾಲನ್ನು ಮರೆತು ಬಾಗಿಲನ್ನು ಕೆರೆಯತೊಡಗಿತಲ್ಲ!

"ಅತ್ತೆ... ಅತ್ತೆ, ಓಡಿ ಬನ್ನಿ, ಓಡಿ ಬನ್ನಿ, ಮಹಾಶಯರು ಇಲ್ಲಿ ಸಿಕ್ಕಿಕೊಂಡಿದ್ದಾರೆ" ಎಂದು ಕೂಗಿಕೊಂಡೆ. ಅತ್ತೆ ಬಂದು ನೋಡಿದರು... ಬೆಕ್ಕು ಒಳಗೆ ಅರಚುತ್ತಿತ್ತು.

"ಏನೋ, ಬಚ್ಚಲು ಮನೆಯಲ್ಲಿ ಬೆಕ್ಕನ್ನು ಬಿಟ್ಟು ಬಾಗಿಲು ಹಾಕಿದರೇ ನಾವು ಒಳಗೆ ಹೋಗುವುದು ಹೇಗೆ? ನಾವು ಒಳಗೆ ಹೋಗುವಾಗ ಅದು ಹೊರಗೆ ಹೋಗಿಬಿಡುವುದಿಲ್ಲವೆ?"

"ಈಗ ತಾನೆ ಮೊದಲನೆಯ ಘಟ್ಟ ಮುಗಿದಿದೆ ಅತ್ತೆ. ಅವರಲ್ಲಿಯೇ ಜಯ. ನೀವು ಒಳಗೆ ಹೋಗಿ... ಕಡೆಯ ಘಟ್ಟದಲ್ಲಿ ಕರೆಯುತ್ತೇನೆ."

ಅತ್ತೆಯ ಮನಸ್ಸಿನ ಮುಂದೆ ಆ ಹೆಗ್ಗಣದ ವಧೆ ಜ್ಞಾಪಕ ಬಂದಿತೇನೋ!

"ಬೇಡಪ್ಪ, ಅದನ್ನು ಏನೂ ಮಾಡಬೇಡ. ಜನ್ಮ ಪೂರ್ತಿ ಮಹಾಪಾಪ, ಬೇಡ."

"ನಾನು ಅದನ್ನು ಕೊಲ್ಲುವುದಿಲ್ಲ ಅತ್ತೆ. ಗೋಣಿಚೀಲದಲ್ಲಿ ಹಿಡಿದು ಹಾಕಿ ಓಡಿಸಿಬಿಡುತ್ತೇನೆ..."

"ಹೌದು... ಅದನ್ನು ಓಡಿಸಿ ನೀನು ಹಿಂತಿರುಗುವುದರೊಳಗೆ ಅದು ಇಲ್ಲೆ ಮತ್ತೆ ಹಾಜರಾಗಿರುತ್ತೆ." – ಜಯಾ ಅತ್ತೆ ಪರಿಹಾಸ ಮಾಡಿ ಹೋದರು. ನಾನು ಮನಸ್ಸಿನಲ್ಲಿ ಅಂದುಕೊಂಡೆ : 'ಅದನ್ನು ಹಿಂತಿರುಗಿಬಾರದ ಊರಿಗೆ'ಕಳುಹಿಸಿಬಿಟ್ಟು ತಾನೆ ಬರುತ್ತೇನೆ.

ಅಗ್ರಹಾರದಲ್ಲಿ ಅಂದು ನಾನೇ ಹೀರೋ. ಆಟವಾಡುವಾಗ ನನ್ನನ್ನು ಸೇರಿಸಿಕೊಳ್ಳದ ಹುಡುಗರೆಲ್ಲಾ ನನ್ನ ಹಿಂದೆ ಬಂದರು. ನಾನು ಬೆಕ್ಕನ್ನು ಗೋಣಿಚೀಲದಲ್ಲಿ ಕಟ್ಟಿಕೊಂಡು ಹೋಗುತ್ತಿದ್ದೆ. ಹುಡುಗರೆಲ್ಲಾ ಕೂಗಿ ಗಲಭೆ ಮಾಡುತ್ತಾ ನನ್ನ ಹಿಂದೆ ಬಂದರು. ನನ್ನ ತಾಯಿ ಬಾಗಿಲಲ್ಲಿ ಬಂದು ನಿಂತು ಬೈದರು :

"ಏಯ್, ಋಣಪಾತಕ ಹಾಳಾದವನೇ... ನಾಶವಾಗಬೇಡ! ಬೆಕ್ಕಿನ ಪಾಪವನ್ನು ಅಂಟಿಸಿಕೊಳ್ಳಬೇಡ! ಒಂದು ಕೂದಲು ಉದುರಿದರೆ ತೂಕಕ್ಕೆ ತೂಕವಾಗಿ ಚಿನ್ನ ಕೊಡಬೇಕು ಎನ್ನುತ್ತಾರೆ. ನಿನ್ನ ತಂದೆ ಬರಲಿ... ಹೇಳಿ ನಿನ್ನ ಕೊಲೆ ಮಾಡಿಸಿ ಪಳ್ಳ ತೋಡಿ..."

ಅವನ್ನು ನಾನು ಕಿವಿಗೇ ಹಾಕಿಕೊಳ್ಳಲಿಲ್ಲ. ಗೋಣಿಚೀಲವನ್ನು ಹೊತ್ತುಕೊಂಡು ಹೋಗಿ ಬೀದಿಯ ಕಡೆಯಲ್ಲಿದ್ದ ಮಂಟಪದಲ್ಲಿ ಎಲ್ಲರೂ ಕುಳಿತೆವು.

"ಗೋಣಿಯಿಂದ ಬೆಕ್ಕನ್ನು ತೆಗೆದು ಕುತ್ತಿಗೆಯನ್ನು ಹಗ್ಗದಿಂದ ಕಟ್ಟಿ ಹಿಡಿದರೆ, ಆಟವಾಡಿಸಬಹುದು" ಎಂದು ಉದ್ದಂಡಂ ಸಲಹೆ ನೀಡಿದ. ಆದರೆ ಬೆಕ್ಕಿಗೆ ಹಗ್ಗ ಕಟ್ಟುವುದು ಯಾರು?

"ಅದೆಲ್ಲಾ ಏನೂ ಬೇಡ. ಆ ಕಟ್ಟಾ ಮೀಸೆಯವನು ಈಗ ಬರುತ್ತಾನೆ. ಅವನ ಕೈಗೆ ಕೊಟ್ಟರೆ ಸಾಕು. ಹಾಗೆಯೇ ಗೋಣಿಚೀಲದಲ್ಲಿಟ್ಟು ಚರಕ್... ಆಟ ಕ್ಲೋಸ್."

"ಅವನನ್ನು ನೀನೇ ಕೇಳಬೇಕು" ಎನ್ನುತ್ತಾ ಅವನು ಬರುವುದಕ್ಕೆ ಮೊದಲೇ ಸುಂದರಂ ಭಯಪಡತೊಡಗಿದ. ಈ ಹುಡುಗರನ್ನು ಕಟ್ಟಿಕೊಂಡು ಈ ಕೆಲಸ ಮಾಡುವುದು ಸರಿಯೆಂದು ತೋರಲಿಲ್ಲ; ಭಯಪಡುತ್ತಾರೆ.

"ಏಯ್ ನೀವೆಲ್ಲಾ ಮನೆಗೆ ಹೋಗಿ. ಅವನು ಕತ್ತರಿಸುವುದನ್ನು ನೋಡಿ ಭಯಪಡುತ್ತೀರಪ್ಪ. ಆ ಮೇಲೆ ನಿಮ್ಮ ತಾಯಂದಿರು ನನ್ನನ್ನು ಬೈಯುತ್ತಾರೆ" ಎಂದು ಹುಡುಗರನ್ನೆಲ್ಲಾ ಓಡಿಸಿಬಿಟ್ಟೆ.

"ಆ ದಿನ ಅಲ್ಲಿ ಕುರಿಯನ್ನು ಕತ್ತರಿಸಿದನಲ್ಲಾ, ನೀನು ತೋರಿಸಿದೆ... ನಾನು ಭಯಪಟ್ಟೆನೇನು...? ನಾನಿಲ್ಲೇ ಇರುತ್ತೇನೆ."

"ಆದರೆ ಒಂದು... ಈ ವಿಷಯವನ್ನು ಯಾರೂ ನಿಮ್ಮ ಮನೆಗಳಿಗೆ ಹೋಗಿ ಹೇಳಬಾರದು. ಪ್ರಮಾಣ ಮಾಡಿ" ಎಂದೆ.

"ಸತ್ಯವಾಗಿ ಹೇಳುವುದಿಲ್ಲ" – ಎಲ್ಲರೂ ಸೇರಿ ಒಂದು ಕೋರಸ್.

ಕಟ್ಟಾ ಮೀಸೆಯುವನನ್ನು ನಾವು ನಿರೀಕ್ಷಿಸುತ್ತಿದ್ದೆವು. ಕಡೆಯಲ್ಲಿ ಸಾಯಂಕಾಲ ನಾಲ್ಕು ಗಂಟೆಗೆ ಕುರಿಯ ಮೇಲೆ ಕುಳಿತು ಮನುಷ್ಯ ಸವಾರಿ ಮಾಡುವಂತೆ ಬೀದಿಯಲ್ಲಿ ಅವನು ಬರುವುದು ಗೋಚರಿಸಿತು. ಹುಡುಗರೆಲ್ಲಾ ಮಂಟಪದಲ್ಲಿ ಆಳಿಗೊಬ್ಬ ಕಂಬದ ಹಿಂದೆ ಅವಿತುಕೊಂಡರು. "ನಾವೆಲ್ಲಾ ಇಲ್ಲೇ ಇರುತ್ತೇವೆ. ನೀನು ಹೋಗಿ ಕೇಳೋ" ಎಂದು ನನ್ನನ್ನು ಮುಂದೆ ತಳ್ಳಿದರು. ನನಗೆ ಭಯವೆಂತಹುದು?

ಕಟ್ಟಾ ಮೀಸೆಯುವನು ಹತ್ತಿರವೇ ಬಂದ. ನಾನು ಗುಡ್ ಮಾರ್ನಿಂಗ್ ಎಂದೆ. ಅವನೂ ನನಗೊಂದು ಸಲಾಮು ಮಾಡಿದ.

ಅವನು ನನ್ನ ಪಕ್ಕದಲ್ಲಿ ಒಂದು ಎರಡು ಕಾಲನ್ನೂ ನೆಲಕ್ಕೆ ಊರಿ ಸೈಕಲ್ಲಿನಿಂದ ಕೆಳಗಿಳಿಯದೆ ನಿಂತ. ಅಬ್ಬಾ... ಅವನೆಷ್ಟು ಎತ್ತರ! ನಾನು ಅವನನ್ನು ನಖಶಿಖಾಂತ ನೋಡಿ ಹೇಳಿದೆ :

"ಒಂದು ಚಿಕ್ಕ ಸಹಾಯ..."

"ಅದೇನು ಗೋಣಿಚೀಲದಲ್ಲಿ?" ಅವನ ಕಂಠ ಕೃಷ್ಣಲೀಲೆಯಲ್ಲಿ ಬರುವ ಕಂಸನ ಧ್ವನಿಯಂತಿತ್ತು.

"ಬೆಕ್ಕು... ಬಹಳ ಲೂಟಿ ಹೊಡೆಯುತ್ತೆ. ಆದುದರಿಂದ, ಅದನ್ನು ಕೊಲ್ಲಲು ಹಿಡಿದು ತಂದಿದ್ದೇನೆ."

"ನೀನು ಹಿಡಿದೆಯೇನೋ?" – ಹೌದೆಂದು ನಾನು ಹೆಮ್ಮೆಯಿಂದ ತಲೆಯಾಡಿಸಿದೆ. ಮಂಟಪದಲ್ಲಿ ಅವಿತುಕೊಂಡಿದ್ದ ಹುಡುಗರನ್ನೆಲ್ಲಾ ಒಂದು ಬಾರಿ ನೋಡಿದ. ನನ್ನನ್ನು ನೋಡಿದ. ನಾನು ಆ ಖಾಕಿ ಚೀಲದಲ್ಲಿದ್ದ ಕತ್ತಿಯ ಹಿಡಿಯನ್ನು ನೋಡಿದೆ.

"ಕತ್ತರಿಸಲು ಕತ್ತಿ ಬೇಕೆ?" ಎಂದು ಅವನು ನನ್ನನ್ನು ನೋಡಿ ಕೇಳಿದ.

"ಊಹುಂ... ನೀವೇ ತಾನೆ ಕುರಿಗಳನ್ನು ಕಡಿಯುವವರು. ಆದ್ದರಿಂದ ನೀವೇ ಇದನ್ನೂ ಕತ್ತರಿಸಬೇಕು."

"ಓಹ್" ಎಂದು ಆರೋಪಿಸಿ ಆ ಕತ್ತಿಯನ್ನು ಹೊರ ತೆಗೆದ. ದೊಡ್ಡ ಕತ್ತಿ! ಕೊನೆಯನ್ನು ಹೆಬ್ಬೆಟ್ಟಿನಿಂದ ಅದರ ಚೂಪನ್ನು ಪರೀಕ್ಷಿಸಿ ಅವನು ಹೇಳಿದ :

"ಬೆಕ್ಕನ್ನು ಇದುವರೆಗೆ ನಾನು ಕತ್ತರಿಸಿದುದಿಲ್ಲ. ಯಾಕೆಂದರೆ, ನಾವು ಬೆಕ್ಕನ್ನು ತಿನ್ನುವುದಿಲ್ಲ... ನಾನು ಕತ್ತರಿಸಿ ಕೊಡುತ್ತೇನೆ. ನೀವು ಅದನ್ನು ತಿನ್ನುತ್ತೀರಾ?"

"ವ್ಯಾ... ಕತ್ತರಿಸಿ ಹಳ್ಳ ತೋಡಿ ಮುಚ್ಚಿಬಿಡೋಣ."

"ಆಗ ಪಾಪವೇನೂ ಬರುವುದಿಲ್ಲ. ನಾನು ಯಾಕೆ ಕುರಿಯನ್ನು ಕತ್ತರಿಸುತ್ತೇನೆ?

ಎಲ್ಲರೂ ಅದನ್ನು ತಿನ್ನುತ್ತಾರೆ. ಅವರು ತಿನ್ನುವುದಿಲ್ಲವೆಂದರೆ ನಾನು ಕತ್ತರಿಸುವುದಿಲ್ಲ. ನಾನು ಕುರಿಯನ್ನು ಕತ್ತರಿಸವಾಗ ನೀನು ನೋಡಿದ್ದೀಯಾ?"

"ಓ, ನೋಡಿದ್ದೇನಲ್ಲಾ. ನೀವೇನೋ ಮಂತ್ರ ಹೇಳಿ ಕತ್ತರಿಸುತ್ತೀರಿ. ಅದೇ ಮಂತ್ರ ಹೇಳಿ ಇದನ್ನೂ ಕತ್ತರಿಸಿ. ಆಗ ಪಾಪ ಬರುವುದಿಲ್ಲ."

"ಮಂತ್ರ ಹೇಳುವುದು ಅದಕ್ಕಲ್ಲಪ್ಪ. ಒಂದು ಕೆಲಸವನ್ನು ಪ್ರಾರಂಭಿಸುವಾಗ ದೇವರನ್ನು ಸ್ತುತಿಸುವುದಿಲ್ಲವೆ? ಅದೇ. ಕತ್ತರಿಸುವುದು ಆಟವಲ್ಲಪ್ಪ. ಅದೇ ನನ್ನ ಕುಟುಂಬಕ್ಕೆಲ್ಲಾ ಗಂಜಿ ಕೊಡುವ ವೃತ್ತಿ. ಅದಕ್ಕಾಗಿ ನಿನ್ನ ಬಳಿ ಕಾಸು ಕೇಳಲಿಲ್ಲ. ನಾನು ಕತ್ತರಿಸುತ್ತೇನೆ. ಯಾರಾದರೂ ತಿಂದರೆ ಸರಿ. ಯಾವುದನ್ನೂ ಹಾಳುಮಾಡಬಾರದು. ಹಾಗೆ ಮಾಡಿದರೆ ಅದು ಕೊಲೆಯಾಗುತ್ತೆ. ಅದು ಪಾಪ. ಏನು ಹೇಳುತ್ತೀಯೆ?"

"ಈ ದಿನ ಮಾತ್ರ ಒಂದು ಬಾರಿ ಆಟಕ್ಕಾಗಿ ಈ ಬೆಕ್ಕನ್ನು ಕತ್ತರಿಸಿ."

ಅವನು ಮುಗುಳ್ನಕ್ಕು ನನ್ನ ಗದ್ದವನ್ನು ಎತ್ತಿ ಕೈಯಲ್ಲಿ ಹಿಡಿದು ಹೇಳಿದ: (ಅವನ ಬೆರಳುಗಳು ಅಂಟು ಅಂಟಾಗಿದ್ದುವು)

"ಆಟಕ್ಕೆ ಕೊಲೆಮಾಡು ಎನ್ನುವೆಯಾ? ತ್ಸು... ತ್ಸು... ಆಟಕ್ಕಾಗಿ ಕತ್ತರಿಸತೊಡಗಿದರೆ ಕತ್ತಿ ಬೆಕ್ಕಿನೊಂದಿಗೆ ನಿಲ್ಲದು. ನಾನು ನಿನ್ನನ್ನು ಕೇಳುತ್ತೇನೆ: ಆಟಕ್ಕಾಗಿ ನಿನ್ನನ್ನು ಕತ್ತರಿಸಿದರೆ ಹೇಗೆ...?"

ನನಗೆ ದೇಹ ನಡುಗಿತು.

"ಉಂ... ಆ ಬೆಕ್ಕು ಬಹಳ ಚೇಷ್ಟೆ ಮಾಡುತ್ತದಲ್ಲಾ?"

"ನೀನು ಚೇಷ್ಟೆ ಮಾಡುವುದಿಲ್ಲವೆ? ಬೆಕ್ಕು ಎಂದರೆ ಹಾಗೇನೇ. ಚೇಷ್ಟೆ ಮಾಡಿದರೇನೆ ಅದಕ್ಕೆ ಬೆಕ್ಕು ಎಂದು ಹೆಸರು. ಅದರಂತೆ ನೀನೂ ಚೇಷ್ಟೆ ಮಾಡುತ್ತೀಯೆ. ಚಿಕ್ಕ ಮಕ್ಕಳೆಂದರೆ ಚೇಷ್ಟೆ ಮಾಡುತ್ತವೆ. ಬೆಕ್ಕೂ ಚೇಷ್ಟೆ ಮಾಡಲಿ ಬಿಡು. ಮನೆಯಲ್ಲಿ ಅಡುಗೆ ಮನೆಗೆ ಬೀಗ ಹಾಕಿಡುವಂತೆ ಹೇಳು" ಎಂದುಕೊಂಡೇ ನನ್ನ ಕೈಯಲ್ಲಿದ್ದ ಗೋಣಿಚೀಲವನ್ನು ಹಿಡಿದು ಒದರಿದ. ಒಂದೇ ಜಂಪ್ ಹಿಂತಿರುಗಿ ನೋಡದೆ ಓಡಿಬಿಟ್ಟಿತು ಬೆಕ್ಕು. ಹುಡುಗರೆಲ್ಲಾ ನಕ್ಕರು. ಕಟ್ಟಾ ಮೀಸೆಯವನೂ ನಕ್ಕ. ನಾನೂ ನಕ್ಕೆ.

ಆ ರಾತ್ರಿಯೆಲ್ಲಾ ನಾನು ಅಳುತ್ತಿದ್ದೆ. ಬೆಕ್ಕು ತಪ್ಪಿಸಿಕೊಂಡು ಹೋಯಿತಲ್ಲಾ ಎಂದಲ್ಲ. ನಾನು ಆಟಕ್ಕಾಗಿ ಸಾಯಿಸಿದ ತುಂಬೆಹುಳ, ಸಾವಿರ ಕಾಲಿನ ಹುಳ, ಗುಂಗುರುಹುಳ, ಓತಿಕೇತ, ಹೆಗ್ಗಣ, ಪಾಪಿ ಆ ನಾಯಿ... ಎಲ್ಲವನ್ನೂ ಜ್ಞಾಪಿಸಿಕೊಂಡು ಅತ್ತೆ...

ನಾನೀಗ ಆ ಅಗ್ರಹಾರದಲ್ಲಿಲ್ಲ. ಈಗಲೂ ಆ ಅಗ್ರಹಾರದಲ್ಲಿ ಅಂತಹ ಒಂದು ಬೆಕ್ಕು ಇದ್ದೀತು! ಇಲ್ಲವೆ?

# 10. ಪ್ಯಾಸೆಂಜರ್ ಗಾಡಿಯಲ್ಲಿ ಒಂದು ಹಗಲು

ಅದು ಎರಡನೆಯ ಮಹಾಯುದ್ಧ ಕಾಲ. ಆಗ ಯುದ್ಧ ನಡೆಯುತ್ತಿತ್ತು; ಇನ್ನೂ ಮುಗಿದಿರಲಿಲ್ಲ. ಆದರೆ ಯುದ್ಧಕ್ಕೆ ಹೋಗಿದ್ದ ಅಮ್ಮಾಸಿ ಊರಿಗೆ ಹಿಂತಿರುಗಿಬಿಟ್ಟ. ಅವನ ಇಷ್ಟವಿರುದ್ಧವಾಗಿ ಮನೆಗೆ ಕಳುಹಿಸಲ್ಪಟ್ಟ. ಯುದ್ಧಕ್ಕೆ ಅವನು ಇನ್ನು ಉಪಯೋಗವಿಲ್ಲವಂತೆ.

ಅವನೀಗ – ಮಿಲಿಟರಿ ಜೀವನವನ್ನು ಅನುಭವಿಸಿ ಬಿಸಾಡಲ್ಪಟ್ಟ ಹಿಪ್ಪೆ.

ಅವನ ಬರುವಿಕೆಯನ್ನು ನಿರೀಕ್ಷಿಸಿ ಎದುರ್ಗೊಳ್ಳಲು, ಕೊಂಡಾಡಲು ಅವನಿಗೆ ಯಾರೂ ಇಲ್ಲ. ಅದು ಅವನಿಗೆ ಗೊತ್ತು. ಏನೇ ಆಗಲಿ, ಬೇರೆ ದಾರಿಯಿಲ್ಲದೆ ತಾನು ಜಿಗುಪ್ಸೆಯಿಂದ ಬಿಟ್ಟು ಹೊರಟುಹೋದ ಆ ಕೊಳಚೆ ಪ್ರದೇಶಕ್ಕೇ ಅವನು ಹಿಂತಿರುಗುವಂತಾಯಿತು.

ಅಮ್ಮಾಸಿ ಯುದ್ಧವನ್ನು ಕೈಹಿಡಿದು ಮಿಲಿಟರಿಯೆಂಬ ಮಾವನ ಮನೆಯನ್ನು ಪ್ರವೇಶಿಸಿದ್ದ...

ಬೇರೆ ದೇಶಗಳಲ್ಲಿ ವಿದೇಶೀಯರೊಂದಿಗೆ ಸಂಚರಿಸುವ ಅನುಭವವನ್ನು, ಅವನ ಜಾತಿಯರಿತು 'ದೂರ ಹೋಗು' ಎಂದು ಅಸಡ್ಡೆ ಮಾಡದ ವಿಶಾಲ ಪ್ರಪಂಚದಲ್ಲಿ ಬಾಂಧವ್ಯ ದೊರೆತುದರಿಂದ ಅವನು ಮಿಲಿಟರಿ ಜೀವನವನ್ನು ಮೈತ್ರಿಯಿಂದ ಕಂಡುದೇನೂ ಆಶ್ಚರ್ಯವಲ್ಲ.

ಗುಲಾಮಗಿರಿಯಲ್ಲಿ ಹಿಂದೊಗೆಯಲ್ಪಟ್ಟ ಇಂಡಿಯಾದ ಸಾಮಾಜಿಕ ಜೀವನದ ಹೀನಾಯತನದ ಬಗ್ಗೆ ಬೇಸರಗೊಂಡು ಮೊದಲನೆಯ ಮಹಾಯುದ್ಧ ಕಾಲದಲ್ಲಿ ಸೈನ್ಯಕ್ಕೆ ಸೇರಿ ಹದಿನೆಂಟು ವರ್ಷ ವಯಸ್ಸಿನಲ್ಲೇ ಸಮುದ್ರ ದಾಟುವ ಭಾಗ್ಯ ಪಡೆದಿದ್ದವನು ಅಮ್ಮಾಸಿ.

ಆದರೂ ಆಗ ಒಂದು ಬಾರಿ ಕೆಲಕಾಲದ ನಂತರ ಯುದ್ಧ ನಿಂತ ಮೇಲೆ ಅದೇ ಹಿಂದಿನ ಜೀವನಕ್ಕೆ ಅವನು ಹಿಂತಿರುಗಬೇಕಾಯಿತು. ಪ್ರಪಂಚವನ್ನೇ ಪ್ರದಕ್ಷಿಣೆ ಮಾಡಿ ಬಂದು ಅವನು ತಿಳಿವಳಿಕೆ ಮತ್ತು ಅನುಭವ ಪಡೆದಿದ್ದ. ಆ ಸಮಾಜದವರು, ಆಶ್ಚರ್ಯದಿಂದ ತೆರೆದ ಬಾಯಿ ತೆರೆದಂತೆ ಅವನು ಹೇಳುವುದನ್ನು ಮಹಾ ಮರ್ಮ ಕತೆಗಳಂತೆ ಕೇಳಿ, ಅವು 'ಸುಳ್ಳು' ಎಂದು ಅವನ ಹಿಂದೆ ನಕ್ಕು ಎಲ್ಲಾ ಗೇಲಿ ವಿಚಾರಗಳೆಂದು ಹೇಳಿಕೊಂಡರು. ಹೀಗೆ ಅವರೊಂದಿಗೆ ಸೇರಿಯೂ ಸೇರದಂತೆ, ಮುಟ್ಟಿಯೂ ಮುಟ್ಟದಂತೆ ಜೀವನ ನಡೆಸುತ್ತಿದ್ದ ಅಮ್ಮಾಸಿಯಗೆ ಮತ್ತೆ ಒಂದು ಸುವರ್ಣಾವಕಾಶ, ಎರಡನೆಯ ಮಹಾಯುದ್ಧದ

ಕರೆಯ ರೂಪದಲ್ಲಿ ಒದಗಿಬಂತು. ನಲವತ್ತು ವರ್ಷದ ನಂತರ ಪುನಃ ಅವನಿಗೆ ಮಿಲಿಟರಿ ಜೀವನ ದೊರಕಿದ ಸಂತೋಷದಲ್ಲಿ, ತನ್ನ ಕೊಳಚೆ ಪ್ರದೇಶಕ್ಕೆ ನಮಸ್ಕಾರ ಹಾಕಿ ಸೈನಿಕನ ಗಾಂಭೀರ್ಯದಿಂದ ಅಮ್ಮಾಸಿ ಹೊರಹೊರಟ.

ಯುದ್ಧರಂಗದಲ್ಲಿ ಎದೆಗೆ ಒತ್ತಿಹಿಡಿದಿದ್ದ ಯಂತ್ರ ತುಪಾಕಿಯನ್ನು ಹೊತ್ತು ಶತ್ರುಗಳೊಂದಿಗೆ ಹೋರಾಡುತ್ತಿದ್ದಾಗ ಅವರ ಗುಂಡಿಗೆ ಗುರಿಯಾದ. ಕೆಲವು ತಿಂಗಳು ಮಿಲಿಟರಿ ಆಸ್ಪತ್ರೆಯಲ್ಲಿ ಬಿದ್ದಿದ್ದ. ನಂತರ ಅವನು ಮಿಲಿಟರಿಗೆ ಅನುಪಯುಕ್ತನೆಂದು ಡಾಕ್ಟರುಗಳು ಹೇಳಿದರು.

ಈಗ ಅವನಿಗೆ ಅಟೆನ್‌ಷನ್‌ನಲ್ಲಿ ಕೂಡ ನಿಲ್ಲಲಾಗದು. ಯಂತ್ರ ತುಪಾಕಿಯನ್ನು ಎರಡು ಕರಗಳಲ್ಲೂ ಅಪ್ಪಿ ಹಿಡಿದು ಪ್ರಯೋಗಿಸುವಾಗ, ಯಾವ ರೀತಿ ಅವನ ದೇಹವೂ ಕರಗಳೂ ನಡುಗುತ್ತಿದ್ದುವೋ ಅದರಂತೆ ಎದ್ದು ನಿಂತ. ಅವನ ಮೈ ನಡುಗುತ್ತಿತ್ತು. ಸೈನಿಕನ ಗಾಂಭೀರ್ಯದಿಂದ ಊರನ್ನು ಬಿಟ್ಟು ಹೋದ ಅಮ್ಮಾಸಿಗೆ – ಈಗ ತಲೆಯಾಡುತ್ತಿತ್ತು, ದೇಹ ನಡುಗುತ್ತಿತ್ತು. ಕೃಶನಾಗಿ ಬಾಗಿ ಹಿಂತಿರುಗಿ ಬರುವ ತನ್ನನ್ನು ನಮಸ್ಕರಿಸಿ ಸ್ವಾಗತಿಸಲು ಯಾರೂ ಬರಲಾರರೆಂದು ಗೊತ್ತು. ಆದರೂ ಅವನು ಬಂದ.

ಆ ಕುಗ್ರಾಮದ ರೈಲ್ವೆ ಸ್ಟೇಷನ್ನಿನಲ್ಲಿ ಪ್ಯಾಸೆಂಜರ್ ಗಾಡಿಗಳು ಮಾತ್ರ ನಿಲ್ಲುತ್ತಿದ್ದುವು. ಅದೂ ಹಗಲು ಹೊತ್ತಿನಲ್ಲಿ ಬರುವಂತಹವು. ಆದರೆ ಕೆಲವು ಸಂದರ್ಭಗಳಲ್ಲಿ ಕೆಲವು ಕಾರಣಗಳಿಂದ ಆ ಹಗಲಿನ ಪ್ಯಾಸೆಂಜರಿಗೆ ಮುಂಚೆ ರಾತ್ರಿಯೇ ಮೊದಲು ಬಂದು ಬಿಡುತ್ತಿತ್ತು. ಅಂತಹ ಅಸಾಧಾರಣ ಸಂದರ್ಭಗಳಲ್ಲಿ ರಾತ್ರಿಯ ವೇಳೆ ಕೂಡ ಅಲ್ಲಿ ರೈಲುಗಳು ನಿಲ್ಲುತ್ತಿದ್ದುದುಂಟು.

ಹಾಗೆ ಒಂದು ಅಸಾಧಾರಣ ಸಂದರ್ಭದಲ್ಲಿ ಹಿಂದಿನ ದಿನ ರಾತ್ರಿ – ಉತ್ತರದಿಂದ ಬರುವ ಆ ಹಗಲಿನ ಪ್ಯಾಸೆಂಜರ್ ಗಾಡಿ. ಈ ಹಿರ್ವನೇ ಪ್ರಯಾಣಿಕನಾದ ಅಮ್ಮಾಸಿಯನ್ನು ಇಳಿಸಿದ ನಂತರ ಆ ರೈಲ್ವೆ ಸ್ಟೇಷನ್ನಿನಲ್ಲಿ ಅಲ್ಪಸ್ವಲ್ಪವಿದ್ದ ಬೆಳಕೂ ಆರಿಹೋಯಿತು. ಪ್ರಪಂಚದಿಂದಲೇ ಬೇರೆಯಾದ ಒಬ್ಬಂಟಿಗನಾಗಿ ಅವನು ನಾಲ್ಕು ಕಡೆಯೂ ಕತ್ತಲನ್ನು ನೋಡುತ್ತಾ ನಿಂತಿದ್ದ.

ನಂತರ ತನಗೆ ಹಿಂದೆ ಮುಂದೆ ಪರಿಚಯವಿಲ್ಲದ ಊರಿನಲ್ಲಿ ತಿರುಗುವಂತೆ ಭುಜದಲ್ಲಿ ತನ್ನ ಕ್ಯಾನ್‌ವಾಸ್ ಚೀಲದ ಹೊರೆಯೊಂದಿಗೆ. ತಾನು ಹುಟ್ಟಿದ ಊರಿಗೆ ಹೋಗಿ ನಾಲ್ಕೈದು ಬೀದಿಗಳನ್ನು ನಿರರ್ಥಕವಾಗಿ ಸುತ್ತಿ ನೋಡಿ. ಆ ಮೇಲೆ ಊರ ಹೊರಗೆ ಬಂದು ಹಲವು ವರ್ಷಗಳಿಂದ ಪ್ರತ್ಯೇಕಿಸಲ್ಪಟ್ಟಿದ್ದ ತನ್ನ ಕೊಳಚೆ ಪ್ರದೇಶವನ್ನು ದೂರದಿಂದಲೇ ನೋಡಿದ. ಮನಸ್ಸಿಲ್ಲದೆ ತಾನೇ ಕೊಳಚೆ ಪ್ರದೇಶದ ಕಡೆ ನಡೆಯುತ್ತಿದ್ದುದನ್ನು ಥಟ್ಟನೆ ಅರಿತು ಒಂದು ನಿಮಿಷ ನಿಂತ. ಕಾಲುವೆ ಕಟ್ಟೆಯು ಕೊಳಚೆ ಪ್ರದೇಶಕ್ಕೆ ಬಂದಾಯಿತೆಂದು ತಿಳಿದಾಗ – ಮುಂದೆ ನಡೆದು ಕೊಳಚೆ ಪ್ರದೇಶಕ್ಕೆ ಹೋಗಿ ಯಾರನ್ನು ನೋಡಿ

ಯಾವ ಬಾಂಧವ್ಯ ಹೇಳಿಕೊಳ್ಳುವುದು ಎಂದೆಲ್ಲಾ ಯೋಚಿಸುವುದಕ್ಕಾಗಿ, ಹೊತ್ತಿದ್ದ ಹೊರೆಯನ್ನು ಇಳಿಸಿ ಮತ್ತೆ ಅಲ್ಲಿ, ಕುಳಿತುಕೊಂಡ.

ಅವನ ಕಾಲುಗಳ ಕೆಳಗೆ, ಕಾಲುವೆಯ ನೀರು ಝುಳಝುಳ ಹರಿಯುತ್ತಿತ್ತು. ಅವನ ತಲೆಯ ಮೇಲೆ ರಾತ್ರಿಯ ಹುಳಗಳ ಶಬ್ದ ಝೇಂಕಾರ ಮಾಡುತ್ತಿತ್ತು. ಬೀದಿಯ ಎರಡು ಕಡೆಯೂ ಕತ್ತಲಲ್ಲಿ ನಿಂತಿದ್ದ ಕಪ್ಪು ಮರಗಳ ನೆರಳಿನ ಮೇಲೆಲ್ಲಾ ಮಿಣುಕು ಹುಳುಗಳು ಹಾರಾಡುತ್ತಿದ್ದುವು. ದೂರದಲ್ಲಿ ಕೊಳಚೆ ಪ್ರದೇಶವೂ ಕಿರುಬೆಳಕೂ, ಗುಡಿಸಲುಗಳ ಮೇಲ್ಭಾಗದಲ್ಲಿ ಹೊಗೆಯೂ ಕಾಣಿಸಿದುವು. ಮಕ್ಕಳ ಅಳು, ವೃದ್ಧೆಯೋರ್ವಳ ಗದರಿಕೆ ಮಂದವಾಗಿ ಕೇಳಿಸಿತು.

ಅವಮ್ಮಾಸಿಗೆ ಥಟ್ಟನೆ ತನ್ನ ತಾಯಿಯ ನೆನಪು ಬಂತು.

ಇದೇ ಕಾಲುವೆ ಕಟ್ಟೆಯ ಮೇಲೆ ಎಷ್ಟು ಬಾರಿ ಅವನು ಕುಳಿತಿದ್ದ! ಝುಳಝುಳವೆನ್ನುವ ಈ ಕಾಲುವೆಯ ನೀರಿನಲ್ಲಿ ಅವನ ತಾಯಿ ಹುಲ್ಲಿನ ಕಟ್ಟನ್ನು ತೊಳೆಯುತ್ತಿದ್ದಾಗಲೆಲ್ಲಾ ಕೇವಲ ಕೌಪೀನ ತೊಟ್ಟ ಚಿಕ್ಕ ಬಾಲಕನಾಗಿ ಕೈಯಲ್ಲಿ ಕಬ್ಬಿನ ತುಂಡು ಹಿಡಿದು ನಿಂತಿದ್ದ ದಿನಗಳು ಅವನಿಗೀಗ ನೆನಪಿಗೆ ಬಂದುವು. ಅವನ ತಾಯಿಗೆ ಆಗ ಇದ್ದ ಆಸೆಯೆಂದರೆ ತನ್ನ ಮಗ ಬೆಳೆದು ಮದುವೆಯಾಗಿ ನಾಲ್ವರಂತೆ ವ್ಯವಸಾಯ ಮಾಡಿಕೊಂಡೋ ಹಸುಗಳನ್ನು ಸಾಕುತ್ತಲೋ ಇದ್ದರೆ ಸಾಕು. ಆ ಆಸೆಗಳನ್ನೆಲ್ಲಾ ಗೇಲಿ ಮಾಡಿ ಮುರಿದು ಅವನು ಮಹಾಯುದ್ಧ ಕಾಲದಲ್ಲಿ ಮಿಲಿಟರಿಗೆ ಹೋದ. ಅವನು ಮಿಲಿಟರಿಯಲ್ಲಿದ್ದ ಕಾಲದಲ್ಲಿ ಆಕೆ ಸತ್ತುಹೋದ ಸಂಗತಿ ಹಿಂತಿರುಗಿದಾಗ ಮಾತ್ರ ಗೊತ್ತಾಯಿತು. ಆಕೆಗಾಗಿ ಅವನು ಅಳಲಿಲ್ಲ...

ಅವಮ್ಮಾಸಿಗೆ ಮರಣವೆಂಬುದು ತುಂಬಾ ಅಲ್ಪವಾದ ವಿಷಯ. ಅವನು ಸಾವಿನ ಘೋರತನದ ಸಮೀಪ ಓಡಾಡಿದವನು. ಈಗ ಅವನಿಗೆ ತಡೆಯುವುದಕ್ಕೆ ಕಠಿಣವಾಗಿದ್ದುದು. ಜೀವಿಸುವವನು ಉಪಯೋಗವಿಲ್ಲದೆ ಸುಮ್ಮನೆ ದೇಹ ಹೊತ್ತು ಬದುಕಿರುವುದಷ್ಟೆ.

'ಯುದ್ಧದಲ್ಲಿ ತಾನು ಸತ್ತುಹೋಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು' ಎಂದು ಈಗ ಕಲ್ಪನೆ ಮಾಡಿಕೊಂಡು ನೋಡಿದ. ಅವನಿಗೆ ಈಗ ಯಾರಿದ್ದಾರೆ? ಅವನು ಯಾರಿಗಾಗಿ ಜೀವಿಸಿರಬೇಕು? ಅವನಲ್ಲಿ ಈಗ ಕೆಲವು ನೂರು ರೂಪಾಯಿಗಳಿವೆ. ಅದನ್ನು ಇಟ್ಟುಕೊಂಡು ಮಾಡುವುದೇನು...?

ಐವತ್ತು ವರ್ಷಗಳಿಗಾಗಿ ಒದಗಿಬಂದ ವೃದ್ಧಾಪ್ಯ ಈ ನಿರಾಧಾರವಾದ ದಿಕ್ಕುಗೆಟ್ಟ ಪರಿಸ್ಥಿತಿಯನ್ನು ಅನುಭವಿಸುವುದಕ್ಕಿಂತ ಮರಣವೇ ಸುಖವಾಗಿ ಕಲ್ಪನೆಯಾಗಿ ಕಂಡಿತವನಿಗೆ.

ಆಗ ಕಿರಕಿರನೆ ಚಕ್ರದಲ್ಲಿ ಕವಾಣ ಮಾಡುವ ಸಂಗೀತ ಹಳ್ಳ ದಿಣ್ಣೆಗಳಲ್ಲಿ ಆಗುವ ದಡ ಬಡ ತಾಳ ಕೇಳಿಸಿತು. ದೂರದಲ್ಲಿ ಒಂದು ಎತ್ತಿನ ಬಂಡಿ ಕಾಲುವೆಯ ಕಡೆ ಬರುತ್ತಿತ್ತು.

ಬಂಡಿ ಸಮೀಪಿಸುತ್ತಿರುವಾಗ ಅದರಿಂದ ಹೆಣ್ಣಿನ ಕಂಠ 'ಏಯ್. ಸುಮ್ಮನಿರು... ಅದೋ ಯಾರೋ ಕೂತಿದ್ದಾರೆ' ಎಂದು ತನ್ನನ್ನು ನೋಡಿ ಎಚ್ಚರಿಸಿದ ರಹಸ್ಯ ಧ್ವನಿಯಿಂದ ಅಲ್ಲಿ ಏನೋ ಚೆಲ್ಲಾಟವಿರಬೇಕೆಂದು ಊಹಿಸಿದ ಅಮ್ಮಾಸಿ ತನ್ನ ಇರುವಿಕೆಯನ್ನು ಕೆಮ್ಮಿ ತೋರಿಸಿಕೊಂಡ.

"ಯಾರಲ್ಲಿ ಕಟ್ಟೆಯ ಮೇಲೆ?" ಎಂದು ಬಂಡಿಯುವನು ಕೂಗಿದ.

"ಬೇರೆ ಊರು... ಮಡುವನ ಕಟ್ಟೆಗೆ ಹೋಗಬೇಕು" ಎಂದು ಉತ್ತರ ಕೊಟ್ಟ ಅಮ್ಮಾಸಿ.

ಬಂಡಿ ಅವನ ಬಳಿಯಿಂದ ಹಾದು ಸ್ವಲ್ಪ ಹೊತ್ತಾದ ಮೇಲೆ ಅದರ ಶಬ್ದವನ್ನೂ ಮೀರಿಸಿ ಆ ಹೆಣ್ಣಿನ ಕಲಕಲ ನಗು ಅಮ್ಮಾಸಿಯ ಕಿವಿಗಳಲ್ಲಿ ಪ್ರತಿಧ್ವನಿಸಿತು... ಅವರು ಮಾತನಾಡಿದ ರೀತಿಯಿಂದ ಇಬ್ಬರೂ ಸ್ವಲ್ಪ ಪ್ರಣಯ ಕೇಳಿಯಲ್ಲಿ ಮಾತ್ರವಲ್ಲದೆ ಸ್ವಲ್ಪ ಕಳ್ಳನ್ನೂ ಕುಡಿದವರಾಗಿದ್ದಾರೆಂದು ಅರಿತ ಅಮ್ಮಾಸಿ "ಉಂ... ವಯಸ್ಸು!" ಎಂದು ಗೊಣಗಿಕೊಂಡ.

'ನಾನು ಅನಾವಶ್ಯಕವಾಗಿ ಏನೇನೋ ಹುಡುಕಿ ಈ ಬಾಳಿನಲ್ಲಿ ಬೇಸರಗೊಂಡು ಏನು ಪ್ರಯೋಜನ ಹೊಂದಿದೆ?' ಎಂದು ಮನಸ್ಸಿನಲ್ಲಿ ಒಂದು ಯೋಚನೆ ಬಂದಿತವನಿಗೆ.

ಸ್ವಲ್ಪ ಹಿಂದೆ ಬಂಡಿಯಲ್ಲಿ ಅವನ ಬಳಿಯಿಂದ ಹಾದುಹೋದ ಪ್ರಾಯದ ಕಲರವ. ಕಳೆದುಹೋದ ತನ್ನ ಪ್ರಾಯವೇ ತನ್ನನ್ನು ನೋಡಿ ನಗುವಂತಿತ್ತು.

"ಅಹ್... ವಯಸ್ಸು, ಅದೆಲ್ಲಾ ಆಯಿತಲ್ಲಾ...! ನನಗೂ ಇತ್ತು... ಹದಿನೆಂಟು ವರ್ಷ, ಇಪ್ಪತ್ತು ವರ್ಷ, ಮೂವತ್ತು, ನಲವತ್ತು... ಉಂ, ಆಗ ಅದನ್ನು ಗಮನಿಸದೆ ನಾನು... ಓಡಿಹೋದೆ... ಅದರ ಹಿರಿಮೆ ಆಗ ತಿಳಿಯಲಿಲ್ಲ... ಓಡಿಹೋದೆ... ಮನುಷ್ಯರು ಜಾತಿ ಮತವೆಂದು ಪ್ರತ್ಯೇಕಿಸಿದರೂ ದೇವರು ಕರುಣೆಯಿಂದ ಎಲ್ಲರಿಗೂ ಸಮವಾಗಿ ಕೊಟ್ಟಿರುವ ವಯಸ್ಸು, ಪ್ರಾಯವನ್ನು ಎತ್ತಿ ಒಗೆದು ಎಷ್ಟು ವೇಗವಾಗಿ ಓಡಿದೆ! ನಾನು ಓಡಿಕೊಂಡಿದ್ದಾಗ ಅದು ನನ್ನಿಂದ ಓಡಿಹೋಗುತ್ತಿತ್ತೆಂದು ಆಗ ತಿಳಿಯಿತೆ? ನಾನು ಓಡುವುದಕ್ಕೆ ಆ ವಯಸ್ಸಿನ ಅಹಂಕಾರ ತಾನೆ ಕಾರಣವಾಗಿತ್ತು! ಓಡಿ ಓಡಿ ಸೋತನಂತರ ಈಗ ಗೊತ್ತಾಗುತ್ತೆ... ಅಹ್ ಕಳೆದುಹೋಯಿತಲ್ಲಾ ಎಂದು ಕೊಂಡರೆ... ಏನು ಲಾಭ?" ಎಂದು ತನ್ನೊಳಗೇ ವ್ಯಥೆಯಿಂದ ಅಳುತ್ತಾ ಗೊಣಗಿಕೊಂಡ ಅಮ್ಮಾಸಿ.

– ಹೌದು ಕಳೆದುಕೊಂಡುದು – 'ಇದೆ' ಎಂಬ ನೆನಪಿನಲ್ಲೇ ಕಳೆದುಕೊಳ್ಳುತ್ತಿರುವಾಗ 'ಕಳೆದುಕೊಳ್ಳುತ್ತಿದ್ದೇವೆ' ಎಂದು ತಿಳಿಯದ ಮಟ್ಟಕ್ಕೆ ಅದನ್ನು ತಡೆದುಕೊಳ್ಳುವ ಶಕ್ತಿಯಿದ್ದು ಪೂರ್ಣವಾಗಿ ಕಳೆದುಕೊಂಡಮೇಲೆ. 'ಹೋಯಿತಲ್ಲಾ' ಎಂಬ ನೆನಪಿನಲ್ಲೇ ಆ ಕಳೆದುಹೋದುದು – ಅದು ಯಾವುದೇ ಆಗಿದ್ದರೂ ಎಷ್ಟು ಮಹತ್ವದ್ದಾಗಿಬಿಡುತ್ತೆ! ಮಹತ್ವವಾದುದು ಎಂಬುದರ ಅರ್ಥವೇ ಅದು...

ಅಮ್ಮಾಸಿ ರಾತ್ರಿ ಬಹಳ ಹೊತ್ತು ಕೊಳಚೆ ಪ್ರದೇಶಕ್ಕೆ ಹೋಗುವ ಮನಸ್ಸಿಲ್ಲದೆ ಕಾಲುವೆ ಕಟ್ಟೆಯ ಮೇಲೆಯೇ ಕುಳಿತಿದ್ದ. ಇನ್ನೂ ಆ ಕಡೆಯಿಂದ ಮನುಷ್ಯರ ಮಾತುಗಳ ಶಬ್ದ, ನಾಯಿಗಳ ಕೂಗೂ ಕೇಳಿಸುತ್ತಿದ್ದುವು.

ಕೊಳಚೆ ಪ್ರದೇಶಕ್ಕೆ ಸೇರಿದ, ಮುಂಡಾಸು ಕಟ್ಟಿದವನೊಬ್ಬ ಬಾಯಲ್ಲಿ ಚುಟ್ಟಾದ ಬೆಂಕಿ ಭುಗಭುಗ ಎನ್ನುತ್ತಿರಲು, ಗಾಳಿಯನ್ನೇ ದುರ್ವಾಸನೆಗೊಳಿಸುವ ಹೊಗೆಯೊಡನೆ ಕತ್ತಲಾದ ದಾರಿಯಲ್ಲಿ ಭಯವನ್ನೋಡಿಸಲು ಉಚ್ಚ ಕಂಠದಿಂದ ಹಾಡಿಕೊಂಡು ಬಂದ. ಕಾಲುವೆ ಕಟ್ಟೆಯ ಮೇಲಿದ್ದ ಆಕೃತಿಯನ್ನು ಕಂಡು "ಯಾರದು...?" ಎಂದು ಭಯಗೊಂಡು ಕೇಳಿದ. ಹಾಡು ನಿಂತಿತು. ತಾನೂ ನಿಂತ.

"ನಾನು ಮನುಷ್ಯನೇ, ಭಯಪಡಬೇಡ!" ಎಂದು ಎದ್ದುನಿಂತು, ಬೂಟು ಹಾಕಿದ್ದ ಕಾಲನ್ನು ನೆಲದ ಮೇಲೆ ಉಜ್ಜಿ ಶಬ್ದ ಮಾಡಿದ ಅಮ್ಮಾಸಿ.

ಮುಂಡಾಸು ಕಟ್ಟಿದವನು ಅಮ್ಮಾಸಿಯ ಪರಿಚಯ ಮಾಡಿಕೊಳ್ಳಲು ಹತ್ತಿರ ಬಂದು "ಯಾರದು?" ಎಂದು ವಿಚಾರಿಸಿ ನೋಡಿದ. ಆ ನಿಮಿಷ ಥಟ್ಟನೆ ಅಮ್ಮಾಸಿಗೆ ದೂರ ಬಾಂಧವ್ಯದ ತಂಗಿಯ ಕಾಶಾಂಬುವಿನ ನೆನಪು ಬಂತು. ಒಡನೆಯೇ ಅವಳ ಗಂಡ ಶಡೈಯಾಂಡಿಯ ಹೆಸರು ಹೇಳಿ, ಅವರನ್ನು ಹುಡುಕಿಕೊಂಡು ಬೇರೆ ಊರಿನಿಂದ ಬಂದಿರುವುದಾಗಿ ತಿಳಿಸಿದ.

"ಶಡೈಯಾಂಡಿಗೆ... ರೈಲ್ವೆಯಲ್ಲಿ ಪೋರ್ಟರ್ ಕೆಲಸ ಸಿಕ್ಕಿತು. ಅವನು ಪಟ್ಟಣಕ್ಕೆ ಹೋಗಿಬಿಟ್ಟನಲ್ಲಾ... ಹೆಂಡತಿಯನ್ನೂ ಕರೆದುಕೊಂಡು... ನಿನಗೆ ಗೊತ್ತಿಲ್ಲವೆ?" ಎಂದು ಮುಂಡಾಸಿನವನು ಹೇಳಿದ. ಅಮ್ಮಾಸಿಗೆ ಅತ್ಯಂತ ನಿರಾಸೆಯಾಯಿತು. ಅವನು ಕಾಶಾಂಬುವನ್ನಾಗಲಿ ಅಥವಾ ಅವಳ ಗಂಡನನ್ನಾಗಲಿ ನಿರೀಕ್ಷಿಸಿ ಬರಲಿಲ್ಲ. ಆದರೂ ಕೊಳಚೆ ಪ್ರದೇಶಕ್ಕೆ ಪ್ರವೇಶಿಸದೆ ಹಿಂತಿರುಗಲು ಅದೇ ಸಾಕಷ್ಟು ಕಾರಣವಾಗಿತ್ತವನಿಗೆ. "ಪಟ್ಟಣದಲ್ಲಿ ಎಲ್ಲಿದ್ದಾರೆಂದು ಗೊತ್ತೆ?" ಎಂದು ವಿಚಾರಿಸಿದ.

"ಎಳಂಬೂರು ಸ್ಟೇಷನ್‌ನಲ್ಲಿ ಪೋರ್ಟರ್ ಕೆಲಸ ಮಾಡುತ್ತಾನಂತೆ ಶಡೈಯಾಂಡಿ, ಅಲ್ಲಿಗೆ ಹೋದರೆ ನೋಡಬಹುದು" ಎಂದು ಹೇಳಿ ಮುಂಡಾಸಿನವನು ಕೊಳಚೆ ಪ್ರದೇಶದ ಕಡೆಗೆ ಹೊರಟ.

ಅಮ್ಮಾಸಿ ಅವನ ಬೆನ್ನಿನ ಹಿಂದೆ ನಿಂತು ಆ ಕೊಳಚೆ ಪ್ರದೇಶವನ್ನು ಬಹಳ ಹೊತ್ತು ದೃಷ್ಟಿಸಿ ನೋಡಿ ತನ್ನ ಕ್ಯಾನವಾಸ್ ಚೀಲವನ್ನು ಎತ್ತಿ ಭುಜದ ಮೇಲೆ ಇಟ್ಟುಕೊಂಡು ರೈಲ್ವೆ ಸ್ಟೇಷನನ್ನು ಕುರಿತು ಹೊರಟ.

ಪ್ರೀತಿ ತೋರಿಸಲೂ ಅಪ್ಪಿಕೊಳ್ಳಲೂ ಯಾರೂ ಇಲ್ಲದ ಒಂಟಿಯಾದ ತನಗಿದ್ದ ಒಂದೇ ಬಂಧನ ಆ ದೂರದ ತಂಗಿ, ಅವಳ ಗಂಡ, ಅವಳ ಮಕ್ಕಳು ಮಾತ್ರ ಎಂಬ ತೀರ್ಮಾನ ಅವನ ಮನಸ್ಸಿಗೆ ಬಂದ ಆ ಕ್ಷಣವೇ ಅವನ ನಡೆಯಲ್ಲಿ ಶಕ್ತಿಮೂಡಿತು.

ಮಾರನೆಯ ದಿನ ಬೆಳಿಗ್ಗೆ ಉದಯಕಾಲ ಬಹಳ ಹೊತ್ತು ಕಳೆದು ಕೆಲವು ಗಂಟೆಗಳ ಕಾಲ ನಿಧಾನವಾಗಿ – ಹಗಲಿನಲ್ಲೇ ಬಂದು ಸೇರಿತು ಆ ಪಾಸೆಂಜರ್ ಗಾಡಿ.

ಗಾಡಿಯಲ್ಲಿ ಹತ್ತಿದ ಅಮ್ಮಾಸಿ ತನ್ನ ಗ್ರಾಮವನ್ನು ದೂರದಲ್ಲಿ ಕಾಣುವ ಕೊಳಚೆ ಪ್ರದೇಶವನ್ನು, ಕಾಲುವೆ ಕಟ್ಟೆಯನ್ನು ದೃಷ್ಟಿಸಿ ನೋಡಿದ.

ಅವನ ಕೊಳಚೆ ಪ್ರದೇಶದ ವಾಸಿಗಳಾಗಿದ್ದು ಕೌಪೀನ ಧರಿಸಿದ ಹುಡುಗರು, ಮೇಲೆ ಬಟ್ಟೆಯಿಲ್ಲದೆ, ಕೆಳಗೆ ಲಂಗ ತೊಟ್ಟ ಕಪ್ಪು ಹೆಣ್ಣುಮಕ್ಕಳೂ ಆ ಗ್ರಾಮದ ಬೆಳೆಗಳಾದ ತಾಟಿ ನುಂಗು, ವೀಳ್ಯದೆಲೆ, ಎಳೆ ಸೌತೇಕಾಯಿ ಮೊದಲಾದುವನ್ನು ಬೆಲೆ ಕೂಗಿಕೊಂಡು ಮಾರುತ್ತಾ ರೈಲಿನ ಪಕ್ಕದಲ್ಲಿ ಓಡುತ್ತಿದ್ದುದನ್ನು ಮಂದಹಾಸದಿಂದ ನೋಡುತ್ತಿದ್ದ ಅಮ್ಮಾಸಿ. ಅವರಿಂದ ಏನಾದರೂ ಕೊಂಡುಕೊಳ್ಳಬೇಕೆಂದು ಸ್ವಲ್ಪ ಹೊತ್ತಿನ ನಂತರ ಬಯಸಿದ.

ಎಳೆಸೌತೆಕಾಯಿ ಮಾರುತ್ತಿದ್ದ ಓರ್ವ ಹುಡುಗಿಯನ್ನು ನೋಡಿದ. ಷರಟು ಜೇಬಿಗೆ ಕೈಹಾಕಿ ಚಿಲ್ಲರೆಯನ್ನು ಎತ್ತಿಕೊಂಡೇ ಅವಳನ್ನು ಕೂಗಿ ಕರೆದ ವೇಳೆಯಲ್ಲಿ ರೈಲೂ ಕೂಗಿ ಚಲಿಸಲಾರಂಭಿಸಿತು. ಒಡನೆಯೇ ಅವನು ಆ ಬಾಲಕ ಬಾಲಕಿಯರ ಕಡೆ ಆ ಚಿಲ್ಲರೆಯನ್ನು ಹಾಕಿದ.

ಅವರು ಉತ್ಸಾಹದಿಂದ ಅದನ್ನು ಆಯ್ದುಕೊಂಡು ತಲೆಯೆತ್ತಿದಾಗ ರೈಲು ಓಡುತ್ತಿತ್ತು. ಅಮ್ಮಾಸಿ ಮಗುವಿನಂತೆ ನಕ್ಕ. ಅವರು ಆ ಸೈನಿಕನಿಗೆ ಉತ್ತರವಾಗಿ ಮಂದಹಾಸದಿಂದ ನಮಸ್ಕಾರ ಮಾಡುತ್ತಾ ಸಾಲಾಗಿ ನಿಂತಿದ್ದರು.

ಹುಟ್ಟಿದ ಊರಿನಿಂದ ಬೀಳ್ಕೊಡುಗೆ ಪಡೆದಂತೆ ನಡುಗುತ್ತಿದ್ದ ತಲೆಗೆ ಕೈಯೆತ್ತಿ ಅಮ್ಮಾಸಿ ನಮಸ್ಕರಿಸಿದ. ಅವನ ಕಣ್ಣೆವೆಗಳಲ್ಲಿ ಕಣ್ಣೀರು ತುಂಬಿ ಚದುರಿತು...

ಗಾಡಿಯಲ್ಲಿ ಸಂದಣಿಯಿಲ್ಲ. ಲಗ್ಗೇಜ್ ಕ್ಯಾರಿಯರ್ ಮೇಲೆ ಸಾಮಾನು ಇಡುವ ಕಡೆ ಕಾಲಿನಲ್ಲಿ ಬೂಟುಗಳು, ಸೊಂಟದಲ್ಲಿ ಸಿಂಗಪುರದ ಹಸಿರು ಬೆಲ್ಟ್ ತೊಟ್ಟ ಗ್ರಾಮದ ಪ್ರಾಯಸ್ಥ ಬೀಡಿ ಸೇದುತ್ತಾ ಮಲಗಿದ್ದ.

ಎದುರು ಓರ್ವ ತಾಯಿ ನಿದ್ರಿಸುತ್ತಿದ್ದ ಹೆಣ್ಣುಮಗುವನ್ನು ಮಡಿಲಲ್ಲಿ ಮಲಗಿಸಿಕೊಂಡು ತಾನೂ ಒರಗಿ ಮಲಗಿದ್ದಳು.

ಅಮ್ಮಾಸಿ ಅವಳನ್ನು ದೃಷ್ಟಿಸಿ ನೋಡಿದ. ಅವಳಿದ್ದ ರೀತಿಯಿಂದ ಅವಳೋರ್ವ ವಿಧವೆಯೆಂದು ತಿಳಿಯಿತು. ಬಹುಕಾಲದ ಬಲವತ್ತರವಾದ ಕ್ಷಯರೋಗದಿಂದ ಕೃಶಿಸಿ ಹೋಗಿ ಕೇವಲ ಅಸ್ಥಿಪಂಜರದಂತೆ ಇದ್ದಳು. ಅವಳ ಕಂಠದಲ್ಲಿ ಪ್ರಾಣ ವಿಲಿವಿಲಿ ಒದ್ದಾಡುತ್ತಿದ್ದುದೂ ತಿಳಿಯಿತು.

ಒಣಗಿದ ಮರವೊಂದರಲ್ಲಿ ಹುಟ್ಟಿಕೊಂಡ ಬಳ್ಳಿಯಲ್ಲಿ ಒಂದು ಪುಷ್ಪವರಳಿದಂತೆ ಅವಳ ಮಡಿಲಲ್ಲಿ ಮಲಗಿದ್ದ ಆ ಸುಂದರ ಹೆಣ್ಣುಮಗು ನಿದ್ರೆಯಲ್ಲಿ ಮುಖ ಚಿಕ್ಕದು ಮಾಡಿಕೊಂಡು ಮತ್ತೆ ಅರಳಿಸಿ ನಕ್ಕಿತು.

ರೈಲಿನ ನಿಧಾನವಾದ ಚಲಿಸುವಿಕೆಯಲ್ಲಿ ಏರಿದ ಟಿಕೆಟ್ ಕಲೆಕ್ಟರು ಬಾಗಿಲಲ್ಲೇ ಸ್ವಲ್ಪ ನಿಂತು ಸಿಗರೇಟನ್ನು ಸೇದಿ ಬಿಸಾಡಿ ಸಾವಧಾನವಾಗಿ ಬಂದು ಅಮ್ಮಾಸಿಯ ಪಕ್ಕದಲ್ಲಿ ಕುಳಿತರು. ಸ್ವಲ್ಪ ಹೊತ್ತು ಏನೋ ಯೋಚನೆಯಿಂದ ಕುಳಿತಿದ್ದ ಟಿಕೆಟ್ ಕಲೆಕ್ಟರ್ ಪಕ್ಕದ ಸ್ಟೇಷನ್ ಸಮೀಪಿಸುತ್ತಿದ್ದುದನ್ನು ಅರಿತು, ಅಮ್ಮಾಸಿಯ ತಲೆಯ ಮೇಲೆ ಲಗ್ಗೇಜು ಕ್ಯಾರಿಯರ್ ಮೇಲೆ ಮಲಗಿದ್ದ ಗ್ರಾಮದವನನ್ನು ಕುರಿತು ಟಿಕೆಟ್ ಕೇಳಿದರು. ಅಮ್ಮಾಸಿಯೂ ತನ್ನ ಕೋಟಿನ ಜೇಬಿನಲ್ಲಿದ್ದ ಟಿಕೆಟ್ಟನ್ನು ಹುಡುಕಿ ಎತ್ತಿದ.

ಅವನ್ನು ತೆಗೆದು ಹಿಂಭಾಗದಲ್ಲಿ ಸಹಿ ಹಾಕಿಕೊಟ್ಟ ನಂತರ, ನಿದ್ರಿಸುತ್ತಿದ್ದ ಆ ಬ್ರಾಹ್ಮಣ ವಿಧವೆಯನ್ನು ಎಚ್ಚರಿಸಲು ಕೈಯಲ್ಲಿದ್ದ ಪೆನ್ಸಿಲ್‌ನಿಂದ ಹಲಗೆಯನ್ನು ತಟ್ಟಿದರು.

ಆ ತಾಯಿ ತನ್ನೊಳಗೆ ಮನಸ್ಸಿನಲ್ಲಿ ದೇಹದಲ್ಲೂ ಎಷ್ಟು ವಿಧವಾದ ಕಷ್ಟಗಳನ್ನು ಅನುಭವಿಸುತ್ತಿದ್ದಳೋ...? ಶುಷ್ಕವಾದ ಕಣ್ಣುಗಳನ್ನು ತೆರೆದು ಒಮ್ಮೆ ನೋಡಿದಳು. ನಂತರ ಹಾಗೆಯೇ ಸೋಲಾಗಿ ಕಣ್ಮುಚ್ಚಿದ್ದಳು. ಒಳಗೇ ಕೊಡುವ ಕಷ್ಟವನ್ನು ಸಹಿಸ ಲಾರದವಳಂತೆ ಬಿಳುಪಾದ ತುಟಿಗಳನ್ನು ಕಚ್ಚಿ, ಹುಬ್ಬುಗಳನ್ನು ಬಾಗಿಸಿ 'ದೇವರೇ' ಎಂದು ನೋವುಪಟ್ಟಳು.

"ಅಮ್ಮಾ... ಇದೋ ಟಿಕೆಟ್ ಕೇಳುತ್ತಿದ್ದಾರೆ ನೋಡಿ" ಎಂದು ವಿನಯವಾಗಿ ಆಕೆಯನ್ನು ಎಚ್ಚರಿಸಿದ ಅಮ್ಮಾಸಿ.

ಎದ್ದು ಕೂರಲಾರದೆ ಹಾಗೆಯೇ ಕಣ್ತೆರೆದು ನೋಡಿದ ಆಕೆ "ಟಿಕೆಟ್ಟೇ...?" ಎಂದು ಹೀನ ಸ್ವರದಲ್ಲಿ ಕೇಳಿದಳು.

"ಟಿಕೆಟ್ಟಿಲ್ಲ ತಾನೆ? – ಮುಂದಿನ ಸ್ಟೇಷನ್ನಿನಲ್ಲಿ ಇಳಿದುಬಿಡಮ್ಮಾ..." ಎಂದು ನಿರ್ದಾಕ್ಷಿಣ್ಯವಾಗಿ ಹೇಳಿ ಬೇರೆ ಕಡೆ ತಿರುಗಿ ಹೊರಗೆ ಇಣಕಿ ನೋಡಿದರು ಟಿಕೆಟ್ ಕಲೆಕ್ಟರ್.

ಅಮ್ಮಾಸಿ ಅವಳ ಪರಿತಾಪ ಸ್ಥಿತಿಯನ್ನು ಆಳವಾದ ಚಿಂತೆಯಿಂದ ದೃಷ್ಟಿಸಿ ನೋಡು ತ್ತಿದ್ದ, ಮುಂದಿನ ಸ್ಟೇಷನ್ ಸಮೀಪವಾಗುತ್ತಿತ್ತು. ಅವಳು ಬಹಳ ಪ್ರಯತ್ನಪಟ್ಟು ಏಳಲು ಪ್ರಯತ್ನಿಸಿದಾಗ ಮಡಿಲಲ್ಲಿ ಮಲಗಿದ್ದ ಎರಡು ವರ್ಷದ ಮಗು ಎದ್ದು ಕುಳಿತು ಕಣ್ಣುಗಳನ್ನು ಉಜ್ಜಿಕೊಂಡಿತು. ಹಸಿವಿನಿಂದ, ನಿದ್ರೆಗೆಟ್ಟ ಮುಜುಗರದಿಂದ ಅಳತೊಡಗಿತು.

"ಎಷ್ಟು ದೂರ ಹೋಗಬೇಕಮ್ಮಾ ನೀವು?" ಎಂದು ಅಮ್ಮಾಸಿ ಆಕೆಯನ್ನು ವಿಚಾರಿಸಿದ.

"ಪಟ್ಟಣಕ್ಕೆ ಹೋಗಬೇಕಪ್ಪ" ಎಂದು ನಿಶ್ಶಕ್ತಿಯಿಂದ ನಿಟ್ಟುಸಿರುಬಿಟ್ಟಳು.

"ಸಾರ್... ಪಟ್ಟಣಕ್ಕೆ ಒಂದು ಟಿಕೆಟ್ ಬರೆಯಿರಿ... ನಾನು ಹಣ ಕೊಡುತ್ತೇನೆ... " ಎಂದು, ತನ್ನ ಕೋಟು ಜೇಬಿನಿಂದ ಉಬ್ಬಿದ್ದ ಭಾರವಾದ ಪರ್ಸನ್ನು ತೆಗೆದ ಅಮ್ಮಾಸಿ.

ಟಿಕೆಟ್ ಕಲೆಕ್ಟರ್ ಅವನನ್ನು ಒಂದು ಕ್ಷಣ ನೋಡಿ ಅವನ ಔದಾರ್ಯವನ್ನು ಕೊಂಡಾಡುವಂತೆ ಮಂದಹಾಸ ಬೀರಿ, ನಿಂತಿದ್ದ ಹಾಗೇ ಒಂದು ಕಾಲನ್ನೆತ್ತಿ ಬೆಂಚಿನ ಮೇಲಿಟ್ಟು ಮೊಣಕಾಲಿನ ಮೇಲೆ ನೋಟು ಪುಸ್ತಕವನ್ನಿಟ್ಟುಕೊಂಡು ರಶೀತಿ ಬರೆದರು.

ಆ ವಿಧವೆ ಹೆಣ್ಣು ಅಮ್ಮಾಸಿಯನ್ನು ನೋಡಿ. "ನಿಮ್ಮ ಕುಟುಂಬದವರೆಲ್ಲಾ ದೀರ್ಘಾಯುಷ್ಯವಂತರಾಗಿರಲಪ್ಪ" ಎಂದು ಕೃತಜ್ಞತೆಯಿಂದ ಸೊರಗಿಹೋಗಿದ್ದ ಬೆರಳು ಗಳಿದ್ದ ಕೈಗಳಿಂದ ನಮಸ್ಕರಿಸಿದಳು. ನಿದ್ರೆಗೆಟ್ಟು ಅತ್ತ ಮಗು ಮತ್ತೆ ತಾಯಿಯ ಮಡಿಲಲ್ಲಿ ಮುಖ ಮುಚ್ಚಿಕೊಂಡಿತು.

ಆ ಆಶೀರ್ವಾದ ವಾಕ್ಯ ಕೇಳಿ ಒಂದು ಕ್ಷಣ ಯೋಚಿಸಿ ತಲೆಬಾಗಿ ತನ್ನೊಳಗೇ ನಕ್ಕ ಅಮ್ಮಾಸಿ.

ಟಿಕೆಟ್ ಕಲೆಕ್ಟರ್ ಒಂದು ಕಡೆ ಕೆಳಗೆ ಇಳಿಯುತ್ತಲೂ ಮತ್ತೊಂದು ಕಡೆ ಟಿಕೆಟ್ ಇಲ್ಲದ ವೃದ್ಧ ಭಿಕ್ಷುಕನೂ ಅವನ ಹೆಂಡತಿಯೂ ಗಾಡಿ ಹತ್ತಿ ಒಳಗೆ ಬಂದರು.

ಆ ಭಿಕ್ಷುಕ ದಂಪತಿಗಳು – ಬೆಂಚುಗಳಲ್ಲಿ ಸ್ಥಳವಿದ್ದರೂ – ತಮ್ಮಲ್ಲಿ ಟಿಕೆಟ್ ಇಲ್ಲ ದುದರಿಂದ ಪ್ರಯಾಣ ಮಾಡುವುದಕ್ಕೆ ಹಕ್ಕಿಲ್ಲದವರಾಗಿದ್ದು ತಾವು ಬೆಂಚಿನ ಮೇಲೆ ಕುಳಿತುಕೊಳ್ಳಬಾರದು – ಎಂಬ ಭಾವನೆಯಿಂದ ಒಂದು ಮೂಲೆಯಲ್ಲಿ ಮೊಳಕಾಲು ಗಳನ್ನು ಕಟ್ಟಿಕೊಂಡು ಕುಳಿತರು. ಆ ಭಿಕ್ಷುಕನು ತನ್ನ ಕೈಯಲ್ಲಿದ್ದ ಕೋಲನ್ನು ಕೆಳಗೆ ಒಂದು ಪಕ್ಕದಲ್ಲಿಟ್ಟು ಬಟ್ಟೆಯಲ್ಲಿ ಕಟ್ಟಿಕೊಂಡಿದ್ದ ಕಡಲೆಕಾಯಿಯನ್ನು ತೆಗೆದು ಹೆಂಡತಿಗೆ ಅರ್ಧ ಭಾಗ ಮಾಡಿಕೊಟ್ಟ. ಇಬ್ಬರೂ ಅದನ್ನು ಬಿಡಿಸಿ ತಿನ್ನಲು ಪ್ರಾರಂಭಿಸಿದರು.

ರೈಲುಗಾಡಿ ಆ ಸಣ್ಣ ಸ್ಟೇಷನ್ನಿನಿಂದ ಹೊರಟು ದೀರ್ಘವಾಗಿ ವಿಜಿಲ್ ಹೊಡೆದು ವೇಗವಾಗಿ ಚಲಿಸಲಾರಂಭಿಸಿತು.

ಒಂದು ದೊಡ್ಡ ಜಂಕ್ಷನ್‌ನಲ್ಲಿ ಈ ಪ್ಯಾಸೆಂಜರ್ ಗಾಡಿ ಬಹಳ ಹೊತ್ತು ನಿಂತಿತ್ತು...

ಪ್ರಜ್ಞೆಯಿಲ್ಲದವಳಾಗಿ ಮೈಮರೆತಿದ್ದ ತಾಯಿಯ ಮಡಿಲಲ್ಲಿ ಮಲಗಿದ್ದ ಮಗು ಎಚ್ಚರಗೊಂಡು ಅರಳಿದ ಕಣ್ಣುಗಳಿಂದ ಹೊರಗೆ ನೋಡಿತು. ಬಿಸ್ಕತ್ತು ತುಂಬಿದ ಟ್ರೇಯೊಂದಿಗೆ ಕಿಟಕಿಯ ಬಳಿಯೇ ನಿಂತಿದ್ದವನನ್ನು ನೋಡುತ್ತಲೂ ತಾಯಿಯ ಕೆನ್ನೆಯನ್ನು ಪರಚಿ ಪರಚಿ "ಅಪ್ಪಚ್ಚಿ ಅಮ್ಮಾ... ಅಪ್ಪಚ್ಚಿ" ಎಂದು ಹೊರಗೆ ಕೈ ತೋರಿಸಿ ಅತ್ತಿತು.

ಮಗುವಿಗೆ ಏನಾದರೂ ತೆಗೆದುಕೊಡೋಣವೆಂದುಕೊಂಡು ಅಮ್ಮಾಸಿ, ತನ್ನ ಜನ್ಮ ವನ್ನೂ ಅವರ ಕುಲವನ್ನೂ ನೆನೆದು ತಡೆದುಕೊಂಡು ಮಗುವನ್ನು ನೋಡಿ ಮಂದಹಾಸ ಬೀರಿದ. ಮಗು ಅವನ ಮುಖವನ್ನು ನೋಡಿ, "ಉಂ... ಅಪ ಚಿ" ಎಂದು ಉಚ್ಚ ಸ್ಥಾಯಿಯಲ್ಲಿ ಅಳತೊಡಗಿತು.

ಆಗ ಎಚ್ಚರಗೊಂಡ ತಾಯಿ ಕಣ್ತೆರೆದಳು.

"ಅಮ್ಮಾ... ಮಗು ಅಳುತ್ತಿದೆ, ಏನಾದರೂ ತೆಗೆದುಕೊಡಲೆ?" ಎಂದು ವಿನಯವಾಗಿ ಪ್ರೀತಿಯಿಂದ ಕೇಳಿದ ಅಮ್ಮಾಸಿ. ಅವಳು ಕಣ್ಣೀರಿನ ಕಣ್ಣುಗಳಿಂದ ದೃಷ್ಟಿಯಲ್ಲೇ ತನ್ನ ಸಮ್ಮತಿಯನ್ನು ತಿಳಿಯಪಡಿಸಿದಳು.

ಅಮ್ಮಾಸಿ ಗಾಡಿಯಿಂದ ಕೆಳಗಿಳಿದು ಪ್ಲಾಟ್‌ಫಾರಂನಲ್ಲಿದ್ದ ಸ್ಟಾಲ್ ಕಡೆಗೆ ನಡೆದು ಒಂದು ಬನ್ ಮತ್ತು ಲೋಟ ಹಾಲು ತಂದ. ತರುವಾಗ ಥಟ್ಟನೆ ಏನೋ ನೆನಪು ಮಾಡಿಕೊಂಡವನಂತೆ ಹಿಂತಿರುಗಿ ಇನ್ನೊಂದು ಬನ್ ಮತ್ತು ಲೋಟ ಹಾಲು ಕೇಳಿದ. ಪೇಪರಿನಲ್ಲಿ ಸುತ್ತಿದ ಎರಡು ಬನ್‌ಗಳನ್ನು ಕೋಟು ಜೇಬಿನಲ್ಲಿಟ್ಟುಕೊಂಡು ನಡುಗುವ ಕೈಗಳಲ್ಲಿ ಎರಡು ಲೋಟಗಳನ್ನು ಹಿಡಿದು ಅವನು ಗಾಡಿಯ ಕಡೆಗೆ ಬಂದ.

ನೋಡುವವರಿಗೆ 'ಈ ಕೈಲಾಗದವನು ಯಾಕಿಷ್ಟು ಶ್ರಮಪಡುತ್ತಾನೆ?' ಎಂದು ತೋರಿರಬಹುದು. ಆಹ್! ಪರರಿಗಾಗಿ ಪಡುವ ಶ್ರಮದ ತೃಪ್ತಿ!

ಗಾಡಿಯೊಳಕ್ಕೆ ಬಂದು ಬೆಂಚಿನ ಮೇಲೆ ಹಾಲಿನ ಲೋಟಗಳನ್ನಿಟ್ಟು ಮಗುವಿನೆಡೆ ಒಂದು ಬನ್ ನೀಡಿ ಮಂದಹಾಸ ಬೀರಿದ. ಮಗು ಕುತೂಹಲದಿಂದ ಬಾಗಿ ಎರಡು ಕೈಗಳಲ್ಲೂ ಅದನ್ನು ತೆಗೆದುಕೊಂಡು ತಿನ್ನತೊಡಗಿತು.

ಆಗ ಕಣ್ತೆರೆದ ತಾಯಿ ಅವನನ್ನು ನೋಡಿದಳು. ಅವನು ಹಿಂದೆಗೆಯುತ್ತಲೇ, ಅವಳಿಗೂ ಒಂದು ಬನ್ ನೀಡಿದ. ಅವಳು 'ಬೇಡ' ಎಂದು ತಲೆಯಾಡಿಸಿದಳು.

"ಈ ಹಾಲನ್ನಾದರೂ ಕುಡಿಯಿರಿ... ತುಂಬಾ ಆಯಾಸವಾಗಿದ್ದೀರಿ..." ಎಂದು ಹಾಲಿನ ಲೋಟವನ್ನು ಎತ್ತಿಕೊಂಡು ಅದನ್ನು ಮುಚ್ಚಿದ ಕಪ್ಪಿನಲ್ಲಿ ಹಾಲನ್ನು ನಿಧಾನವಾಗಿ ಆರಿಸಿ ಅವಳಿಗೆ ಕೊಟ್ಟ.

ಅವಳು ನಡುಗುವ ಕೈಗಳಿಂದ ಅದನ್ನು ತೆಗೆದುಕೊಂಡು ಬಹಳ ದಾಹಗೊಂಡವಳಂತೆ ಒಂದೇ ಬಾರಿಗೆ ಕುಡಿದಳು. ಅವಳು ಕುಡಿಯುತ್ತಿದ್ದಂತೆ ಬಟ್ಟಲಲ್ಲಿದ್ದ ಹಾಲನ್ನು ಸ್ವಲ್ಪ ಸ್ವಲ್ಪವಾಗಿ ಲೋಟದಲ್ಲಿ ಹಾಕುತ್ತಿದ್ದ ಅಮ್ಮಾಸಿ. ಅವಳು ಅಡಗದ ಹಸಿವು, ದಣಿಯದ ದಾಹ, ತೀರದ ಆಯಾಸಗೊಂಡಿದ್ದಾಳೆಂದು ಅರಿತುಕೊಂಡ ಅಮ್ಮಾಸಿ ಮಗುವಿಗೆಂದು ತಂದಿದ್ದ ಹಾಲನ್ನೂ ಅವಳಿಗೇ ಕೊಟ್ಟ. ಅವಳು ಅದರಲ್ಲಿ ಅರ್ಧ ಕುಡಿದು "ಸಾಕು" ಎಂದು ಹೇಳಿ ಚೇತರಿಸಿಕೊಂಡು ಒರಗಿ ಕಣ್ಮುಚ್ಚಿದಳು.

ಮಗು ತನ್ನ ತಾಯಿಗೆ ತೊಂದರೆ ಕೊಡದಿರಲೆಂದು ಅದನ್ನು ಎತ್ತಿ ತನ್ನ ಬಳಿಯೇ ಕೂಡಿಸಿಕೊಂಡು ಬನ್ನನ್ನು ಚೂರು ಮಾಡಿ ಹಾಲಿನಲ್ಲಿ ನೆನೆಸಿ ತಿನ್ನಿಸಿದ ಅಮ್ಮಾಸಿ. ಮಗು ತುಂಬಾ ಬಾಂಧವ್ಯದಿಂದ ಅವನ ಮಡಿಲಲ್ಲಿ ಹತ್ತಿ ಕುಳಿತು ತಿಂದಳು. ನಂತರ ಮಗುವನ್ನೆತ್ತಿಕೊಂಡು ಹಾಲಿನ ಲೋಟ ಬಟ್ಟಲುಗಳನ್ನು ವಾಪಸುಕೊಟ್ಟು ಸ್ಟಾಲ್‌ನಲ್ಲಿಯೇ ಒಂದು ಕಪ್ ಹಾಲು ಕೊಂಡು ಮಗುವಿಗೆ ಕುಡಿಸಿದ. ತಾನೂ ಒಂದು ಕಪ್ ಟೀ ಕುಡಿದ. ಮಗು ಅವನೊಂದಿಗೆ ಬಹಳ ದಿನ ಕಳೆದವಳಂತೆ ನಕ್ಕುನಲಿದಾಡಿತು.

ಮಗುವಿಗೆ ಒಂದು ಬೊಂಬೆಯನ್ನೂ ತೆಗೆದು ಕೊಟ್ಟ. ಅದುಮಿದರೆ ಶಬ್ದ ಮಾಡುತ್ತಿದ್ದ ಬಾತು ಬೊಂಬೆಯನ್ನು ಹಿಡಿದುಕೊಂಡು ಮಗು ಕೇಕೆಹಾಕಿತು. ಅಮ್ಮಾಸಿಯೂ ಜಗತ್ತನ್ನು ಮರೆತು ಮಗುವಿನ ಆಟದಲ್ಲಿ ಮಗ್ನನಾಗಿರುವಾಗ ಗಾಡಿ ಹೊರಡುವ ಸಂಕೇತವಾಗಿ ಗಂಟೆ ಹೊಡೆಯಿತು. ಮಗುವಿನೊಂದಿಗೆ ವೇಗವಾಗಿ ಓಡಿ ಗಾಡಿಯೇರಿದ. ಪ್ರಾಯ ಹಿಂತಿರುಗಿ ಬಂದಂತೆ ಉತ್ಸಾಹ ಮೂಡಿತ್ತೀಗ.

ಬಹಳ ಕಾಲ ಆ ಜಂಕ್ಷನ್‌ನಲ್ಲಿ ನಿಂತಿದ್ದ ಪ್ಯಾಸೆಂಜರ್ ಗಾಡಿ ನಿಧಾನವಾಗಿ ಚಲಿಸತೊಡಗಿತು.

ಹಸಿವು ನೀಗಿದ ಲವಲವಿಕೆಯಿಂದ, ಆಟದ ಬೊಂಬೆ ಸಿಕ್ಕಿದ ಉತ್ಸಾಹದಿಂದ, ಆ ಮುಖ ಪರಿಚಯವೇ ಇಲ್ಲದ ಹೊಸ ವ್ಯಕ್ತಿಯ ಮಡಿಲಿನಲ್ಲಿ ಮುಖವನ್ನು ಹುದುಗಿಸಿಕೊಂಡು ಅವನ ಗಡ್ಡವನ್ನು ಹಿಡಿದೆಳೆದು ನಗುವ ಮಗುವನ್ನು ಕಂಡು ಆ ತಾಯಿ ನಸುನಕ್ಕಳು.

ಅದನ್ನು ಗಮನಿಸಿದ ಅಮ್ಮಾಸಿ ಮಾತನಾಡತೊಡಗಿದ: "ಪಟ್ಟಣದಲ್ಲಿ ಎಲ್ಲಿಗೆ ಹೋಗಬೇಕಮ್ಮಾ?"

ಅವಳು ಅದಕ್ಕೆ ಉತ್ತರ ಹೇಳುವ ಮೊದಲು ನಿಸ್ಸಹಾಯಕವಾಗಿ ನಿಟ್ಟುಸಿರು ಬಿಟ್ಟಳು. ನಂತರ ಹಣೆಯಲ್ಲಿ ಮೂಡಿದ್ದ ಬೆವರನ್ನು ಒರೆಸಿಕೊಂಡು ಬಲಹೀನವಾದ ಧ್ವನಿಯಲ್ಲಿ ಹೇಳಿದಳು :

"ಪಟ್ಟಣದಲ್ಲಿ ಪರಿಚಯಸ್ಥರಿದ್ದಾರೆ... ನನ್ನ ಸ್ನೇಹಿತ... ಯಾವಾಗಲೋ ಒಮ್ಮೆ ಊರಿಗೆ ಬಂದಾಗ 'ನುಂಗಂಬಾಕ್ಕಂನಲ್ಲಿದ್ದೇವೆ" ಎಂದು ಹೇಳಿದ್ದರು. ವಿಳಾಸ ಸರಿಯಾಗಿ ತಿಳಿಯದು... ಅಷ್ಟು ದೊಡ್ಡ ನಗರಕ್ಕೆ ಹೋಗಿ ಎಲ್ಲಿ ಹುಡುಕುವುದೆಂದುಕೊಂಡಿದ್ದೆ... ಆದರೆ, ಈಗ ಹೋಗಿ ಸೇರುವುದೇ ಇಲ್ಲವೋ ಎನಿಸುತ್ತಿದೆ?" ಎಂದು ಹೇಳುವಾಗ ಗದ್ಗದಿಸಿ ಕಣ್ಣೀರು ಬಂತು.

"ಯಾಕಮ್ಮಾ ಹಾಗೆ ಹೇಳುತ್ತೀರಿ... ನೀವು ಎಲ್ಲಿಗೆ ಹೋಗಬೇಕೋ ಅಲ್ಲಿಗೆ ನಾನು ಕರೆದುಕೊಂಡು ಹೋಗಿ ಸೇರಿಸುತ್ತೇನೆ" ಎಂದು ಧೈರ್ಯ ಹೇಳಿದ ಅಮ್ಮಾಸಿ. ಅವನ ಒಳ್ಳೆಯ ಗುಣಗಳನ್ನು ಮನಸ್ಸಿನಲ್ಲಿ ಹೊಗಳಿ ಆ ತಾಯಿಯ ಮನಸ್ಸು ತಾನು ನಿರಾಧಾರವಾಗಿ ಅಗಲಿ ಹೋಗುವ ಮಗುವನ್ನು ಕಂಡು ಸಂಕಟಪಟ್ಟಿತು. ಅವಳು ಇದ್ದಕ್ಕಿದ್ದಂತೆ ಅವನೊಂದಿಗೆ ಹೇಳಿದಳು: "ಅಪ್ಪಾ, ನೀವು ಯಾರೋ, ದೈವವೇ ನಿಮ್ಮನ್ನು ಕಳುಹಿಸಿದೆ... ಈ ನಿಮಿಷ ನನಗೆ, ಅದರ, ಬಂಧು, ಸಹೋದರ ಎಲ್ಲಾ ನೀವೆ..."

ಆ ಮಾತುಗಳನ್ನು ಕೇಳಿ ಅಮ್ಮಾಸಿ ರೋಮಾಂಚನಗೊಂಡ.

ಆಗ ತಾಯಿಯ ನೆನಪೇ ಇಲ್ಲದ ಮಗು ಆ ಬೊಂಬೆಯನ್ನು ಅವನ ಕಿವಿಯ ಬಳಿಯಿಟ್ಟು ಶಬ್ದ ಬರುವಂತೆ ಮಾಡಿತು. ಅವನು ತಲೆಯಾಡಿಸಿಕೊಂಡು ಆ ಶಬ್ದವನ್ನು ತಾಳಲಾರದವನಂತೆ ಕಿವಿಗಳನ್ನು ಮುಚ್ಚಿಕೊಳ್ಳಲಾಗಿ ಮಗು ಕೇಕೆಹಾಕಿತು. ಮಗುವಿ

ನೊಂದಿಗೆ ಆಟವಾಡಿಕೊಂಡ ಅಮ್ಮಾಸಿಯನ್ನು ಆ ತಾಯಿಯ ದೃಷ್ಟಿ ಆಳವಾಗಿ ಅಳೆಯಿತು.

ಅಮ್ಮಾಸಿ, ಅವಳು ತನ್ನೊಡನೆ ಏನೋ ಹೇಳಿ ಸಮಾಧಾನ ಹೊಂದಲು ಏನೋ ಕೇಳಿ ಸಹಾಯ ಪಡೆಯಲು ಕಳಕಳಿಯಿಂದಿದ್ದಾಳೆ ಎಂದು ತಿಳಿದು ಅದನ್ನು ಕೊಡಲು, ಆ ಸಹಾಯವನ್ನು ಮಾಡಲು ಸಿದ್ಧವಾದವನಂತೆ ಅವಳ ಮುಖವನ್ನೇ ಕನಿಕರದಿಂದ ನೋಡುತ್ತಿದ್ದ.

ಆ ಮಗುವಾದರೋ ಅವನ ಬಳಿ ಇದುವರೆಗೆ ಯಾರೂ ತೋರದ ಪಾಶದಿಂದ ಅವನ ಮಡಿಲಲ್ಲಿ ಏರಿ ಷರಟನ್ನು ಹಿಡಿದೆಳೆದು ಅವನ ಹೃದಯವನ್ನೇ ತನ್ನೆಡೆಗೆ ಆಕರ್ಷಿಸಿಕೊಳ್ಳುತ್ತಿತ್ತು.

ಮಗುವಿನ ತಾಯಿ ಮತ್ತೆ ಅವನೊಂದಿಗೆ ಮಾತನಾಡಿದರು: "ಅಪ್ಪಾ, ನನಗೆ ನನಗೆ ಯಾರೂ... ಒಬ್ಬರೂ ಗತಿಯಿಲ್ಲ" ಎಂದು ಬಿಕ್ಕಿ ಬಿಕ್ಕಿ ಅತ್ತಳು. ಸ್ವಲ್ಪ ಹೊತ್ತು ಧಾರೆಯಾಗಿ ಕಣ್ಣೀರು ಸುರಿಸಿ ಅತ್ತನಂತರ ಮುಖವನ್ನು ಒರೆಸಿಕೊಂಡು, ಅಳುವಿನಿಂದ ಗದ್ಗದಿತವಾದ ಕಂಠದಿಂದ ಹೇಳಿದಳು:

"ಹೋದ ವರ್ಷ ಇವಳು – ಹುಟ್ಟಿದ ಒಂದು ವರ್ಷದೊಳಗೆ ಹೆತ್ತವರನ್ನು ನುಂಗಿಕೊಂಡಳು." ಎಂದು ದೈನ್ಯದಿಂದ ನುಡಿದಾಗ ಅಮ್ಮಾಸಿ ಮಗುವನ್ನು ಎದೆಗೆ ಅಪ್ಪಿಕೊಂಡ: "ಯಾಕಮ್ಮಾ ಮಗುವನ್ನು ಬೈಯುತ್ತೀರಿ?" ಎಂದು ಅವನು ಕೇಳಿದಾಗ ಅವಳೂ ಮುಖವನ್ನು ಮುಚ್ಚಿಕೊಂಡು ಗೊಣಗಿದಳು: "ಪಾಪ, ಆ ಮಗು ಏನು ಮಾಡೀತು? ಅವರಿಗೂ ಸಾಯುವ ರೋಗ... ವಿವಾಹ ಕಾಲದಲ್ಲೇ ಐವತ್ತು ವರ್ಷಗಳ ಮೇಲಾಗಿತ್ತು. ನಮ್ಮ ತಂದೆ ಬಡವರು. ವರದಕ್ಷಿಣೆಗೆ ದಾರಿಯಿಲ್ಲದೆ ಮೂರನೆಯ ಹೆಂಡತಿಯಾಗಿ ನನ್ನನ್ನು ಅವರಿಗೆ ಮದುವೆ ಮಾಡಿಕೊಟ್ಟರು... ಮುಂದಿನ ವರ್ಷ ನಮ್ಮ ತಂದೆಯವರೂ ಮೃತರಾದರು. ಇವಳ ತಂದೆ ನನ್ನನ್ನು ಹೆಚ್ಚಾಗಿಯೇ ನೋಡಿಕೊಂಡಿದ್ದರು... ದೇವರಿಗೆ ಅದು ಇಷ್ಟವಾಗಲಿಲ್ಲ... ಕುರುಡು ದೇವರು!" ಎಂದು ಅವಳು ಹಲ್ಲು ಕಚ್ಚಿ ನಿಂದಿಸಿದಳು.

ಅವಳು ಮೂಗನ್ನು ಒರೆಸಿಕೊಂಡು ಮಾತನ್ನು ಮುಂದುವರಿಸಿದಳು: "ಇವಳ ತಂದೆಗೆ ಹೋಟೆಲಿನಲ್ಲಿ ಕೆಲಸ. ಅವರಿಗೆ ಕ್ಷಯರೋಗ ಬಂತು. ಆ ಮೇಲೆ ಕೆಲಸಕ್ಕೆ ಯಾರೂ ಇಟ್ಟುಕೊಳ್ಳಲಿಲ್ಲ – ನಾಲ್ಕು ಮಕ್ಕಳನ್ನು ಹೆತ್ತೆ. ಒಂದೊಂದಾಗಿ ಸಾಕಿ ಸಲಹಿ ಕಳೆದುಕೊಂಡೆ. ಕಡೆಯಲ್ಲಿ ಇವಳು! ಇವಳೂ ಇಲ್ಲದಿದ್ದರೆ ಎಲ್ಲೋ ನದಿಯಲ್ಲೋ ಕೊಳದಲ್ಲೋ ಬಿದ್ದು ಪ್ರಾಣ ಬಿಡುತ್ತಿದ್ದೆ... ತಡೆಯಲಾಗದಪ್ಪ ಈ ರೋಗದ ಹಿಂಸೆ, ತಡೆಯಲಾಗದು! ಇನ್ನು ಜೀವಿಸಿರುವುದೆಲ್ಲಿಂದ ಬಂತು! ಸ್ವಲ್ಪ ಸ್ವಲ್ಪವಾಗಿ ಒಣಗಿ ಸಾಯುವುದರ ಬದಲಾಗಿ ಒಂದೇ ಬಾರಿಗೆ ಹೋಗಿಬಿಡೋಣವೆಂದರೆ ಈ ಮಗು ನನ್ನ ಕೊರಳಿಗೆ ಬಿದ್ದಿದೆ! ಅವರಿಂದ ನನಗೆ ದೊರೆತ ಸಂಪತ್ತು ನೋಡಿದಿರಾ? ಈ ಪ್ರಾಣಾವಸ್ಥೆ

ಮತ್ತು ಕೊರಳಲ್ಲಿ ಇವಳು?" ಕೋಪದಿಂದ, ವಿರಕ್ತಿಯಿಂದ ಅವಳ ಒಡಲಲ್ಲಿ ನಡುಕ ಹುಟ್ಟಿತು. ಮಾತನಾಡಲಾರದೆ ಉಸಿರೆಳೆದು ದೃಷ್ಟಿಸಿ ನೋಡುತ್ತಾ ಮೌನವಹಿಸಿದಳು.

ಆ ಪ್ಯಾಸೆಂಜರ್ ಗಾಡಿ ಒಂದೇ ರೀತಿ ಶಬ್ದದಿಂದ ಚಲಿಸಿದರೂ ಆ ಗಾಡಿಯಲ್ಲಿ ಶಾಂತಿ ನೆಲೆಸಿದಂತೆ ತೋರಿತು. ಅವಳು ಮೆಲ್ಲನೆ ಕಣ್ಣುಗಳನ್ನು ಮುಚ್ಚಿಕೊಂಡಳು. ಗಾಡಿಯ ಚಲಿಸುವಿಕೆಗೆ ತಕ್ಕಂತೆ ಕಣ್ಮುಚ್ಚಿ ಮಲಗಿದ್ದ ಅವಳ ತಲೆ ಎಡ ಬಲಕ್ಕೆ ಆಡುತ್ತಿದ್ದುದನ್ನು ನೋಡಿದ ಅಮ್ಮಾಸಿ, 'ಅವಳು ಸಾಯುತ್ತಿದ್ದಾಳೋ' ಎಂದು ಒಂದು ಕ್ಷಣ ಭ್ರಮೆಗೊಂಡ.

ಒಳ್ಳೆಯ ಕೆಲಸ. ಅವಳು ತನ್ನ ಒಡಲಿನಲ್ಲೋ ಮನಸ್ಸಿನಲ್ಲೋ ಎದ್ದ ವೇದನೆಯನ್ನು ತಾಳಲಾರದೆ ತುಟಿಗಳನ್ನು ಕಚ್ಚಿ ಮುಖವನ್ನು ಕಿವಿಚಿಕೊಂಡು ಕಣ್ತೆರೆದಳು, ವಿಷಾದ ನಗೆಯಿಂದ.

"ಹೆಣ್ಣಿನ ಜನ್ಮವೇ ಬೇಡ. ಹಾಗೆ ಹುಟ್ಟಿದರೂ ದರಿದ್ರಳಾಗಿ ಹುಟ್ಟಬಾರದು" – ಎಂದು ಹೇಳಿ ಯಾವ ವಿಚಾರವನ್ನೋ ಯೋಚಿಸಿ ತಾನು ಹೇಳಿದುದನ್ನು ನಿರಾಕರಿಸುವಂತೆ ತಲೆಯಾಡಿಸಿದಳು : "ದರಿದ್ರಳಾಗಿ ಹುಟ್ಟಿದರೆ ತಾನೆ ಏನು? ನೀವು ಯಾವ ಜಾತಿಯೋ ಮತವೋ? ನಿಮ್ಮಂತಹವರಲ್ಲಿ ದರಿದ್ರರಾಗಿ ಹುಟ್ಟಿದ ಹೆಣ್ಣು ಮಕ್ಕಳೂ ಅವರಿಗೆ ತಕ್ಕ ರೀತಿಯಲ್ಲಿ ಸಂತೋಷವಾಗಿ ಬದುಕಿ ಬಾಳುವುದಿಲ್ಲವೆ? ಹೆಣ್ಣಾಗಿ ಹುಟ್ಟಿದರೂ ದರಿದ್ರಳಾಗಿ ಹುಟ್ಟಿದರೂ ನಮ್ಮ ಜಾತಿಯಲ್ಲಿ ಹುಟ್ಟಬಾರದಪ್ಪ: ಅದಕ್ಕಿಂತ ಕೊಳಚೆ ಪ್ರದೇಶದಲ್ಲಿ ಹುಟ್ಟಬಹುದು..." ಎಂದು ಅವಳು ಹೇಳುತ್ತಿರಲು ಅಮ್ಮಾಸಿಯ ನೆನಪಿನಲ್ಲಿ ನಿನ್ನೆ ಕಾಲುವೆ ಕಟ್ಟೆಯ ಮೇಲೆ ಎತ್ತಿನ ಗಾಡಿಯಲ್ಲಿ ಕುಳಿತು ಹೊರಟಿದ್ದ ಕೊಳಚೆ ಪ್ರದೇಶದವರ ಉತ್ಸಾಹದ ನಗು ಪ್ರತಿಧ್ವನಿಸಿತು.

"ಏನು ಪಾಪ ಮಾಡಿದೆನೋ ಹೆಣ್ಣಾಗಿ ಹುಟ್ಟಿ ಒಂದು ಹೆಣ್ಣನ್ನೂ ಹೆತ್ತಿದ್ದೇನೆ! ಇದು ಇನ್ನೇನು ಕಷ್ಟಪಡಬೇಕೋ?" ಎಂದು ಕಣ್ಣೀರು ಸುರಿಸಿ ನಿಟ್ಟುಸಿರು ಬಿಟ್ಟಾಗ, ಅಮ್ಮಾಸಿ ತನ್ನ ಮಡಿಲಲ್ಲಿದ್ದ ಮಗುವಿನ ಮೃದುವಾದ ತಲೆಗೂದಲನ್ನು ಸವರುತ್ತಾ ಕೇಳಿದ :

"ಉಂ... ನೀವು ಬದುಕಿದ್ದ ಕಾಲದಂತೆಯೇ ಈ ಹೆಣ್ಣಿನ ಜೀವನ ಕಾಲವೂ ಇರುತ್ತದೇನು?"

"ಕಾಲದ ವಿಚಾರ ಹೇಳಿದರೆ ಸಾಕೇನಪ್ಪ, ಮನುಷ್ಯರ ಅನ್ಯಾಯಕ್ಕೆ! ನಾನು ಗ್ರಾಮದಲ್ಲಿ ಹುಟ್ಟಿದಳು. ಪಟ್ಟಣಕ್ಕೆ ಬಂದ ಮೇಲೆ ಜಾತಿ ಮತ್ತು ಆಚಾರವೂ ಅರ್ಥರಹಿತವಾದುದೆಂದು ಮನದಟ್ಟಾಯಿತು. ಯಾರು ಧೈರ್ಯವಾಗಿ ಬಿಡುತ್ತಾರೆ ಹೇಳಿ? ನೀವು ಯಾರು ಯಾರೆಂದು ತಿಳಿಯದೆ – 'ಅಯ್ಯೋ ಪಾಪ, ಒಬ್ಬಳು ಮೈಮರೆತು ಬಿದ್ದಿರುವಳಲ್ಲ' ಎಂದು ಹಾಲು ತಂದಿರಿ... ನಾನೂ ಕುಡಿದೆ. ಇದನ್ನೇ ನಾಲ್ಕು ಮಂದಿಯ ಮುಂದೆ ಮಾಡಲಾದೀತೆ? ಮಾಡುತ್ತೇನೆಯೆ? 'ದೂರ ಹೋಗು, ದೂರ ಹೋಗು' ಎಂದು

ಮಡಿ ಮಾಡುತ್ತಿದ್ದೆ. ಏನು ಕಾರಣ? ಏನು ಕಾರಣವೆಂದು ನನಗೇ ತಿಳಿಯದ 'ನಾಲ್ಕು ಮಂದಿ ಏನೆಂದುಕೊಳ್ಳುವರೋ?' ಎಂಬ ಕಾರಣ. ಈ 'ನಾಲ್ಕು ಮಂದಿ'ಯ ಭಯವೇ ಎಲ್ಲರಿಗೂ ಇದೆ. ಬೇರೆ ಯಾವ 'ಕಾರಣ – ಮಣ್ಣು' ಇದೆ! ಈ ತರಹ ನಿರಾಧಾರವಾದ ನೆಲೆಯಲ್ಲಿದ್ದರೆ ಆ ನಾಲ್ಕು ಮಂದಿಯಲ್ಲಿ ಮೂವರು ಹೀಗೆಯೇ ವರ್ತಿಸುವುದು. ಇಲ್ಲದಿದ್ದರೆ – ಜಾತಿಯನ್ನೂ ಆಚಾರವನ್ನೂ ಯಾವುದಾದರೊಂದು ಕಾರಣದಿಂದ ಎಲ್ಲರೂ ಮನಃಪೂರ್ವಕ... ನಿಜವಾಗಿ ಅಂಗೀಕಾರ ನೀಡಿದ್ದರೆ, ಅದು ಯಾವಾಗಲೋ ಬದಲಾಯಿಸಿ ಹೋಗಿರುತ್ತಿತ್ತು. ಒಬ್ಬೊಬ್ಬರೂ ಸುಳ್ಳಾಗಿ ಒಂದು ಸಹಜತನಕ್ಕೆ ಅಸಹಜವಾಗಿ ಅದನ್ನು ಅನುಸರಿಸುವುದರಿಂದ ಅದು ಇನ್ನೂ ಬದುಕಿ ನನ್ನಂತಹ ದರಿದ್ರರ ಕೊರಳನ್ನು ಕತ್ತರಿಸುತ್ತಿದೆ."

ಸ್ವಲ್ಪ ಹೊತ್ತಿನ ಹಿಂದೆ ಕುಡಿದ ಹಾಲಿನಿಂದ ಉಂಟಾದ ಚೇತನದ ಜೊತೆಗೆ ಸಾಯಂಕಾಲದ ತಂಪು ಗಾಳಿಯೂ ಸೇರಿ ಕೆಲವು ನಿಮಿಷ ಕಾಲ ಮಾತನಾಡಲು ಅವಳಿಗೆ ಶಕ್ತಿ ಕೊಟ್ಟಿತು. ಆದರೆ ಮಾತನಾಡಿದ ಮೇಲೆ ಅವಳಿಗೆ ಉಸಿರುಗಟ್ಟಿತು. ಇಷ್ಟು ಹೊತ್ತು ಮಾತಾಡಿದ ನಂತರ ಅವಳು ಅವನಿಗೆ ಏನು ಹೇಳಬೇಕೆಂದು ಮಾತನಾಡಲಾರಂಭಿಸಿದಳೋ ಅದನ್ನು ಹೇಳಲಿಲ್ಲವಲ್ಲ ಎಂದು ಅವಳಿಗೆ ತೋರಿತು. ಬಹಳ ಅವಸರದಿಂದ ಸ್ವಲ್ಪ ನೆಟ್ಟಗೆ ಕುಳಿತಳು.

"ಇಷ್ಟು ಮಾತನಾಡುವೆಯಲ್ಲಾ ನೀನಾದರೂ ಆ ಜಾತಿಕಟ್ಟಳೆಯನ್ನು ಮೀರಿ ಏನಾದರೂ ಮಾಡಬಹುದಿತ್ತಲ್ಲ ಎಂದು ನೀವು ಕೇಳಬಹುದು. ಹೌದು, ಇದುವರೆಗೆ ನಾನು ಮಾಡಲಿಲ್ಲ – ಮಾಡುವಂತೆ ನನ್ನನ್ನು ಬೆಳೆಸಲಿಲ್ಲ... ಆದರೆ, ನಾನು ಮಾಡುತ್ತೇನೆ... ಹೌದು, ನನಗೆ ದೊರೆತ ಶಿಕ್ಷೆ ನನ್ನ ಮಗಳಿಗಾದರೂ ತಟ್ಟಬಾರದಲ್ಲ. ನಾನು ಮಾಡುತ್ತೇನೆ" – ಎಂದು ದೃಢ ನಿರ್ಧಾರದಿಂದ ಯಾರ ಮೇಲೋ ಸೇಡು ತೀರಿಸಿಕೊಳ್ಳುವಂತೆ ತುಟಿ ಕಚ್ಚಿ ತಲೆಯಾಡಿಸಿದಳು.

ಅಷ್ಟರಲ್ಲಿ ರೈಲು ಹಲವು ಚಿಕ್ಕ ಪುಟ್ಟ ಸ್ಟೇಷನ್‌ಗಳಲ್ಲಿ ನಿಂತು, ದಢ ದಢ ಮುಂದೋಡುತ್ತಿತ್ತು.

ಅವಳು ಥಟ್ಟನೆ ಎದೆಯನ್ನು ಒತ್ತಿ ಹಿಡಿದು ವಾಂತಿ ಮಾಡಿಕೊಂಡಳು. ಎರಡು ಗಂಟೆಗಳ ಹಿಂದೆ ಕುಡಿದ ಹಾಲೆಲ್ಲಾ ಜೀರ್ಣವಾಗದೆ ಹೊರಬಂದಿತು. ಮಡಿಲಲ್ಲಿದ್ದ ಮಗುವನ್ನು ಬೆಂಚಿನ ಮೇಲೆ ಕುಳ್ಳಿರಿಸಿ ಅಮ್ಮಾಸಿ ಎದ್ದು ನಿಂತು ಅವಳ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡ. ಮೂಲೆಯಲ್ಲಿ ಕುಳಿತಿದ್ದ ವೃದ್ಧ ಭಿಕ್ಷುಕಿ ಎದ್ದು ಓಡಿ ಬಂದಳು. ಅವಳ ಕೈಯಲ್ಲಿದ್ದ ತಗಡು ತಟ್ಟೆಯನ್ನು ನೋಡಿ, ನೀರು ತರುವಂತೆ ಹೇಳಿದ ಅಮ್ಮಾಸಿ. ಆ ವೃದ್ಧೆ ಬಾತ್‌ರೂಂನಿಂದ ಅದರಲ್ಲಿ ನೀರು ತಂದು ಅವಳ ಮುಖವನ್ನು ಒರೆಸಿ ಎರಡು ಬಾರಿ ನೀರು ಕುಡಿಸಲು ಯತ್ನಿಸಿದಳು. ನೀರು ಬಾಯಿಯ ಕೊನೆಯಲ್ಲಿ ಈಚೆಗೆ ಬಂತು. ಅದರೊಂದಿಗೆ ರಕ್ತ ಬಾಯಿಂದಲೂ ಮೂಗಿನಿಂದಲೂ ಹರಿದು ಬಂತು.

"ಅಯ್ಯೋ ರಕ್ತ ಬರುತ್ತಿದೆ" ಎಂದು ವೃದ್ಧೆ ಅರಚಿಕೊಂಡಳು. ಅಮ್ಮಾಸಿ ತನ್ನ ಕೋಟಿನಿಂದ ರಕ್ತವನ್ನು ಒರೆಸಿ ಆ ಬೆಂಚಿನ ಮೇಲೆ ಅವಳನ್ನು ಒರಗಿಸಿ ಮಲಗಿಸಿದ. ಅವಳ ಕೈಕಾಲು ತಣ್ಣಗಾದುವು. ಬೆನ್ನಲ್ಲಿ ಮಾತ್ರ ಬೆಚ್ಚಗಿದ್ದುದು ಮಲಗಿಸಿದಾಗ ಅಮ್ಮಾಸಿಗೆ ತಿಳಿಯಿತು. ಅವಳನ್ನು ಮಲಗಿಸಿದ ಮೇಲೆ ಮಗುವನ್ನೆತ್ತಿ ಅವಳ ಸಮೀಪ ಕುಳ್ಳಿರಿಸಿದ. ಮಗು ತಾಯಿಯ ಎದೆಯ ಮೇಲೆ ತಲೆಯಿಟ್ಟು ಅವನನ್ನು ನೋಡಿ ನಕ್ಕಳು.

ಮಗುವಿನ ತಾಯಿ ಅಮ್ಮಾಸಿಯ ಕಡೆ ಕೈ ನೀಡಿದಳು. ಬೆಂಚಿನ ಸಮೀಪ ಮೊಳಕಾಲೂರಿ ಕುಳಿತಿದ್ದ ಅಮ್ಮಾಸಿಯ ಕೈಯನ್ನು ಬಲವಾಗಿ ಹಿಡಿದು ರಹಸ್ಯ ಎಂಬಂತೆ ಅವಳು ಹೇಳಿದಳು: "ನೀವು ಯಾರೇ ಆಗಿರಿ ನನಗೆ ಮಾತ್ರ ದೇವರು! ಮುಂದಿನ ಸ್ಟೇಷನ್ನಿನಲ್ಲಿ ಈ ದೇಹವನ್ನು ಇಳಿಸಿ ಮಾಡಬೇಕಾದುದನ್ನು ಮಾಡಿಬಿಡಿ... ಮಾಡುವಿರಾ?" ಎಂದು ಕೇಳಿದಾಗ ಎಷ್ಟೋ ಸಾವುಗಳನ್ನು ಕಂಡಿದ್ದ ಅಮ್ಮಾಸಿಯೂ ಸಹ ಕಣ್ಣೀರನ್ನು ತಡೆಯಲಾಗದೆ ಮುಖವನ್ನು ಮುಚ್ಚಿಕೊಂಡ.

"ಸಹಾಯ ಎಂದು ಕೇಳದೆಯೇ ಅದನ್ನು ಮಾಡುವವರು ನೀವು... ನಾನು ಬಹಳ ಹೊತ್ತಿನಿಂದ... ಹೇಳಬೇಕೆಂದಿದ್ದುದನ್ನು ಹೇಳಿಬಿಡುತ್ತೇನೆ... ಇವಳನ್ನು... ನನ್ನ ಮಗುವನ್ನು..." – ಅವಳ ಕಣ್ಣುಗಳಲ್ಲಿ ತುಂಬಿದ ಕಣ್ಣೀರು ಕಿವಿಯ ಪಕ್ಕದಲ್ಲ ಹರಿಯಿತು – "ನಿಮ್ಮ ಮಗುವಾಗಿ ಸಾಕಿ ಸಲಹಿ... ಅವಳು ಚೆನ್ನಾಗಿ ಬಾಳುತ್ತಾಳೆ ಎಂಬ ನಂಬಿಕೆ ನನಗೆ ಬಂದುಬಿಟ್ಟಿತು... ನನ್ನ ಮಗಳನ್ನು ನಿಮ್ಮ ಮಕ್ಕಳಲ್ಲಿ ಒಬ್ಬಳನ್ನಾಗಿ... ಸಾಕಿಕೊಳ್ಳುವಿರಾ, ಅಪ್ಪಾ...?" ಎಂದು ಅರಳಿದ ಮುಖದಿಂದ ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದು ಕೇಳಿದಳು ಆ ತಾಯಿ.

ಅವನು ಅವಳಿಗೆ ನಮಸ್ಕರಿಸಿದ.

ಅವಳ ಹಿಡಿತ ಅವನ ಕೈಗಳ ಮಣಿಕಟ್ಟಿನ ಮೇಲಿತ್ತು...

ಸಾಮರ್ಥ್ಯವಿಲ್ಲದ ನಟಿಯೋರ್ವಳು ಸಾಯುವ ದೃಶ್ಯದಲ್ಲಿ ಅಭಿನಯಿಸುವಂತೆ ಮುಖದಲ್ಲಿ ಮಂದಹಾಸ ಮರೆಯಾಗುವ ಮುನ್ನ ಅವಳು ಕಣ್ಣುಗಳನ್ನು ಮುಚ್ಚಿಕೊಂಡಳು. ಮೆಲ್ಲನೆ ಬಾಯಿ ತೆರೆದಾಗ, ತುಟಿಗಳ ಮೇಲೆ ಒಂದು ನೊಣ ಬಂದು ಕುಳಿತಾಗ; ಅವಳ ಜೀವನ ಸಂಪೂರ್ಣಗೊಂಡಿತು ಎಂಬುದನ್ನು ತಿಳಿದ ಅಮ್ಮಾಸಿ ಎದ್ದು ತಲೆಬಾಗಿ ನಿಂತ...

ಯಾವುದೋ ಒಂದು ಚಿಕ್ಕ ಸ್ಟೇಷನ್ನಿನಲ್ಲಿ ಗಾಡಿ ನಿಲ್ಲುತ್ತಲೂ ವೃದ್ಧ ಭಿಕ್ಷುಕಿ ಕೂಗಿಕೊಂಡಾಗ ಅಲ್ಲಿ ಗುಂಪು ಸೇರಿತು ಆ ಗುಂಪಿನಲ್ಲಿ ಜಾಗ ಮಾಡಿಕೊಂಡು ಓರ್ವ ರೈಲ್ವೆ ಅಧಿಕಾರಿ ಒಳಗೆ ಬಂದರು...

ಮೂರನೆಯ ದಿನ ಮಧ್ಯಾಹ್ನ ಆ ಚಿಕ್ಕ ರೈಲ್ವೆ ಸ್ಟೇಷನ್ನಿನಲ್ಲಿ ದಕ್ಷಿಣದಿಂದ ಬರುವ ಹಗಲಿನ ಪ್ಯಾಸೆಂಜರ್ ಗಾಡಿಗಾಗಿ ಮಗುವನ್ನೆತ್ತಿಕೊಂಡು ಅಮ್ಮಾಸಿ ಕಾದಿದ್ದ.

ತನ್ನ ತಾಯಿಗೆ ಮಾಡಲಾಗದ ಸಂಸ್ಕಾರ ಕರ್ತವ್ಯಗಳನ್ನೆಲ್ಲಾ ಹಿಂದಿನ ದಿನ ಒಂದು ತಾಯಿಗೆ ಮಾಡಿ ಬಾಳಿನಲ್ಲಿ ತನಗೆ ಸಿಕ್ಕಿದ್ದ ಬೊಕ್ಕಸದಂತೆ ಆ ಮಗುವನ್ನು ರಾತ್ರಿಯೆಲ್ಲಾ ಎದೆಗಪ್ಪಿಕೊಂಡು, ಆ ರೈಲ್ವೆ ಸ್ಟೇಷನ್ನಿನಲ್ಲಿ ಅಮ್ಮಾಸಿ ಕಾದಿದ್ದ.

ಈ ವೇಳೆಯಲ್ಲಿ ಆ ಪ್ಯಾಸೆಂಜರ್ ಗಾಡಿ ಬಂದು ಸೇರಿತು. ತಲೆ ಮತ್ತು ದೇಹ ಅಲುಗಾಡುತ್ತಿರಲು, ಮಗುವಿನೊಂದಿಗೆ ತನ್ನ ಕೈಚೀಲವನ್ನೂ ಒಟ್ಟಿಗೆ ಎತ್ತಿಕೊಂಡು ನಡೆಯಲಾಗದೆ ಮೊದಲು ಮಗುವನ್ನು ಕಿಟಕಿಯಿಂದ ಹೆಂಗಸೊಬ್ಬಳ ಕೈಗಿತ್ತು ಕೈಚೀಲ ವನ್ನು ಎತ್ತಿಕೊಂಡು ಒಳಗೆ ಪ್ರವೇಶಿಸಿದ.

ಗಾಡಿಯಲ್ಲಿದ್ದವರೆಲ್ಲಾ ಮಗುವನ್ನೂ ಅವನನ್ನೂ ಮತ್ತೆ ಮತ್ತೆ ನೋಡಿದರು. ಈ ವಯಸ್ಸಿನವನಿಗೆ ಎಷ್ಟು ಸುಂದರವಾದ ಮಗು – ಏನು ಸಂಬಂಧ ಎಂದುಕೊಂಡರೋ ಏನೋ?

"ಮಗು... ಮಗಳೋ, ಮೊಮ್ಮಗಳೋ?" ಎಂದು ವಿಚಾರಿಸಿದಳು, ಕಿಟಕಿಯ ಮೂಲಕ ಮಗುವನ್ನು ಕರೆದುಕೊಂಡಾಕೆ.

ಮಕ್ಕಳನ್ನೇ ಹಡೆಯದ ಅಮ್ಮಾಸಿ ಏನೂ ಯೋಚಿಸದೆ ಒಡನೆಯೇ "ಮೊಮ್ಮಗಳು" ಎಂದು ಉತ್ತರ ಕೊಟ್ಟ.

ಮಗುವಿನ ಕೆನ್ನೆಯಲ್ಲಿ ಮೆಲ್ಲನೆ ತಟ್ಟಿ ಮತ್ತೆ ಆ ಹೆಂಗಸು "ಹೆಸರೇನು?" ಎಂದು ಕೇಳಿದಳು.

ಆ ವೇಳೆಯಲ್ಲಿ ರೈಲು ವಿಜಿಲ್ ಹಾಕಿ ನಕ್ಕಿತು. 'ಮಗುವಿನ ತಾಯಿಯ ಬಳಿ ಹೆಸರು ಕೇಳುವುದನ್ನು ಮರೆತುಬಿಟ್ಟೆನಲ್ಲಾ' ಎಂದು ತುಟಿ ಕಚ್ಚಿಕೊಂಡ ಅಮ್ಮಾಸಿ. ರೈಲು ವಿಜಿಲ್ ನಿಂತ ಅದೇ ಕ್ಷಣದಲ್ಲಿ, ತಾನು ಕಂಡುಹಿಡಿದ ಹೆಸರನ್ನು ಪ್ರಕಟಿಸಿದ ಅಮ್ಮಾಸಿ : "ಪಾಪಾತ್ತಿ"

"ಪಾಪಾತ್ತಿ ಹೊಂದುವ ಹೆಸರು" – ಎಂದು ಶ್ಲಾಘಿಸಿದಳಾಕೆ.

ಹೊಂದುವುದೋ ಇಲ್ಲವೋ... ಇನ್ನು ಮೇಲೆ ಅದೊಂದು ಹೆಸರು.

# 11. ಬೀಗ ಹಾಕಿದ ಮನೆ

ಬೇವಿನಮರದಡಿ ನಿಂತಿದ್ದ ಹಸುವಿನ ಹಿಂದಿನ ಕಾಲುಗಳನ್ನು ಕಟ್ಟಿ ಕೆಚ್ಚಲು ತೊಳೆಯಲು ಪಕ್ಕದಲ್ಲಿದ್ದ ನೀರಿನ ಚೆಂಬನ್ನು ಎತ್ತಿಕೊಳ್ಳುವುದಕ್ಕೆ ತಿರುಗಿದಾಗ ಸುಬ್ಬುಕೋನಾರಿ ಮೊದಲು ಅವನನ್ನು ನೋಡಿದ. ನೋಡಿದಾಕ್ಷಣ ಕೋನಾರಿಗೆ ಅವನ ಗುರುತು ಹತ್ತಿತು. ಅದೇ ವೇಳೆಯಲ್ಲಿ ಅವನೆದೆಯಲ್ಲಿ ಭಯ ಮೂಡಿತು. ಗುರುತು ಹತ್ತಿದುದರಿಂದ ತನಗೆ ಆ ಭಯವುಂಟಾಯಿತೋ ಅಥವಾ ಅವನನ್ನು ಕಂಡಮಾತ್ರದಿಂದ ತನ್ನನ್ನು ಆವರಿಸಿದ ಆ ಭಯದಿಂದ ಅವನ ಗುರುತು ಹತ್ತಿತೋ ಎಂದು ನಿಶ್ಚಯಿಸಲಾಗದ ಪರಿಸ್ಥಿತಿಯಲ್ಲಿ ಅವನ ಗುರುತು ಹತ್ತಿದುದು, ಭಯವುಂಟಾದುದು ಸುಬ್ಬುಕೋನಾರಿಗೆ ಒಂದೇ ಸಮಯ ದಲ್ಲಿ ಪ್ರಾಪ್ತವಾಯಿತು.

ಅದು ಮಂಜಿನ ಕಾಲ. ಇನ್ನೂ ಮಂಜು ಹರಿಯದ ಮಾಘಮಾಸದ ಉದಯಕಾಲ. ಅದಕ್ಕಾಗಿ ದೇಹ ಥಟ್ಟನೆ ಹೀಗೆ ನಡುಗುವುದೆ? ಪಾದದ ಬೆರಳುಗಳನ್ನು ಮಾತ್ರ ಭೂಮಿಯ ಮೇಲೆ ಊರಿ ಮೊಳಕಾಲುಗಳನ್ನು ಮಡಿಸಿ ಕುಳಿತಿದ್ದ ಕೊನಾರಿಯ ಎಡಮೊಳಕಾಲು ವಿಪರೀತವಾಗಿ ನಡುಗಿತು. ಎದ್ದು ನಿಂತ. ದೇಹ ನಡುಗಿದರೂ ತಲೆ ಯಲ್ಲಿ ಕಟ್ಟಿದ್ದ ಮಫ್ಲರ್ ಒಳಗೆ ಬೆವರುತ್ತಿದೆಯಲ್ಲ!

ಮುಂಡಾಸನ್ನು ತೆಗೆದು ತಲೆಯನ್ನು ಕೆರೆದುಕೊಂಡ ಕೋನಾರಿ.

ಕಾಲೊನಿಯ ಕಾಂಪೌಂಡಿನ ಕಬ್ಬಿಣದ ಗೇಟನ್ನು ಶಬ್ದಮಾಡುತ್ತಾ ತೆಗೆದು ಒಳಗೆ ಬರುತ್ತಿದ್ದ ಹಿರಿದಾದ ಆಕೃತಿಯ ಅವನು ತನ್ನೆಡೆಗೇ ಬರುವಂತೆನಿಸಿತು ಕೋನಾರಿಗೆ.

ಅವನ ಕಾಲುಗಳ ಚಪ್ಪಲಿಗಳು ಬಲವಾದ ಶಬ್ದ ಮಾಡುತ್ತಿದ್ದುವು. ಕಪ್ಪು ಬಣ್ಣದ ಚೌಕಾಕಾರ ಪ್ರಿಂಟ್ ಲುಂಗಿಯನ್ನು ಉಟ್ಟಿದ್ದ. ಒಳಗೆ ಹಾಕಿದ್ದ ಬನಿಯನ್, ಸೊಂಟದಲ್ಲಿ ಹಾಕಿಕೊಂಡಿದ್ದ ನಾಲ್ಕು ಬೆರಳುಗಳ ಅಗಲವಿದ್ದ ಚರ್ಮದ ಬೆಲ್ಟು, ಅದರಲ್ಲಿ ತೂಗಾಡು ತ್ತಿದ್ದ ಬೀಗದಕ್ಕೆ ಗೊಂಚಲಿಗೆ ಸೇರಿಸಿದ್ದ ಸಣ್ಣ ಚಾಕು ಇದೆಲ್ಲಾ ಕಾಣುವಂತೆ ಮಸ್ಲಿನ್ ಜುಬ್ಬಾ ಧರಿಸಿದ್ದ; ಅದನ್ನು ನೋಡುವಾಗ ಬೀಗದ ಕೈಗೊಂಚಲಿಗೆ ಸೇರಿಸಿದ್ದ ಸಣ್ಣ ಚಾಕು ಎಂಬಂತೆ ಕಾಣಿಸದೆ ಚಾಕುವಿಗೆ ಆ ಬೀಗದ ಕೈಗೊಂಚಲನ್ನು ಸೇರಿಸಿದ್ದಂತೆ ದೊಡ್ಡದಾಗಿ ಕಾಣಿಸುತ್ತಿತ್ತು.

ಅವನು ಸುಬ್ಬು ಕೋನಾರಿಯನ್ನು ಸಾಮಾನ್ಯವಾಗಿಯೇ ನೋಡಿದ. ತಾನು ನಡೆ ಯುವ ದಾರಿಯಲ್ಲಿ ಯಾರನ್ನೂ ಕಾಣದವನಂತೆ ನೋಡಿದ. ಕೋನಾರಿಗೆ ಇಷ್ಟು ಸಾಲದೆ? ಓಡಲೂ ಆಗದೆ, ನಿಲ್ಲಲೂ ಆಗದೆ, ಹಾಲು ಕರೆಯಲೂ ಆಗದೆ, ಹಸುವಿನ ಕಾಲು

ಕಟ್ಟನ್ನು ಬಿಚ್ಚಲೂ ಆಗದೆ, ತನ್ನನ್ನು ಹಾದು ಹೋಗುವ ಅವನ ಮುಖವನ್ನು ನೋಡಿ ಶಿಲೆಯಾಗಿ ನಿಂತ ಕೋನಾರಿಯನ್ನು ನೋಡಿ ಬೇವಿನ ಮರಕ್ಕೆ ಕಟ್ಟಿದ ಆ ಹಸುವಿನ ಕರುವಿಗೆ ಏನು ಸಂತೋಷವೋ? ಒಮ್ಮೆ ನೆಗೆದು ಹಗ್ಗವನ್ನು ಕಿತ್ತುಕೊಂಡು ಹಸುವಿನ ಕೆಚ್ಚಲಿಗೆ ಬಾಯಿಟ್ಟುದನ್ನು ಕೂಡ ಅವನು ನೋಡಲಿಲ್ಲ.

ಪದ್ಧತಿಯಂತೆ ಹಾಸಿಗೆಯಿಂದ ಎದ್ದವನು ಹಸುವಿನ ಮುಖ ನೋಡಲು ಕಿಟಕಿಯ ಬಾಗಿಲನ್ನು ತೆರೆದ ಮುಂಭಾಗದ ಮನೆಯ ಕುಟುಂಬದ ಕುಂಜುಮಣಿ ಈ ಮಸ್ಲಿನ್ ಜುಬ್ಬಾದವನನ್ನು ಕಾಗೆ ಗೂಡು ಕಟ್ಟಿದಂತಿದ್ದ ಅವನ ಕ್ರಾಪನ್ನೂ, ಸೈಡ್‌ಲಾಕನ್ನೂ ನೋಡಿ ಮುಖ ಕಿವಿಚಿ ಕಣ್ಣುಗಳನ್ನು ಮುಚ್ಚಿಕೊಂಡರು. ಕಣ್ಣು ಮುಚ್ಚಿದ ಮೇಲೆ ಮುಚ್ಚಿದ ಕಣ್ಣುಗಳೊಳಗೆ ಅವನ ಗುರುತು ಹತ್ತಿತು. ಮತ್ತೆ ಕಣ್ತೆರೆದು ನೋಡಿದರು. ಅವನೇ!

ಅವನನ್ನು ಅಟ್ಟಿಸಿಕೊಂಡು ಯಾರಾದರೂ ಬರುತ್ತಿರುವರೋ ಎಂದು ನೋಡುವುದಕ್ಕಾಗಿ ಹೊರಗೆ ಓಡಿ ಬಂದರು.

ಆಗ ಅವನು ಅವರ ಬಳಿ ಹಾದು ಮುಂದೆ ನಡೆದಿದ್ದ. ಹೊರಗೆ ಕುಂಜುಮಣಿ, ಪಶುವಿನ ಕಾಲನ್ನು ಕಟ್ಟಿ ತನ್ನ ಕಾಲುಗಳನ್ನೂ ಭಯದಿಂದ ಕಟ್ಟಿಕೊಂಡು ನಿಂತಿದ್ದ ಸುಬ್ಬು ಕೋನಾರಿಯನ್ನು ನೋಡಿದರು. ಕೋನಾರಿಯ ಹಿಂದೆ, ಕಾಂಪೌಂಡ್ ಬಾಗಿಲ ಹೊರಗೆ ನಿಂತಿದ್ದ ಆ ಜಟಕಾ ಗಾಡಿಯಿಂದ ಇವನು ಇಳಿದು ಬಂದನೇ ಹೇಗೆ ಎಂದು ಕುಂಜುಮಣಿಗೆ ತೀರ್ಮಾನಿಸಲಾಗಲಿಲ್ಲ.

ಯಾಕೆಂದರೆ – ಬೀದಿಯಲ್ಲಿ ಹೋಗುವ ಗಾಡಿ ತಾನಾಗಿ ಅದರ ಹಾದಿಯಲ್ಲಿ ನಿಂತಿರಬಹುದೆಂದು ಕಾಣುವಂತೆ ಆ ಜಟಕಾ ಬಂಡಿಯ ಕುದುರೆ, ಹಿಂದಿನ ಮೊಣಕಾಲುಗಳನ್ನು ನೆಲದ ಮೇಲೆ ಬಾಗಿಸಿ ನಿಂತು ಮೂತ್ರ ವಿಸರ್ಜನೆ ಮಾಡಿ, ಕೊರಳಿನ ಗೆಜ್ಜೆ ಅಲುಗಾಡಿಸಿಕೊಂಡು ಆಗತಾನೆ ಚಲಿಸಲಾರಂಭಿಸಿತ್ತು. ಬೆಳಗ್ಗೆ ತನಗೆ ಸಾಲಾಗಿ ಆದ ದರ್ಶನಗಳನ್ನು ನೆನೆದು ಎಂಜಲು ಉಗಿದರು ಕುಂಜುಮಣಿ. ಉಗಿದ ಮೇಲೆ 'ಅವನು ಹಿಂತಿರುಗಿ ನೋಡಿಬಿಡುವನೋ, ಎಂದು ಭೀತಿಗೊಂಡರು. ಆ ಭಯದಿಂದ, ತಾವು ಉಗುಳಿದುದು ಅವನನ್ನು ನೋಡಿ ಅಲ್ಲ ಎಂಬುದನ್ನು ಅವನಿಗೆ ತಿಳಿಯಪಡಿಸಲೋಸುಗ "ಥೂ ಥೂ ಬಾಯಲ್ಲಿ ಸೊಳ್ಳೆ ನುಗ್ಗಿಬಿಟ್ಟಿತು" ಎಂದುಕೊಳ್ಳುತ್ತಾ ಎರಡು ಬಾರಿ ಮತ್ತೆ ಸುಮ್ಮನೆ ಉಗುಳಿದರು ಕುಂಜುಮಣಿ.

ಅವನು ಆ ಕಾಲೊನಿಯ ಒಳಹೊಕ್ಕು ಎರಡು ಕಡೆಯೂ ಸಾಲಾಗಿದ್ದ ಆ ಕುಟುಂಬಗಳ ಮನೆಗಳನ್ನು ದೃಷ್ಟಿಸಿ ಕೂಡಾ ನೋಡದೆ ಅವುಗಳಲ್ಲಿ ಮನುಷ್ಯರು ವಾಸಿಸುವರೋ ಎಂಬುದನ್ನು ತಿಳಿಯುವ ಶ್ರದ್ಧೆಯನ್ನು ತೋರದೆ. ತನ್ನ ಈ ಬರುವಿಕೆಯನ್ನು ಕಂಡ ನಂತರ ಇಲ್ಲಿ ಇರುವ ಅಷ್ಟು ಮಂದಿಯೂ ಆಶ್ಚರ್ಯ, ಭಯ ಕಳವಳ, ಆತಂಕಗೊಳ್ಳುವರು ಎಂದರಿತೂ ನಿಂದ ಅವರ ಆ ಭಾವಗಳನ್ನು ತಾನು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ

ವೆಂದು ತೋರಿಸಿಕೊಳ್ಳುವ ಓರ್ವ ಅಹಂಭಾವಿಯಂತೆ, 'ಇಲ್ಲಿರುವ ಯಾವೊಬ್ಬನಂತೆಯೇ ಓಡಾಡಲು ತನಗೂ ಹಕ್ಕು ಉಂಟು' ಎಂಬುದನ್ನು ತನ್ನ ಈ ಪ್ರತ್ಯಕ್ಷದಿಂದ ಮೌನವಾಗಿ ಪ್ರಕಟಿಸುವ ಧೋರಣೆಯಲ್ಲಿ ಹಿಂದೆ ಕೈಕಟ್ಟಿ, ಒಂದರ ಮಧ್ಯೆ ಒಂದು ಸೇರಿಸಿದ ಅಂಗೈಗಳನ್ನು ಕೋಳಿಪುಕ್ಕದಂತೆ ಆಡಿಸಿಕೊಂಡು, ನಿಧಾನವಾಗಿ, ಯೋಚನಾಮಗ್ನನಾಗಿ ತಲೆಬಾಗಿ ಮುಂದೆ ನಡೆದಿದ್ದ.

ಆ ಅಹಂಕಾರವನ್ನೂ, ಅವನು ಮೌನದಿಂದ ಹೀಗೆ ಪ್ರತ್ಯಕ್ಷವಾದುದನ್ನು ಕುಂಜುಮಣಿ ಸಹಿಸಲಾಗಲಿಲ್ಲ. ಆದರೆ ಸಹಿಸಿಕೊಳ್ಳದೆ ಮಾಡುವುದೇನು? ಈಗಾಗಲೆ ಒಂದು ಕಡೆ ಭಯದಿಂದ ಕಂಪಿಸುತ್ತಿದ್ದ ಅವರ ಮನಸ್ಸಿನಲ್ಲಿ ಅವನ ಈ ನಡೆಯನ್ನು ಕಂಡು ಕೋಪ ಉಕ್ಕಿಬಂದಿತು. ಆದರೆ ತಿಳುವಳಿಕೆ ನಿಧಾನವಾಗಿ ಕೆಲಸ ಮಾಡಿತು.

"ಇವನು ಯಾಕೆ ಇಲ್ಲಿ ಬಂದಿರಬಹುದು? ಇವನ ನಡಿಗೆಯನ್ನು ನೋಡಿದರೆ ಕದಿಯುವುದಕ್ಕೆ ಬಂದವನಂತಿಲ್ಲ. ಯಾವುದೋ ಲೆಕ್ಕವನ್ನು ತೀರಿಸಲು ಬಂದು, ಅದಕ್ಕಾಗಿ ಕಾಯುತ್ತಿರುವ ನಿಧಾನ ಇವನ ನಡೆಯಲ್ಲಿದೆ... ಇವನು ಹಿಂದೆ ಇದ್ದುದಕ್ಕಿಂತ ಈಗ ಇನ್ನೂ ದಪ್ಪನಾಗಿದ್ದಾನೆ. ಆಗ ಮಾತ್ರ ಏನು?... ಗೋಡೆ ಹತ್ತಿ ಧುಮುಕಿದ ವೇಗಕ್ಕೆ ಕೆಳಗೆಬಿದ್ದು ಮೊಳಕಾಲನ್ನು ಮುರಿದುಕೊಳ್ಳದೆ ಇದ್ದಿದ್ದರೆ ಅಷ್ಟು ಮಂದಿಯನ್ನೂ ಹಾಗೆಯೇ ಅಪ್ಪಿ ಎತ್ತಿ ಬೀಸಿ ಬಿಸಾಡಿರುತ್ತಿದ್ದ... ಆದಿನ ಮೊಳಕಾಲಿನಿಂದ ಸುರಿದ ರಕ್ತವನ್ನೂ, ಬಿದ್ದ ಏಟನ್ನೂ ನೋಡಿದಾಗ ಇವನಿಗೆ ಇನ್ನು ಮೇಲೆ ಕಾಲೇ ಬರದು ಎನಿಸಿತು ನನಗೆ. ಈಗ ಏನಪ್ಪಾ ಎಂದರೆ ಹೆಜ್ಜೆ ಹಾಕಿ ತೋರಿಸುತ್ತಾನೆ! ಹೆಜ್ಜೆ ಅದು ಸರಿ ಈಗ ಇವನು ಇಲ್ಲಿ ಯಾಕೆ ಬಂದಿದ್ದಾನೆ...? ಏನು ಮಾಡಿದರೆ ಹೋಗುತ್ತಾನೆ... ಇವನು ಬಂದಿರುವುದು ಒಳ್ಳೆಯದಕ್ಕಲ್ಲ ಎನಿಸುತ್ತದೆ. ಈ ದಿನ ಯಾವ ಮುಖವನ್ನು ನೋಡಿದೆನೋ? ಸ್ವಲ್ಪ ಹೊತ್ತಿನ ಹಿಂದೆ ಇವನ ಮುಖವನ್ನೇ ನೋಡಿದೆನಲ್ಲ...' ಎಂದು ಕಳವಳ ಕೂಡಿದ ಚಿಂತನೆಯಿಂದ ಸುಬ್ಬು ಕೋನಾರಿಯನ್ನು ಪರಿತಾಪವಾಗಿ ನೋಡಿದರು ಕುಂಜುಮಣಿ. ಆ ದೃಷ್ಟಿಯಲ್ಲಿ ಸುಬ್ಬು ಕೋನಾರಿಯ ದೇಹವನ್ನೂ ಅವನ ದೇಹವನ್ನೂ ಹೋಲಿಸಿ ನೋಡಿದರು.

'ಕೋನಾರಿಗೆ ಪುಷ್ಟ ದೇಹ... ಮೊಸರು, ಹಾಲು, ಬೆಣ್ಣೆ ತುಪ್ಪದಲ್ಲಿ ಬೆಳೆದ ದೇಹವಾಯಿತಲ್ಲ ಸರಿಯೇ! ಆದರೆ ಏಟು ಸಹಿಸೀತೆ? ಅವನಿಗೆ ಆ ದಿನ ಮೊಳಕಾಲಿನಲ್ಲಿ ಏಟು ಬೀಳದೆ ಇದ್ದಿದ್ದರೆ ಈ ಸುಬ್ಬು ಕೋನಾರಿ ಕೆಳಗೆ ಬಿದ್ದಿದ್ದ ಅವನ ಬೆನ್ನ ಮೇಲೆ ಹಸುವನ್ನು ಕಟ್ಟುವ ಹಗ್ಗದಿಂದ ಪಟಪಟನೆ ಹೊಡೆಯುದಿರುತ್ತಿದ್ದನೆ? ಆ ಹಗ್ಗ ರಕ್ತದಲ್ಲಿ ತೋಯ್ದು ಹೋಯಿತಲ್ಲಾ... ಏಟು ಬಿದ್ದು ರಕ್ತ ಬರುತ್ತಿದ್ದ ಮೊಳಕಾಲಿಗೂ ಒಂದೇಟು ಹಾಕಿದ. ಪ್ರಜ್ಞೆ ತಪ್ಪಿದ. ಅದರ ನಂತರ ಹೆಣದಂತೆ ಅವನನ್ನು ಎಳೆದುಕೊಂಡು ಬಂದು, ಎತ್ತಿ ಹಿಡಿದು ಬೇವಿನಮರಕ್ಕೆ ನಿಲ್ಲಿಸಿ ಕಟ್ಟಿದ... ಆ ಮೇಲೆ ಅವನು ಕಣ್ತೆರೆದು ನೋಡಿದಾಗಲೇ ಅವನಿಗಿನ್ನೂ ಜೀವವಿದೆ ಎಂದು ಗೊತ್ತಾದುದು... 'ನೀರು, ನೀರು' ಎಂದು ಕೇಳಿದ.

ನಾನೇ ಹಾಲಿನ ಪಾತ್ರೆಯಲ್ಲಿ ನೀರೆತ್ತಿಕೊಂಡು ಹೋಗಿ ಕೊಟ್ಟೆ. ಕೊಟ್ಟವನು ಅಷ್ಟಕ್ಕೆ ಸುಮ್ಮನಿರಬಾರದೆ "ಕಳ್ಳಮಗ್ಗನೇ ನಿನಗಾಗಿ ಪರಿತಾಪಪಟ್ಟರೆ ಪಾಪ ಬಂದೀತು" ಎಂದು ಅದೇ ಹಾಲಿನ ಪಾತ್ರೆಯಿಂದಲೇ ಕಪಾಳಕ್ಕೆ ಹೊಡೆದ... ನೀರು ಕುಡಿದ ಬಾಯಿಂದ ಅಪಾರವಾಗಿ ರಕ್ತ ಸುರಿಯಿತು... ಅವನು ಕಣ್ಣನ್ನು ತೆರೆದು ಕಪ್ಪು ಗುಡ್ಡೆಗಳು ಮೇಲೇರಿ ದಂತೆ, ನನ್ನನ್ನು ನೋಡಿದ. ಅದಕ್ಕೆ ಅರ್ಥ ಈಗ ಗೊತ್ತಾಗುತ್ತೆ...

'ಏಯ್ ಮಗು, ಇರು, ಬಂದು ಒಂದು ಕೈ ನೋಡಿಕೊಳ್ಳುತ್ತೇನೆ' ಎಂದು ಹೇಳಿದಂತೆ ಆ ದಿನವೇ ತೋರಿತು. ಈಗ ಬಂದಿದ್ದಾನೆ... ನಾನು ನೀರು ಕೊಟ್ಟೆನಲ್ಲ... ಅದನ್ನು ಮರೆತುಬಿಟ್ಟಿರುವನೋ? ನನಗೇನು?– ಮಿಕ್ಕವರಂತೆ 'ಒಬ್ಬ ಸರಿಯಾಗಿ ಸಿಕ್ಕಿಕೊಂಡನಲ್ಲ, ಇದು ಛಾನ್ಸ್' ಎಂದು ಹೊಡೆಯುವ ಆಸೆಯೋ? 'ಹೀಗೆ ಕಳ್ಳತನ ಮಾಡಿ ಓಡಿ ಬಂದು ಇವರ ಕೈಲಿ ಸಿಕ್ಕಿಕೊಂಡು ಏಟು ತಿಂದು ನೀರು ನೀರು ಎಂದು ಸಂಕಟಪಡು ತ್ತಿದ್ದೀಯಲ್ಲಾ... ನಿನಗೇನು ಹಣೆಬರೆಹ? ಎಂದು ಹೊಡೆದೆ. ಇಲ್ಲ ಅನ್ನುವುದಿಲ್ಲ... ಹೊಡೆದೆ... ಅವನನ್ನು ಹೊಡೆದುದು ಮಾತ್ರ ಜ್ಞಾಪಕವಿದ್ದೀತು. ಈಗ ತಿರುಗಿ ಹೊಡೆಯುವುದಕ್ಕೇ ಅವನು ಬಂದಿರಬೇಕು. ನನಗೆ ಚೆನ್ನಾಗಿ ಗೊತ್ತು. ಅವನ ನಡಿಗೆಯೇ ಹೇಳುತ್ತದೆಯಲ್ಲ! ಆರು ತಿಂಗಳು ಜೈಲು ವಾಸದ ಊಟ ತಿಂದು ದೇಹ ಬೆಳೆಸಿಕೊಂಡು ಬಂದಿದ್ದಾನೆ. ಸೇಡು ತೀರಿಸಿಕೊಳ್ಳುವುದಕ್ಕೇ ಬಂದಿದ್ದಾನೆ... ಪಾಪ ಈ ಸುಬ್ಬು ಕೋನಾರಿಯನ್ನು ನೋಡಿದರೇನೇ ಅಯ್ಯೋ ಎನಿಸುತ್ತದೆ... ಹಾಗೆಯೇ ಶಿಲೆಯಂತೆ ನಿಂತುಬಿಟ್ಟನಲ್ಲ? ಇವನ ಲೆಕ್ಕಕೇ ಹೆಚ್ಚು. ಏನು ಹೊಡೆದ? ಹೊಡೆಯುವಾಗ ಮಾತ್ರ ಚೆನ್ನಾಗಿತ್ತೇನೋ...? ಈಗ ಅವನು ಸೇಡು ತೀರಿಸಿಕೊಳ್ಳುತ್ತಾನೆ. ನನಗೂ... ನನ್ನ ಲೆಕ್ಕ ಒಂದೇಟು ಮಾತ್ರ... ಆದರೆ ಅದನ್ನು ನಾನು ತಾಳಿಕೊಳ್ಳಬೇಕಲ್ಲ... ಈ ಕಾಲೋನಿ ಯಲ್ಲಿರುವವರೆಲ್ಲಾ ಒಬ್ಬೊಬ್ಬರೂ ಒಂದೊಂದು ಧರ್ಮದ ಏಟು ಹಾಕಿದರು. ಓಹೋ, ಇವನೇ ಮಹಾಶೂರನೋ? ಇವನೇನು ಎಲ್ಲರನ್ನೂ ಹೊಡೆಯುತ್ತಾನೇನು? ಎಂದು ಧೈರ್ಯ ತಂದುಕೊಂಡು ಸುಬ್ಬು ಕೋನಾರಿಯು ದೇಹವನ್ನು ಸರಿಯಾಗಿ ನೋಡಿದರು ಕುಂಜುಮಣಿ. ಅವನ ದೇಹದೊಂದಿಗೆ ತನ್ನ ದೇಹವನ್ನೂ – ಏನೋ ಲಂಕೆಗೆ ಸೇತುವೆ ಕಟ್ಟುವಾಗ ಅಳಿಲು ಮಾಡುವ ಸೇವೆಯಂತೆ, ತನ್ನ ಬಲವನ್ನೂ ಸೇರಿಸಿ ನಂತರ ತಾನೂ ಸುಬ್ಬು ಕೋನಾರಿಯೂ ಸೇರಿ ಹಾಕಿದ ಕೂಗಿಗೆ ಎಲ್ಲಾ ಬಂದು ಸೇರುತ್ತಾರೆ ಎಂದು ನಂಬಿದ ಗುಂಪಿನ ಬಲವನ್ನೂ ಸೇರಿಸಿ ಹೆಚ್ಚಿಸಿಕೊಂಡ ಧೈರ್ಯದಿಂದಲೇ ಕುಂಜು ಮಣಿ ಬಲವಾಗಿ ಒಂದು ಬಾರಿ – ಕೆಮ್ಮಿದರು. ಅವರೇನೋ ಅವನನ್ನು ಹೆದರಿಸುವ ಧೋರಣೆಯಲ್ಲಿ ಗಂಟಲಲ್ಲಿ ಶಬ್ದ ಮಾಡಲೆಳಸಿದರು. ಹಾಗೆಲ್ಲಾ ಶಬ್ದ ಮಾಡಿ ಅನುಭವ ವಿಲ್ಲದ ಕಾರಣದಿಂದಲೋ ಅಥವಾ ದಿನ ಪೂರ್ತಿ ಆ ನಟರಾಜನ ವಿಲಾಸದಲ್ಲಿ ಅಡುಗೆಯ ಭಟ್ಟನಾಗಿ ಒಲೆಯ ಹೊಗೆಯಲ್ಲಿ ಕಡಲೆಣ್ಣೆಯಲ್ಲಿ ಹುಣಿಸೆಹಣ್ಣನ್ನು ಹಾಕಿದಾಗ ಅದು

ಸೀಯುವ ವಾಸನೆಯಲ್ಲಿ ಕೆಮ್ಮಿ ಕೆಮ್ಮಿ ದಿನ ಕಳೆಯುವ ನೆನಪಿನಲ್ಲೋ ಗಂಟಲಲ್ಲಿ ಶಬ್ದ ಬರುವುದನ್ನು ನೆನೆದು ಅವರು ಕೆಮ್ಮಿದರು.

ಅವನು, ಅವರನ್ನೋ, ಅವರ ಕೆಮ್ಮನ್ನೋ ಕೊಂಚವೂ ಲಕ್ಷ್ಯಮಾಡದೆ ಬೀಗ ಹಾಕಿದ್ದ ಆ ಮನೆಯ ಬಾಗಿಲಿಗೆ ಹೋದ.

'ಒಳ್ಳೆಯ ಜಾಗವನ್ನೇ ನೋಡಿದ್ದಾನೆ. ಈಗ ಅಲ್ಲಿ ಜಗುಲಿಯ ಮೇಲೆ ಕುಳಿತುಕೊಳ್ಳುತ್ತಾನೆ. ಪಕ್ಕದಲ್ಲಿದ್ದ ಕೊಳಾಯಿಗೆ ಅದು ಹೇಗೆ ಹೆಂಗಸರು ಹೋಗಿ ನೀರು ಹಿಡಿದುಕೊಳ್ಳುತ್ತಾರೆ...? ಇದೋ ಇನ್ನು ಸ್ವಲ್ಪ ಹೊತ್ತಿಗೆ ನನ್ನ ತಾಯಿ ಎರಡು ಕೊಡಗಳನ್ನೂ ತೆಗೆದುಕೊಂಡು ಹೋಗಿ ಜಗುಲಿಯ ಮೇಲಿಟ್ಟು "ಕುಂಜುಮಣಿ ಮಗು ನೀನು ಒಳ್ಳೆಯವನಪ್ಪ. ಎರಡೇ ಎರಡು ಕೊಡ ನೀರು ತಂದು ಕೊಡಪ್ಪ" ಎಂದು ಹೇಳುತ್ತಾರೆ. ಪಾಪ ಅವರಿಗೆ ಮನೆಯೊಳಗೆ ಅಡುಗೆ ಮಾಡುವುದು ಮಾತ್ರ ಸಾಧ್ಯ. ನೀರಿನ ಕೊಡಗಳನ್ನು ಎತ್ತಬಲ್ಲರೆ? ಎರಡು ಕೊಡಗಳನ್ನೂ ಎತ್ತಿಕೊಂಡು ನಾನು ಕೊಳಾಯಿ ಕಡೆಗೆ ಹೋಗುತ್ತೇನೆ. ಹಾಗೆಯೇ ಅಲಕ್ ಎಂದು ನನ್ನನ್ನು ಜಗುಲಿಯ ಮೇಲೆ ಹಾಕಿ... ಹೇಳಿಬಿಡಬೇಕು... "ಒಂದೇಟು ಮಾತ್ರ ತಾಳಿಕೊಳ್ಳಬಲ್ಲೆನಷ್ಟೆ. ಅಷ್ಟಕ್ಕೆ ಬಿಟ್ಟುಬಿಡಬೇಕು... ಅಷ್ಟೇ ನನ್ನ ಲೆಕ್ಕ" – ಎಂದು. ನ್ಯಾಯವಾಗಿ ನೋಡಿದರೆ ಅವನು ಮೊದಲು ಸುಬ್ಬು ಕೊನಾರಿಯನ್ನು ತಾನೆ ಹೊಡೆಯಬೇಕು. ಈ ಕೊನಾರಿಗೆ ಅವನ ಗುರುತು ಸಿಕ್ಕಲಿಲ್ಲವೆ?

"ಏಯ್ ಸುಬ್ಬು ನೋಡುತ್ತಾ ನಿಂತಿದ್ದೀಯಲ್ಲಾ... ಅವನ ಗುರುತು ಸಿಕ್ಕಲಿಲ್ಲವೆ?" ಎಂದು ಎತ್ತರದ ಧ್ವನಿಯಿಂದ ವಿಚಾರಿಸಿದರು ಕುಂಜುಮಣಿ.

"ಗುರುತು ಸಿಕ್ಕಿತು ಸ್ವಾಮಿ. ನನ್ನ ಗುರುತು ಅವನಿಗೆ ಗೊತ್ತಾಯಿತೋ ಎಂದು ಯೋಚನೆಯಾಗಿದೆ" ಎಂದ ಸುಬ್ಬು ಕೊನಾರಿ.

ಆ ವೇಳೆಯಲ್ಲಿ ಕೈಯಲ್ಲಿ ಹಾಲು ಚೆಂಬಿನೊಂದಿಗೆ ಹೊರಗೆ ಬಂದ, ಕುಂಜುಮಣಿಯ ತಾಯಿ ಸೀತಮ್ಮ ಸುಬ್ಬು ಕೋನಾರಿ ಹಾಲು ಕರೆಯದೆ ತನ್ನ ಮುದ್ದುಮಗನ ಬಳಿ ಮಾತನಾಡಿಕೊಂಡಿದ್ದುದನ್ನು ನೋಡಿದಳು. ಅದೂ ಅವನು ರಹಸ್ಯವಾಗಿ ಮಾತನಾಡಿಕೊಂಡಿದ್ದುದನ್ನು ನೋಡಿ ಅದೇನೆಂದು ತಾನೂ ತಿಳಿದುಕೊಳ್ಳುವ ಕುತೂಹಲದಿಂದ ಕಿವಿಯನ್ನು ಮುಚ್ಚಿದ್ದ ಸೆರೆಗನ್ನು ಹಿಂದೆ ಸರಿಸಿ ಬೇವಿನ ಮರದಡಿಗೆ ಬಂದರು. ಸಾಧಾರಣವಾಗಿ ಕುಂಜುಮಣಿ ಯಾರ ಬಳಿಯೂ ಮಾತನಾಡುತ್ತಿರಲಿಲ್ಲ. ಬೆಳಿಗ್ಗೆ ಎದ್ದೊಡನೆ ಕಿಟಕಿಯಿಂದ ಹಸುವಿನ ದರ್ಶನ ಮಾಡಿ ಜಗುಲಿಯ ಮೇಲೆ ಬಂದು ಕುಳಿತು ವೀಳ್ಯದೆಲೆ ಹಾಕಲಾರಂಭಿಸುವರು. ಸೀತಮ್ಮ ಹಾಲು ತೆಗೆದುಕೊಂಡು ಹೋಗಿ ಕಾಫಿ ಮಾಡಿ ಕರೆಯುವುದಕ್ಕೆ ಮುಂಚೆ ಎರಡು ಬಾರಿಯಾದರೂ ವೀಳ್ಯದೆಲೆ ಹಾಕಿ ಮುಗಿಸಿರುತ್ತಿದ್ದರು ಕುಂಜುಮಣಿ. ಕಾಫಿ ಕುಡಿದನಂತರ ಮತ್ತೊಂದು ಬಾರಿ ವೀಳ್ಯದೆಲೆ, ಅಡಿಕೆಚೂರು,

ಹೊಗೆಸೊಪ್ಪು, ತುಂಬಿದ ಬಾಯಿ. ಎರಡು ಕೊಡಗಳನ್ನೂ ಎತ್ತಿಕೊಂಡು ಕೊಳಾಯಿ ಬಳಿ ಬರುತ್ತಿದ್ದರು. ಅವರು ಹೆಚ್ಚು ಮಾತನಾಡುತ್ತಿದ್ದ ಭಾಷೆ 'ಉಂ, 'ಉಹುಂ' ಎಂಬ ಹೂಂಕಾರ ಮತ್ತು ಕೈಯಾಡಿಸುವದಷ್ಟೆ. ಹಾಗಿದ್ದ ಕುಂಜುಮಣಿ, ಬೆಳಿಗ್ಗೆ ಎದ್ದು ವೀಳ್ಯೆದೆಲೆ ಕೂಡ ಹಾಕದೆ ಈ ಕೊನಾರಿಯೊಂದಿಗೆ ಏನೋ ಮಾತನಾಡುತ್ತಿದ್ದಾರೆಂದರೆ ಅದೇನೋ ಮುಖ್ಯವಾದ ವಿಷಯವಾಗಿರಬೇಕೆಂದು ಊಹಿಸಿದ ಸೀತಮ್ಮ, ವಾಸನೆ ನೋಡುವಂತೆ ಮುಖ ಮಾಡಿ ನಾಲ್ಕು ಕಡೆ ತಿರುಗಿ ನೋಡಿ ಬೇವಿನಮರದಡಿಗೆ ಬಂದರು. ಹಾಗೆ ಅವರು ನೋಡುವಾಗ ಆ ಬೀಗ ಹಾಕಿದ್ದ ಮನೆಯ ಮುಂದೆ ನಿಂತಿದ್ದ ಅವನು ಈ ಮೂವರನ್ನೂ ತಿರುಗಿ ನೋಡಿದ.

"ಇಲ್ಲೆ ನೋಡುತ್ತಿದ್ದಾನೆ... ಅಮ್ಮಾ. ನೀವು ಯಾಕೆ ಆ ಕಡೆ ನೋಡುತ್ತಿದ್ದೀರಿ?" ಎಂದು ಹಲ್ಲು ಕಚ್ಚಿದರು ಕುಂಜುಮಣಿ.

"ಯಾರೋ ಅದು? ಬೀಗ ಹಾಕಿರುವ ಮನೆಯ ಹತ್ತಿರ ಏನು ಕೆಲಸ? ಹೇಳುವವರು ಕೇಳುವವರಿಲ್ಲವೇ? ಯಾರು ನೀನು?" ಎಂದು ಅವನನ್ನು ನೋಡಿದ ಮಾತ್ರದಲ್ಲೇ ಎತ್ತರದ ಧ್ವನಿಯಲ್ಲಿ ಕೇಳಿ ಹಾಲಿನ ಚೆಂಬಿನ ಕೈಯನ್ನು ನೀಡಿ ಕೇಳುತ್ತಾ ಅವನೆಡೆಗೆ ನಡೆದ ಸೀತಮ್ಮಾನನ್ನು ಕುಂಜುಮಣಿ ಕೈಹಿಡಿದೆಳೆದು ನಿಲ್ಲಿಸಿದರು.

"ಅವನು ಯಾರು ಗೊತ್ತೆ? ಹಿಂದೆ ಒಂದು ದಿನ ಬೆಳಿಗ್ಗೆ ಎಲ್ಲಿಯೋ ಕದ್ದು, ಅವಳು ಓಡಿಸಿದಾಗ ಓಡಿ ಬಂದು ನಮ್ಮ ಕಾಂಪೌಂಡ್ ಹಾರಿ ಕಾಲನ್ನು ಮುರಿದುಕೊಂಡು ಈ ಕೋನಾರಿಯ ಕೈಯಲ್ಲಿ ಏಟು ತಿಂದನಲ್ಲಾ..."

"ಹೇಳು..."

"ಹತ್ತು ಗಂಟೆಗೆ ಪೋಲೀಸಿನವರು ಬರುವವರೆಗೆ ಬೇವಿನ ಮರಕ್ಕೆ ಕಟ್ಟಿಹಾಕಿ ಬಂದ ವರು ಹೋದವರೆಲ್ಲಾ ತಲೆಗೊಬ್ಬರಂತೆ ಧರ್ಮದೇಟು ಹಾಕಿದರಲ್ಲಾ...

"ನಾನು ಕೂಡ ಹಾಲಿನ ಪಾತ್ರೆಯಿಂದ ಕಪಾಳಕ್ಕೆ ಒಂದೇಟು ಕೊಟ್ಟೆನಲ್ಲಾ... ಅವನೇ ಇವನು – ಆ ಕಳ್ಳ ಬಂದಿದ್ದಾನೆ... ಕದಿಯುವುದಕ್ಕಲ್ಲ. ಎಲ್ಲರ ಮೇಲೆ ಆ ಸೇಡು ತೀರಿಸಿ ಕೊಳ್ಳುವುದಕ್ಕೆ..."

"ತೀರಿಸಿಕೊಂಡಾನು... ತೀರಿಸಿಕೊಂಡಾನು. ಬೇರೆಯವರು ಕೈ ಹೂ ಬಿಡಿಸುತ್ತಿರು ತ್ತೇನೋ... ಪಾಪ ಕಳ್ಳನನ್ನು ಕಟ್ಟಿಹಾಕಿ ಹೊಡೆಯದೆ ಕೈ ಹಿಡಿದು ಮುತ್ತು ಕೊಡುತ್ತಾ ರೇನೋ...? ಏನು ಕೋನಾರಿ ಈ ಅನ್ಯಾಯವನ್ನು ನೋಡುತ್ತಾ ಸುಮ್ಮನೆ ನಿಂತಿದ್ದೀ ಯಲ್ಲ. ಮರ್ಯಾದೆಯಿಂದ ಹೊರಗೆ ಹೋಗು ಅಂತ ಹೇಳು. ಬೇರೆ ಎಲ್ಲಿಯಾದರೂ ಛತ್ರ ಚಾವಡಿ ನೋಡಿಕೊಳ್ಳಲಿ... 'ಇಲ್ಲದಿದ್ದರೆ ಪೋಲೀಸರನ್ನು ಕರೆದೇನು? ಎಂದು ಹೇಳು" ಎಂದು ಆ ಕಾಲೋನಿಯವರನ್ನೆಲ್ಲಾ ಕೂಡಿಸುವಂತೆ ಸೀತಮ್ಮ ಕೂಗು ಹಾಕಿದರು.

ಅವಳ ಕೂಗು ಹೊರಡುವ ಮುನ್ನವೇ ಆ ಕಾಲೋನಿಯಲ್ಲಿ ಹಾಲು ತೆಗೆದು ಕೊಳ್ಳುವುದಕ್ಕೂ ಕೊಳಾಯಿ ಬಳಿ ಪಾತ್ರೆಯಿಡುವುದಕ್ಕೂ ಅಲ್ಲೊಬ್ಬರು ಇಲ್ಲೊಬ್ಬರು ಕಾಣಿಸಿಕೊಂಡರು.

ಈಗ ಸೀತಮ್ಮನ ಕೂಗು ಕೇಳಿ, ಎಲ್ಲರೂ ಬೀಗ ಹಾಕಿದ್ದ ಮನೆಯ ಜಗುಲಿಯ ಮೇಲೆ ಬಂದು ಕುಳಿತಿದ್ದ ಅವನನ್ನು ನೋಡಿದರು; ನೋಡಿದೊಡನೆ ಗುರುತು ಹಿಡಿದರು. ಸುಬ್ಬು ಕೋನಾರಿಯಂತೆ, ಕುಂಜುಮಣಿಯಂತೆ ಅವನ ಪ್ರತ್ಯಕ್ಷವನ್ನು ಕಂಡು ಅವರೂ ಅಂಜಿದರು.

ಗುಂಪು ಸೇರಿದ ಮೇಲೆ ಕೋನಾರಿಗೆ ಸ್ವಲ್ಪ ಧೈರ್ಯ ಬಂದಿತು. 'ಏನಿವನು ಮಹಾ...? ಮಹಾ ದೊಡ್ಡ ಮನುಷ್ಯ... ಕಳ್ಳ ಮಗ? ಆದಿನ ತಿಂದ ಏಟು ಮರೆತಿದ್ದಾನೆ. ಇವನು ಇಲ್ಲಿಗೆ ಬಂದ ಕಾರಣವೇನು ಎಂದು ಯೋಚಿಸಿದೆ...'

ಮಫ್ಲರನ್ನು ಒದರಿ ಭುಜದ ಮೇಲೆ ಹಾಕಿಕೊಂಡ ಕೋನಾರಿ ಬಲವಾಗಿ ಒಮ್ಮೆ ಕೆಮ್ಮಿದ.

"ಉಂ..." ಎಂದು ಕುಂಜುಮಣಿ ಆ ಕೆಮ್ಮನ್ನು ಶ್ಲಾಘಿಸಿದರು.

ಕೋನಾರಿ, ಧೈರ್ಯವಾಗಿ ಸ್ವಲ್ಪ ಬೆದರಿಸುವ ಧೋರಣೆಯಲ್ಲಿ ಅವನು ಕುಳಿತಿದ್ದ ಜಗುಲಿಯ ಕಡೆಗೆ ನಡೆದ. ಅವನಿಗೆ ಜೊತೆಯಾಗಿ ಏನಾದರೂ ಸಂಭವಿಸಿದರೆ ಬಿಡಿಸುವುದಕ್ಕೊ, ಕೂಗಿಕೊಳ್ಳುವುದಕ್ಕೊ ಒಬ್ಬ ಮನುಷ್ಯ ಬೇಡವೆ? ಅದಕ್ಕಾಗಿ – ಕುಂಜುಮಣಿಯೂ ಕೋನಾರಿಯ ಹಿಂದೆ ಗಂಭೀರವಾಗಿ ನಡೆದರು.

"ಏಯ್... ನೀನು ಯಾರು ಎಂದು ಎಲ್ಲರಿಗೂ ಗೊತ್ತು... ಜಾಗ ತಿಳಿಯದೆ ಬಂದು ಬಿಟ್ಟೆ ಅಂತ ಕಾಣುತ್ತೆ. ಇನ್ನು ಮುಂದೆ ತಕರಾರು ಬರುವುದಕ್ಕೆ ಮುಂಚೆ ಈ ಜಾಗ ಬಿಟ್ಟು ಹೊರಟು ಹೋಗು" ಎಂದು ಕೋನಾರಿ ಹೇಳುವಾಗ—

"ಹೌದಪ್ಪ... ತಕರಾರು ಮಾಡಬೇಡ. ಸುಮ್ಮನೆ ಹೊರಟು ಹೋಗು... ನಿನಗೆ ಸ್ಥಳ ಬೇರೆ ಸಿಕ್ಕಿದೆ?" ಎಂದು ಕುಂಜುಮಣಿ ಧ್ವನಿಗೂಡಿಸಿದರು.

ಅವನು ಮೌನವಾಗಿ ಜುಬ್ಬಾ ಜೇಬಿನಿಂದ ಒಂದು ಬೀಡಿ ತೆಗೆದು ಹಚ್ಚಿಕೊಂಡ. ನಂತರ ಸಾವಧಾನವಾಗಿ ಹೊಟ್ಟೆ ಹಿಡಿದೆತ್ತಿ ಬೆಲ್ಟಿಗೆ ಹೊಲಿದಿದ್ದ ಕೈಚೀಲ ತೆಗೆದು ನಾಲ್ಕು ಬಾರಿ ಮಡಿಸಿದ್ದ ಕಾಗದವನ್ನು ಕೋನಾರಿಗೆ ಕೊಟ್ಟು, ಚೀಲದಿಂದ ಒಂದು ಬೀಗದ ಕೈ ಹುಡುಕಿ ಬೀಗ ಹಾಕಿದ ಮನೆಯ ಬೀಗವನ್ನು ತೆಗೆದು ಒಳಗೆ ಹೋದ.

ಕೋನಾರಿ ಆ ಕಾಗದವನ್ನು ಕುಂಜುಮಣಿಯ ಕೈಗೆ ಕೊಟ್ಟ. ಕುಂಜುಮಣಿ ಅದನ್ನು ತೆಗೆದು ನೋಡಿ ಬಾಯನ್ನು ಅಗಲವಾಗಿ ತೆರೆದರು.

"ಏನು, ಕೋನಾರಿ... ಮೊದಲಿಯಾರ್ ಬಳಿ ಎರಡು ತಿಂಗಳ ಅಡ್ವಾನ್ಸ್ ಐವತ್ತು ರೂಪಾಯಿ ಕಟ್ಟಿ, ರಶೀದಿ ತೆಗೆದುಕೊಂಡು ಬಂದಿದ್ದಾನಪ್ಪ..." ಎಂದು ಬಾಧೆಯಿಂದ ನಿಟ್ಟುಸಿರು ಬಿಟ್ಟರು.

"ಚೆನ್ನಾಗಿದೆ, ನ್ಯಾಯ! ಸಂಸಾರಿಗಳಿರುವ ಕಡೆ ಕಳ್ಳನನ್ನು ಕರೆದುಕೊಂಡು ತಂದಿರಿಸುವುದೇ? ಈ ಮೊದಲಿಯಾರ್‌ಗೆ ಬುದ್ಧಿಯೇನಾದರೂ ಕೆಟ್ಟಿದೆಯೋ? ಕುಂಜುಮಣಿ ಈ ಮನೆ ಖಾಲಿಯಾದ ಹದಿನೈದು ದಿನಗಳಿಂದ ಹೇಳುತ್ತಲೇ ಇದ್ದೆನಲ್ಲ? ನಮ್ಮ ಸುಬ್ಬಿಣಿ ಪಿಳ್ಳೈ ಪಟ್ಟಂಬಿ ಇಲ್ಲಿ ಏನೋ ಕೋ-ಆಪರೇಟಿವ್ ಪರೀಕ್ಷೆಗೆ ಓದುವುದಕ್ಕೆ ಬರುವುದಾಗಿ ಕಾಗದ ಬರೆದಾಗಲೇ ಹೇಳಿದೆನಲ್ಲಾ... 'ಆ ಮೊದಲಿಯಾರ್ ಮುಖಕ್ಕೆ ಐವತ್ತು ರೂಪಾಯಿಗಳನ್ನು ಬಿಸಾಡಿ ಈ ಮನೆ ಹಿಡಿ ಅಂತ. ನನಗೆ ಆಗಲೇ ಭಯ... ವಯಸ್ಸಿಗೆ ಬಂದ ಹೆಣ್ಣು ಮಕ್ಕಳಿರುವ ಕಡೆ ಯಾರಾದರೂ ಪೋಲಿಗಳು ಬಂದಾರು ಅಂತ... ನೋಡು... ಅವನೂ ಅವನ ತಲೆಯೂ... ಹಾಳಾಗಿ ಹೋಗ... ಬೀಡಿ ಬೇರೆ ಕೇಡು... ಏನು ಗ್ರಹಚಾರವೊ?" ಎಂದು ಕೊನೆಯಿಲ್ಲದೆ ಶಪಿಸುತ್ತಿದ್ದ ಸೀತಮ್ಮನನ್ನು, ಅವಳ ಬಾಯಿಗೆ ಅಡ್ಡ ಅಂಗೈ ಇಟ್ಟು ಮುಚ್ಚುವುದೇ ಕೊರಳನ್ನು ಹಿಸುಕಿ ನಿಲ್ಲಿಸುವುದ್ಯೇ ಎಂದು ಅರ್ಥವಾಗದ ಆತಂಕದಿಂದ ಹಲ್ಲು ಕಚ್ಚಿ ಅವಳ ಮುಖಕ್ಕೆ ಎರಡು ಕೈ ನೀಡಿ —

"ಅವನ ಕಿವಿಯಲ್ಲಿ ಬಿದ್ದೀತು. ಬಾಯಿ ಮುಚ್ಚಿಕೊಳ್ಳಿ... ಅವನ ಕೈಯಿಂದ ನನಗೆ ಏಟು ಬೀಳುವಂತೆ ಮಾಡಲು ಕಂಕಣ ಕಟ್ಟಿ ನಿಂತಿದ್ದೀರೇನು? ಯಾವನೋ ಎಲ್ಲೋ ಬರುತ್ತಾನೆ. ನಮಗೇನು? ಎಂದು ಹೇಳಿ ಸೀತಮ್ಮನ ಕೈ ಹಿಡಿದೆಳೆದುಕೊಂಡು ತಮ್ಮ ಮನೆಯ ಕಡೆಗೆ ನಡೆದರು ಕುಂಜುಮಣಿ.

"ನನಗೇನು ಭಯ? ನಿನಗೆ ಭಯವಾಗಿದ್ದರೆ ನೀನು ಮನೆಗೆ ಹೋಗು... ಗಂಡಸರು, ನೀವು ಹೊರಗೆ ಹೋಗಿಬಿಡುತ್ತೀರಿ. ನಾವು ಹೆಂಗಸರು. ಹೊಟ್ಟೆಗೆ ಬೆಂಕಿ ಕಟ್ಟಿಕೊಂಡು ಇರಬೇಕು... ಈಗಲೇ ಕೊಳಾಯಿ ಕೆಳಗಡೆ ಇದ್ದ ತಪ್ಪಲೆ ಇಲ್ಲ... ಒಣಗಿ ಹಾಕಿದ್ದ ಬಟ್ಟೆ ಇಲ್ಲ... ಸಾಲದ್ದಕ್ಕೆ ಕಳ್ಳನನ್ನೇ ಕರೆದುಕೊಂಡು ಬಂದು ಸಂಸಾರ ಹೂಡಿಸಿದ್ದಾರೆ... ಕಿವಿಯಲ್ಲಿ ಮೂಗಿನಲ್ಲಿ ಎರಡು ತಿರುಗಣೆ ಒಡವೆ ಹಾಕಿಕೊಂಡಿರುವ ಮಕ್ಕಳನ್ನು ಹೇಗೆ ಧೈರ್ಯವಾಗಿ ಹೊರಗೆ ಕಳುಹಿಸುವುದು? ಏಯ್... ಕೋನಾರಿ, ಸುಮ್ಮನೆ ಹೋಗಿ ಪೋಲೀಸರಿಗೆ ಕಂಪ್ಲೈಂಟ್ ಕೊಡು. ಇದೇ ಸ್ಥಳದಲ್ಲಿ ಇವನನ್ನು ಹಿಡಿದು ಕೊಟ್ಟಿದ್ದೇವೆ ಹಿಂದೆ" ಎಂದು ದಾರಿಯುದ್ದಕ್ಕೂ ಬಾಯನ್ನು ಮುಚ್ಚುತ್ತಿದ್ದ ಮಗನ ಕೈಯನ್ನು ತಟ್ಟುತ್ತಾ ಕೂಗಿಕೊಂಡು ಮನೆಯೊಳಗೆ ಹೋದ ಸೀತಮ್ಮ ಒಳಗಿನಿಂದಲೂ ಉಚ್ಚ ಸ್ಥಾಯಿಯಲ್ಲಿ ಆ ಬೀದಿಗೇ ಅಪಾಯದ ಎಚ್ಚರಿಕೆ ಕೊಡುತ್ತಿದ್ದರು.

ಏತನ್ಮಧ್ಯೆ ಸುಬ್ಬು ಕೋನಾರಿ ಬೇವಿನಮರದಡಿ ಕಟ್ಟಿದ ಹಸುವಿನ ಕೆಚ್ಚಲಲ್ಲಿ ಹಾಲನ್ನು ಕುಡಿಯುತ್ತಿದ್ದ ಕರುವನ್ನು ನೋಡಿ ಕೋಪದಿಂದ ಬೈಯುತ್ತಾ ಓಡಿಬಂದ. ಹಸುವಿನ ಕೆಚ್ಚಲಲ್ಲಿ ಸ್ವಲ್ಪವಾದರೂ ಹಾಲು ಬಿಡದೆ ಕುಡಿದುಬಿಟ್ಟ ಸಂತೋಷದಿಂದ, ಬಾಯಿಂದ ಹಾಲು ನೊರೆ ಬರುತ್ತಿರಲು ಕುಣಿದಾಡುತ್ತಿತ್ತು ಆ ಕರು. ಹಸು, ಕೋನಾರಿಯನ್ನು ಕಳ್ಳ ಮನಸ್ಸಿನಿಂದ ನೋಡಿತು. ಕೋಪಗೊಂಡ ಕೋನಾರಿ ಹಸುವಿನ ಕಾಲಿಗೆ ಕಟ್ಟಿದ್ದ ಹಗ್ಗ

ವನ್ನು ಬಿಚ್ಚಿ ಫಟಾರನೆ ಒಂದೇಟು ಬಿಟ್ಟ. ಮುಂದಿನ ಎರಡೇಟು ಕರುವಿಗೆ. ಹಸು ಮತ್ತು ಕರು ಒಂದನ್ನೊಂದು ಅಟ್ಟಿಸಿಕೊಂಡು ಕಾಂಪೌಂಡ್ ಬಾಗಿಲಾಚೆ ಓಡಿದುವು.

ಕೈಯಲ್ಲಿ ಹಾಲಿನ ಚೆಂಬಿನೊಂದಿಗೆ ಹೊರಗೆ ಬಂದ ಸೀತಮ್ಮನನ್ನು ನೋಡಿ ಸುಬ್ಬು ಕೋನಾರಿ ಕೂಗಿದ: "ಹಾಲೂ ಇಲ್ಲ, ಏನೂ ಇಲ್ಲ, ಹೋಗೀಮ್ಮ... ಕರು ಎಲ್ಲಾ ಕುಡಿದಾಯಿತು... ಈ ಕಳ್ಳನ ಮುಖ ದರ್ಶನವಾಯಿತಲ್ಲಾ" ಎಂದು ಹೇಳಿಕೊಂಡೇ ಇದೇ ಸಂದರ್ಭವೆಂದು ಅವನೂ ಅಲ್ಲಿಂದ ಕಾಲ್ತೆಗೆದ.

ಜಗುಲಿಯ ಮೇಲೆ ಕುಳಿತು ವೀಳೆಯದೆಲೆ ಜಗಿಯುತ್ತಿದ್ದ ಕುಂಜುಮಣಿ. "ಮಧ್ವಾಪ್ನ ಸ್ವಲ್ಪ ಬೇಗ ಬಂದುಬಿಡು" ಎಂದು ಕೂಗಿ ಹೇಳಿದರು. 'ಅದರೊಳಗೆ ಇಲ್ಲಿ ಏನೇನು ನಡೆದೀತೋ?' ಎಂದು ನೆನೆದು ಭೀತಿಯುಂಟಾಗಿತ್ತು.

ಸ್ವಲ್ಪ ಹೊತ್ತಿಗೆಲ್ಲಾ ಆ ಕಾಲೊನಿ ಪೂರ್ತಿ ಆರು ತಿಂಗಳ ಹಿಂದೆ ಒಂದು ದಿನ ಉದಯ ಕಾಲದಲ್ಲಿ ಎಲ್ಲಿಯೋ ಕದ್ದು ತಪ್ಪಿಸಿಕೊಂಡು ಓಡಿ, ಗೋಡೆ ಹತ್ತಿ ಧುಮುಕಿ. ಇಲ್ಲೆ ಸಿಕ್ಕಿ ಕೊಂಡು, ಎಲ್ಲರಿಂದ ಒಂದೊಂದೇಟು ತಿಂದು ಪೋಲೀಸರಿಗೆ ಒಪ್ಪಿಸಲ್ಪಟ್ಟ, ಆರು ತಿಂಗಳು ಜೈಲುವಾಸ ಅನುಭವಿಸಿದ, ಒಬ್ಬ ಹಳೆಯ ಕೇಡಿ, ಇಲ್ಲಿದ್ದ, ಇಷ್ಟು ದಿನ ಖಾಲಿ ಯಾಗಿದ್ದ, ಇದಕ್ಕೆ ಮುಂಚೆ ಕಾಲೇಜಿನ ವಿದ್ಯಾರ್ಥಿಯೊಬ್ಬ ವಾಸಿಸಿ ಓದಿಕೊಂಡಿದ್ದ ಆ ಕಡೆಯ ಪೋರ್ಷನ್‌ನಲ್ಲಿ ವಾಸಕ್ಕೆ ಬಂದಿದ್ದಾನೆ ಎಂದು ಸುದ್ದಿ ಹರಡಿತು.

ಜಗುಲಿಯ ಮೇಲೆ ಕುಳಿತಿದ್ದ ಕುಂಜುಮಣಿ ವೀಳೆಯದೆಲೆಯನ್ನು ಅಗಿಯುತ್ತಾ ಆ ಕಳ್ಳನ ಬಗ್ಗೆ ಭಯಂಕರ ಕಲ್ಪನೆಗಳನ್ನು ಬೆಳೆಸಿಕೊಂಡು ಹೋಗುತ್ತಿದ್ದರು. ಆ ಕಾಲೋನಿ ಯಲ್ಲಿ ತಿರುಗುವ ಒಬ್ಬೊಬ್ಬರನ್ನೂ ಅವರು ಅವನೊಂದಿಗೆ ಸಂಬಂಧ ಕಲ್ಪಿಸಿ ನೋಡಿದರು. ಹೌದು ಅವರಿಗೆಲ್ಲಾ ಅವನೊಂದಿಗೆ ಏನಾದರೊಂದು ವಿಧದಲ್ಲಿ ಸಂಬಂಧವಿದ್ದೇ ಇತ್ತು. ಹಾಲಿನ ಪಾತ್ರೆಯಿಂದ ಅವನ ಕಪಾಳಕ್ಕೆ ಹೊಡೆದ ಮೂಲಕ ಅವನೊಂದಿಗೆ ಕನಿಷ್ಟ ಸಂಬಂಧ ಹೊಂದಿದವರು ತಾವು ಮಾತ್ರ ಎಂದು ಅವರಿಗೆ ಸ್ವಲ್ಪ ಸಮಾಧಾನವಿತ್ತು. ಬೇರೆಯವರೆಲ್ಲಾ ಅವನನ್ನು ತಮ್ಮ ಆಸೆಯಿದ್ದಷ್ಟು ಮನಸ್ಸಿಗೆ ಬಂದಷ್ಟು ಹೊಡೆದರು ಎಂಬುದನ್ನು ಅವರು ತಮ್ಮ ಮನಸ್ಸಿನ ಕಣ್ಣಲ್ಲಿ ಕಂಡು ಆ ಏಟುಗಳೆಲ್ಲಾ ಅವರಿಗೆ ಅಸಲು ಬಡ್ಡಿಯೊಂದಿಗೆ ಹಿಂತಿರುಗಿ ಪಾವತಿಯಾಗುವುದನ್ನು ಕಲ್ಪಿಸಿಕೊಂಡು ಭೀತಿ ಗೊಂಡರು.

'ಆ ಹದಿನೇಳನೆ ನಂಬರ್ ಮನೆಯಲ್ಲಿ ವಾಸವಾಗಿದ್ದಾನಲ್ಲಾ, ಪೋಸ್ಟಾಫೀಸಿನಲ್ಲಿ ಕೆಲಸ ಮಾಡುವ ನಾಯಿಡು – ಸೈಕಲ್ ಮೇಲೆ ಬಂದವನು – ಸೈಕಲ್ಲಿನ ಮೇಲೆ ಕುಳಿತಿ ದ್ದಂತೆಯೆ, ಒಂದು ಕಾಲನ್ನು ನೆಲದ ಮೇಲೆ ಊರಿ ನೆಗೆದು ಇನ್ನೊಂದು ಕಾಲಿನಿಂದ ಎದೆಗೆ ಒದ್ದನಲ್ಲಾ... ಹಾಗೆಯೇ ಎಮ್ಮೆ ಕೂಗಿಕೊಳ್ಳುವಂತೆ ಐದು ನಿಮಿಷ ಉಸಿರುಗಟ್ಟಿ, ಬಾಯಿತೆರೆದು ನೋವಿನಿಂದ ಅರಚಿದಾಗ ಇನ್ನು ಇವನು ಬದುಕಲಾರ ಎಂದುಕೊಂಡೆ... ಈಗ ಹಿಂತಿರುಗಿ ಬಂದಿದ್ದಾನೆ! ಅವನನ್ನು ಇವನು ಸುಮ್ಮನೆ ಬಿಟ್ಟಾನೆಯೆ? ಇವನು

ಬರೀ ಕಳ್ಳನಾಗಿರುತ್ತಾನೇನು? ದೊಡ್ಡ ಕೊಲೆಗಾರನಾಗಿಯೂ ಇರುವಂತಿದೆಯಲ್ಲಾ... ಎಂಬ ಅವರ ನೆನಕೆಯನ್ನು ಊರ್ಜಿತಗೊಳಿಸುವಂತೆ ಅವನು ಆ ಕಡೆಯ ಮನೆಯಿಂದ ಕೈಯಲ್ಲಿ ಕತ್ತಿಯೊಂದಿಗೆ ಇಳಿದು ಬಂದ. ಈಗ ಮೇಲೆ ಆ ಮಸ್ಲಿನ್ ಜುಬ್ಬಾ ಕೂಡ ಇಲ್ಲ. ನೆಟ್ ಬನಿಯನ್ ಮೇಲೆ ಕುತ್ತಿಗೆಯ ವರೆಗೆ ಎದೆಯ ರೋಮ ಅಪಾರವಾಗಿ ಬೆಳೆದಿತ್ತು. ತೋಳು ಕೊರಳು ಘೆಂಡಾಮೃಗದಂತೆ ಮದಿಸಿದ್ದುವು.

'ಅಯ್ಯಯ್ಯೋ... ಕತ್ತಿ ಬೇರೆ ಎತ್ತಿಕೊಂಡು ಬರುತ್ತಿದ್ದಾನಲ್ಲ... ನಾನು ಬರೀ ಹಾಲು ಪಾತ್ರೆಯಿಂದ ತಾನೆ ಹೊಡೆದೆ... ಇಲ್ಲೇ ಬರುತ್ತಿದ್ದಾನೆ' ಎಂದೆಣಿಸಿದ ಕುಂಜುಮಣಿ ಜಗುಲಿಯಿಂದ ಇಳಿದು ಏನೋ ಕೆಲಸದ ಮೇಲೆ ಹೋಗುವವರಂತೆ ಬೇಗನೆ ಬಾಗಿಲು ಹಾಕಿಕೊಂಡರು. ಅವರ ಮನಸ್ಸು ಅದರೊಂದಿಗೆ ಸಮಾಧಾನಗೊಳ್ಳಲಿಲ್ಲ. ಕೋಣೆಗೆ ಹೋಗಿ ಕಿಟಕಿಯ ಮೂಲಕ ನೋಡಿದರು.

ಅವನು ಬೇವಿನಮರದ ಮುಂದೆ ಬಂದು ನಿಂತಿದ್ದ. ಬೇವಿನಮರ ಕುಂಜುಮಣಿಯ ಮನೆಯ ಎದುರಿಗೇ ಇತ್ತು. ಅಂದರೆ ಅವನು ಕುಂಜುಮಣಿ ಮನೆಯ ಮುಂದೆ ನಿಂತಿದ್ದ ಎಂದಾಯಿತು.

"ಏನಪ್ಪಾ... ಯಾವನಾವನೋ ದನವನ್ನು ಹೊಡೆದಂತೆ ನಿನ್ನನ್ನು ಹೊಡೆದರು. ಅವರನ್ನೆಲ್ಲಾ ಬಿಟ್ಟು ನನ್ನ ಹಿಂದೆಯೇ ಬರುತ್ತಿದ್ದೀಯಲ್ಲ...? ಈ ನನ್ನ ತಾಯಿ ಬೇರೆ ನಿನಗೆ ಕೋಪ ಬರುವಂತೆ ಮಾತನಾಡಿದರು. ನನಗೆ ಅರ್ಥವಾಗುತ್ತೆ... ಮನುಷ್ಯನಿಗೆ ಕೋಪ ಬಂದುಬಿಟ್ಟರೆ ಸೇಡು ತೀರಿಸಿಕೊಳ್ಳದಿದ್ದರೆ ಸಮಾಧಾನವಾಗದು. ಅದೂ ನಿನ್ನಂತಹವನಿಗೆ ಒಂದಕ್ಕೆ ಹತ್ತು ಪಟ್ಟು ತೀರಿಸಿಕೊಳ್ಳಬೇಕೆನಿಸುತ್ತದೆ. ಬೇಕಾದರೆ ನಾನು ಈಗಲೇ ಓಡಿಹೋಗಿ, ಆ ಕೋಣಾರಿಯ ಬಳಿ ಹಾಲಿನ ಚೆಂಬನ್ನು ತೆಗೆದುಕೊಂಡು ಬಂದು ನಿನ್ನ ಕೈಯಲ್ಲಿ ಕೊಡುತ್ತೇನೆ. ಅದೇ ರೀತಿ ನನ್ನ ಕಪಾಳಕ್ಕೆ ಮೆಲ್ಲನೆ ಒಂದೇಟು ಬಿಡು. ಅಷ್ಟಕ್ಕೆ ಬಿಟ್ಟುಬಿಡು... ಯಾಕೆ ಕೈಯಲ್ಲಿ ಕತ್ತಿಯನ್ನೂ ಹಿಡಿದುಕೊಂಡು ಅಲೆಯು ತ್ತೀಯೆ?" ಎಂದು ಮಾನಸಿಕವಾಗಿ ಕೇಳಿಕೊಂಡರು ಕುಂಜುಮಣಿ.

ಆ ಸಮಯ ನೋಡಿ, ಪೋಸ್ಟಾಫೀಸಿನಲ್ಲಿ ಕೆಲಸ ಮಾಡುವ ಆ ಹದಿನೇಳನೇ ನಂಬರು ಮನೆಯ ಮನುಷ್ಯ ಬೈಸಿಕಲ್‌ನ್ನು ಎತ್ತಿಕೊಂಡು ಬಾಗಿಲಲ್ಲಿ ಇಳಿಯುವುದನ್ನು ನೋಡಿದ. 'ಅಯ್ಯೋ ಕೇಡುಗಾಲವೇ ಮನೆಯೊಳಗೆ ಹೋಗಪ್ಪ. ನಿನ್ನ ಕಾಲನ್ನೇ ಕತ್ತರಿಸಿಬಿಡುತ್ತಾನೆ' ಎಂದು ಕೂಗಿ ಹೇಳಬೇಕೆನಿಸಿತು ಕುಂಜುಮಣಿಗೆ.

'ಯಾವ ಮನೆಯಲ್ಲಿ ಯಾವನು ಕುಟುಂಬ ಹೂಡಿದರೆ ನನಗೇನು?' ಎಂಬಂತೆ ಅಸಡ್ಡೆ ಯಿಂದ ಬೈಸಿಕಲ್ ಏರಿದ ಹದಿನೇಳನೇ ನಂಬರಿನ ಮನೆಯವನು ಬೇವಿನ ಮರದಡಿ ಕೈಯಲ್ಲಿ ಕತ್ತಿ ಹಿಡಿದು ನಿಂತಿದ್ದವನನ್ನು ನೋಡುತ್ತಲೂ ಫೆಡಲನ್ನು ಹಿಂದಕ್ಕೆ ತುಳಿದ – ಸೈಕಲ್ ವೇಗವನ್ನು ಕಡಿಮೆಮಾಡಿದ. ಕುಂಜುಮಣಿಯ ಕಣ್ಣುಗಳು ಕಳ್ಳನ ಕೈಯಲ್ಲಿದ್ದ ಕತ್ತಿಯನ್ನು ದೃಷ್ಟಿಸಿತು. ಅವನು ಆ ಕತ್ತಿಯಲ್ಲಿ ಏನೋ ಒತ್ತಿದಾಗ ಫಟಕ್ಕನೆ ಅರ್ಧ

ಅಡಿ ಉದ್ದ ಫಳಫಳವೆಂದು ಅದರೊಳಗೆ ಮಡಿಸಿಕೊಂಡಿದ್ದ ಉಕ್ಕಿನ ಕತ್ತಿ ಹೊರಗೆ ಬಂದು ಮಿಂಚಿತು. ನಡೆಯಲಿರುವ ಕೊಲೆಯನ್ನು ನೋಡಬೇಕಲ್ಲಾ ಎಂದು ಕಣ್ಣುಗಳನ್ನು ಮುಚ್ಚಿಕೊಂಡರು ಕುಂಜುಮಣಿ. ಆ ಹದಿನೇಳನೆ ನಂಬರು ಮನೆಯವನು ಬೈಸಿಕಲ್‌ನ್ನು ತಿರುಗಿಸಿಕೊಂಡು ಬಂದು ಅರ್ಧ ಸುತ್ತು ಹಾಕಿ ಮನೆಗೆ ಹಿಂತಿರುಗಿದ.

ಕುಂಜುಮಣಿ ಮೆಲ್ಲನೆ ಕಣ್ತೆರೆದು, ಹದಿನೇಳನೆ ನಂಬರು ಮನೆಯ ನಾಯಿಡು ಬೈಸಿಕಲ್ ನೊಂದಿಗೆ ಮನೆಗೆ ಹೋಗುವುದನ್ನು ಕಂಡರು : 'ಒಳ್ಳೆಯದು ತಪ್ಪಿಸಿಕೊಂಡೆ... ಮನೆ ಬಿಟ್ಟು ಹೊರಗೆ ಬರಬೇಡ. ಬಲಿ ಹಾಕಿಬಿಡುತ್ತಾನೆ, ಬಲಿ!'

ಅವನು ಬೇವಿನಮರದಡಿ ನಿಂತು ಕೈಗಳಿಂದ ಒಂದು ಕೊಂಬೆಯನ್ನು ಹಿಡಿದೆಳೆದು ಒಂದು ಕಡ್ಡಿಯನ್ನು ಕತ್ತರಿಸಿದ. ನಂತರ ಅದರಲ್ಲಿದ್ದ ಎಲೆಗಳನ್ನು ತೆಗೆದುಹಾಕಿ ಕಡ್ಡಿಯನ್ನು ಚೆಚ್ಚಿ ಬಾಯಲ್ಲಿಟ್ಟುಕೊಂಡು ಹಲ್ಲುಗಳನ್ನು ಉಜ್ಜಿಕೊಂಡು ನಡೆದ. ಅವನು ದೃಷ್ಟಿಯಿಂದ ಮರೆಯಾಗುತ್ತಲೂ, ಕುಂಜುಮಣಿ ಮನೆಯ ಬಾಗಿಲನ್ನು ತೆರೆದುಕೊಂಡು ಬಂದು ಜಗುಲಿಯ ಮೇಲೆ ಕುಳಿತು ವೀಳೆಯದೆಲೆ ಹಾಕತೊಡಗಿದರು.

ಅವನೂ ತನ್ನ ಮನೆಯ ಜಗುಲಿಯ ಮೇಲೆ ಕುಳಿತು ಬಹಳ ಕಾಲ ಹಲ್ಲುಜ್ಜಿದ. ಅವನು ಬೇವಿನಮರದಡಿ ನಿಂತಿದ್ದಾಗ, ಕೆಲವು ಹೆಣ್ಣುಮಕ್ಕಳು ಅವಸರ ಅವಸರವಾಗಿ ಆ ಕಡೆಯ ಮನೆಯ ಬಳಿಯಿದ್ದ ಕೊಳಾಯಿ ಬಳಿ ನೀರು ಹಿಡಿದುಕೊಂಡು ವೇಗವಾಗಿ ಹೆಜ್ಜೆಹಾಕಿದರು. ಅವನು ಮತ್ತೆ ಜಗುಲಿಯಲ್ಲಿ ಕುಳಿತುಕೊಂಡುದು, ಕೊಳಾಯಿಯಿಂದ ನೀರು ತುಂಬಿ ಹೊರ ಚೆಲ್ಲುತ್ತಿದ್ದ ಕೊಡವನ್ನು ಎತ್ತಿಕೊಳ್ಳುವುದಕ್ಕೆ ಯಾರೂ ಬರದಿದ್ದುದನ್ನು ಕಂಡು ಅವನೇ ಎದ್ದು ಒಳಗೆ ಹೋದ.

ಅಲ್ಲಿದ್ದ ಅಷ್ಟು ಕುಟುಂಬದವರು ನೀರು ಹಿಡಿದುಕೊಂಡು ಕೊಳಾಯಿ ಸಮೀಪದಿಂದ ಹೊರಟು ಹೋಗುವವರೆಗೂ ಅವನು ಹೊರಗ ತಲೆಹಾಕಲಿಲ್ಲ.

ಆ ವೇಳೆಯಲ್ಲಿ ಕುಂಜುಮಣಿ ಒಂದೊಂದು ಮನೆಗೂ ಹೋಗಿ ಎಲ್ಲರನ್ನೂ ಭೇಟಿ ಮಾಡಿದರು. ಅವರೆಲ್ಲಾ ಕೆಲವರು ತಮ್ಮಂತೆಯೂ ಮತ್ತೆ ಕೆಲವರು ತನಗಿಂತ ಹೆಚ್ಚಿಗೆ. ಇನ್ನೂ ಕೆಲವರು ಸ್ವಲ್ಪ ಪೆದ್ದು ಧೈರ್ಯದಿಂದ ಭಯಭೀತರಾಗಿದ್ದುದನ್ನು ನೋಡಿದರು. ಒಬ್ಬೊಬ್ಬರನ್ನೂ "ಮನೆಯಲ್ಲಿ ಹೆಂಗಸರನ್ನು ಒಂಟಿಯಾಗಿ ಬಿಟ್ಟು ಹೊರಗೆ ಹೋಗ ಬೇಡಿ" ಎಂದು ವಿಜ್ಞಾಪಿಸಿಕೊಂಡರು ಕುಂಜುಮಣಿ.

"ಹೌದು ಹೌದು" – ಎಂದು ಅವರು ಅನುಮೋದಿಸಿದರು. ಕೆಲವರು ತಮಗೆ ಆಫೀಸುಗಳಲ್ಲಿ ರಜಾ ಕೊಡುವುದಿಲ್ಲವಲ್ಲ ಎಂಬ ಕಾರಣಕ್ಕಾಗಿ ಮೇಲಧಿಕಾರಿಗಳನ್ನು ನಿಂದಿಸುತ್ತಾ ಹೋಗುವಾಗ ಮನೆಯಲ್ಲಿ ಸುರಕ್ಷಿತವಾಗಿರುವಂತೆ ಹೇಳಿ ಭಯಪಟ್ಟುಕೊಂಡೇ ಆಫೀಸುಗಳಿಗೆ ಹೋದರು.

ಹಾಗೆ ಹೋದವರಲ್ಲಿ ಒಬ್ಬರಾದ ತಹಸೀಲ್ದಾರ್ ಆಫೀಸಿನ ಹೆಡ್ ಗುಮಾಸ್ತೆ ದೈವಸಹಾಯಂ ಪಿಳ್ಳೈ ತಮ್ಮ ಸ್ನೇಹಿತರೊಬ್ಬರು ಅದೇ ಊರಿನ ಪೋಲೀಸ್

ಸ್ಟೇಷನ್ನಿನಲ್ಲಿ ರೈಟರ್ ಆಗಿರುವುದು ಜ್ಞಾಪಕಮಾಡಿಕೊಂಡು ಆಫೀಸಿಗೆ ಹೋಗುವಾಗ ಒಂದು ಕಂಪ್ಲೈಂಟನ್ನೂ ದಾಖಲೆ ಮಾಡಿಹೋದರು.

ಬೆಳಿಗ್ಗೆ 11 ಗಂಟೆಯವರೆಗೆ ಅವನು ಹೊರಗೆ ಬರಲಿಲ್ಲ. ಕೊಳಾಯಿ ಬಳಿ ಯಾರೂ ಇಲ್ಲ. ಬೇರೆಯವರಿಗೆ ಅಲ್ಲಿ ಕೆಲಸವೇನೂ ಇಲ್ಲ ಎಂದು ನಿಶ್ಚಯಮಾಡಿಕೊಂಡು ಅವನು ಸ್ನಾನಕ್ಕಾಗಿ ಹೊರಗೆ ಬಂದ.

ಮನೆಗೆ ಬೀಗ ಹಾಕದೆಯೇ ಬಾಗಿಲು ತೆಗೆದುಹಾಕಿ ಆ ಕಾಲೋನಿಯ ಕಾಂಪೌಂಡ್ ಪಕ್ಕದಲ್ಲಿ ಇದ್ದ ಪೆಟ್ಟಿಗೆ ಅಂಗಡಿಗೆ ಹೋಗಿ ಬಟ್ಟೆ ಒಗೆಯುವ ಸೋಪು, ಒಂದು ಕಟ್ಟು ಬೀಡಿಯನ್ನೂ ತೆಗೆದುಕೊಂಡು ಬಂದ.

ಸೊಂಟದಲ್ಲಿ ಟವಲು ಪಟ್ಟೆ, ಲುಂಗಿ, ಬನಿಯನ್, ಜುಬ್ಬಾ ಎಲ್ಲವನ್ನೂ ಕೊಳಾಯಿ ಕೆಳಗೆ ಹಾಕಿ ಸೋಪಿನಿಂದ ಒಗೆದ. ಒಗೆದ ಬಟ್ಟೆಗಳನ್ನು ಬೇವಿನ ಮರದ ಕೊಂಬೆಗಳಲ್ಲಿ ಒಣಗಲು ಕಟ್ಟಿದ.

ಕಾಲೊನಿಯಲ್ಲಿ ಜನಸಂಚಾರವಿಲ್ಲ. ಎಲ್ಲರೂ ಅವರವರ ಮನೆಗಳಲ್ಲಿ ಅಡಗಿಕೊಂಡಿದ್ದರು. ಬಟ್ಟೆಗಳನ್ನು ಒಣಗಿಸಲು ಹಾಕಿ ಬಂದ ಅವನು ಕೊಳಾಯಿ ಕೆಳಗೆ ಕುಳಿತು ಭರ್ರನೆ ಬರುತ್ತಿದ್ದ ನೀರಿನಲ್ಲಿ ಬಹಳ ಹೊತ್ತು ಸ್ನಾನ ಮಾಡಿದ.

ಥಟ್ಟನೆ—

"ಮಾವ... ನಿಮ್ಮ ಬನಿಯನ್ ಮಣ್ಣಿನ ಮೇಲೆ ಬಿತ್ತು..." ಎಂಬ ಎಳೆಯ ಕಂಠವನ್ನು ಕೇಳಿ ತಿರುಗಿ ನೋಡಿದಾಗ ನಾಲ್ಕು ವರ್ಷ ವಯಸ್ಸಿನ ಹೆಣ್ಣುಮಗುವೊಂದು ಸೊಂಟದಲ್ಲಿ ಕಾಚಾ ಹಾಕಿಕೊಂಡಿದ್ದವಳು ಮಣ್ಣಿನಲ್ಲಿ ಬಿದ್ದಿದ್ದ ಅವನ ಬನಿಯನನ್ನು ಕೈಯಲ್ಲಿ ಹಿಡಿದು ನಿಂತಿತ್ತು.

ಆಗ ಅವನಿಗೆ ಭಯವಾಯಿತು.

ತನ್ನೊಂದಿಗೆ ಇಷ್ಟು ಸಮೀಪ ಓಡಾಡುವ ಈ ಮಗುವನ್ನು ಯಾರಾದರೂ ನೋಡಿಬಿಟ್ಟರೋ ಎಂದು ಸುತ್ತಮುತ್ತ ಕಳ್ಳನಂತೆ ನೋಡಿದ.

"ನೀನು ಇಲ್ಲಿ ಕದಿಯುವುದಕ್ಕೆ ಬಂದಿರುವ ಹೊಸ ಮಾವನೇ...? ನಿನ್ನನ್ನು ನೋಡ ಕೂಡದೆಂದು ಅಮ್ಮ ರೂಮಿನಲ್ಲಿ ನನ್ನನ್ನು ಕೂಡಿಹಾಕಿದ್ದರು... ಅವರು ನಿದ್ರೆ ಮಾಡುತ್ತಿದ್ದಾಗ ನಾನು ಮೆಲ್ಲನೆ ಬಂದುಬಿಟ್ಟೆ. ನನಗೆ ಮಿಠಾಯಿ ತೆಗೆದು ಕೊಡುತ್ತೀಯಾ? ಕದ್ದುಕೊಂಡು ಬಂದುಬಿಡು. ಆ ಪೆಟ್ಟಿಗೆ ಅಂಗಡಿಯಲ್ಲಿ ಬಹಳ ಇದೆ..."

ಅವನು ನಕ್ಕ. ಆ ಮಗುವಿನ ಕೆನ್ನೆಯನ್ನು ಮುಟ್ಟಿದಾಗ ಅವನಿಗೆ ಅಳು ಬಂದಿತು. ಅವಸರವಸರವಾಗಿ ಮೈ ಒರೆಸಿಕೊಂಡು ಸೊಂಟಕ್ಕೆ ಸುತ್ತಿದ ಟವಲಿನೊಂದಿಗೆ ಪೆಟ್ಟಿಗೆ ಅಂಗಡಿಗೆ ಹೋದ

ಅವನು ಹೋಗುವಾಗ ಟವಲನ್ನು ಹಿಡಿದೆಳೆದು ರಹಸ್ಯವಾಗಿ ಹೇಳಿತು ಆ ಮಗು: "ಅಮ್ಮ ನೋಡಿದರೆ ಹೊಡೆಯುತ್ತಾರೆ. ಬೇಗನೆ ಹೋಗಿ ಅವನಿಗೆ ಗೊತ್ತಾಗದಂತೆ

ಮಿಠಾಯಿ ತೆಗೆದುಕೊಂಡು ಓಡಿ ಬಂದುಬಿಡು. ನಾನು ನಿನ್ನ ಮನೆಯಲ್ಲಿ ಅವಿತು ಕೊಂಡಿರುತ್ತೇನೆ..."

ಅವನೂ ಮಗುವಿನಂತೆ ತಲೆಯಾಡಿಸಿ ಅಂಗಡಿಗೆ ಓಡಿದ. ಒಂದೇ ಕ್ಷಣದಲ್ಲಿ ಓಡಿ ಹೋಗಿ ಕೈತುಂಬಾ ಚಾಕಲೇಟನ್ನು ಮುಡಿಯಲ್ಲಿ ಕಟ್ಟಿಕೊಂಡು ಬಂದ

ಕಳ್ಳನೆಂಬ ತನ್ನ ರಹಸ್ಯವನ್ನು ಹಂಚಿಕೊಳ್ಳಲು ಒಂದು ಜೊತೆ ಸಿಕ್ಕಿದ ಸಂತೋಷ ಅವನಿಗೆ 'ಇದು ನಿನ್ನ ಮನೆ' ಎಂಬ ಹಕ್ಕನ್ನು ಈ ಸಮುದಾಯವೇ ಆ ಮಗುವಿನ ರೂಪದ ಬಂದು ನೀಡಿದಂತಹ ಉತ್ಸಾಹ.

ಆ ಸಂತೋಷದಲ್ಲಿ ಓಡಿಬಂದ ಅವನು ಮನೆಯೊಳಗೆ ಮಗುವನ್ನು ಕಾಣದೆ ಒಂದು ಕ್ಷಣ ಕಾತರಗೊಂಡ. 'ಯಾರಾದರೂ ಬಂದು ಹೊಡೆದೆಳೆದುಕೊಂಡು ಹೋದರೋ? ಎಂದು ಅವನ ಹೃದಯಕ್ಕೆ ಸಣ್ಣ ಆಘಾತವಾಯಿತು.

"ಮಗೂ... ಮಗೂ..." ಎಂದು ಕಾತರದಿಂದ ಎರಡು ಬಾರಿ ಕರೆದ.

'ಉಸ್' ಎಂದು ತುಟಿಯ ಮೇಲೆ ತೋರು ಬೆರಳನ್ನು ತೋರಿ ಶಬ್ದಮಾಡಿ ಬಾಗಿಲ ಹಿಂದೆ ಅವಿತುಕೊಂಡು, ಕಾದುಕೊಂಡಿದ್ದ ಮಗು ಹೊರಗೆ ಬಂದಿತು.

"ಇಲ್ಲೇ ಇದ್ದೇನೆ... ಬೇರೆ ಯಾರೋ ಬಂದರೇನೋ ಎಂದು ಭಯವಾಯಿತು, ಕುಳಿತುಕೋ" – ಎಂದು ಅವನನ್ನು ಎಳೆದು ಕೂಡಿಸಿ ತಾನೂ ಕುಳಿತುಕೊಂಡಿತು ಮಗು.

ಮಗುವಿನ ಕೈತುಂಬ ತುಂಬಿ ನೆಲಕ್ಕೂ ಬೀಳುವಂತೆ ಅವನು ಚಾಕಲೇಟನ್ನು ಹಾಕಿದ.

"ಎಲ್ಲಾ ನನಗೇನು?"

"ಉಂ..."

ಎರಡು ಮೂರು ಚಾಕಲೇಟುಗಳನ್ನು ಒಮ್ಮೆಗೇ ತೆಗೆದು ಬಾಯಲ್ಲಿ ತುರುಕಿಕೊಂಡ ಮಗುವಿನ ತುಟಿಗಳಲ್ಲಿ ಸಿಹಿಯ ಜೊಲ್ಲು ಸುರಿಯಿತು.

"ಇದೋ ನಿನಗೊಂದು" ಎಂದು ಬಹಳ ಧಾರಾಳವಾಗಿ ಒಂದು ಚಾಕಲೇಟನ್ನು ಅವನಿಗೂ ಕೊಟ್ಟಾಗ—

"ರಾಜೀ... ರಾಜೀ..." ಎಂದು ಕರೆ ಕೇಳಿ ಮಗು ಎಚ್ಚರಿಕೆಯಿಂದ ಎದ್ದು ನಿಂತು ಕೊಂಡಿತು.

"ಅಮ್ಮಾ ಹುಡುಕುತ್ತಿದ್ದಾರೆ..." ಎಂದು ಅವನೊಂದಿಗೆ ಹೇಳಿ 'ಅಮ್ಮಾ ಇಲ್ಲೇ ಇದ್ದೇನೆ' ಎಂದು ಕೂಗಿ ಹೇಳಿತು ಮಗು.

"ಎಲ್ಲಿದ್ದೀಯೆ?"

"ಇಲ್ಲೇ... ಕದಿಯುವುದಕ್ಕೆ ಬಂದಿದ್ದಾರಲ್ಲಾ ಹೊಸ ಮಾವ ಅವರ ಮನೆಯಲ್ಲಿದ್ದೇನೆ."

ಅವನಿಗೆ ನಗು ಬಂತು. ಚಾಕಲೇಟನ್ನು ಬಾಚಿ ಮಗುವಿನ ಕೈಯಲ್ಲಿ ಕೊಟ್ಟು "ಅಮ್ಮಾ ಹೊಡೆಯುತ್ತಾರೆ. ಈಗ ಹೋಗಿಬಿಟ್ಟು ಆಮೇಲೆ ಬಾ" ಎಂದು ಹೇಳಿದ ಅವನು.

"ಮಿಠಾಯಿ ತೆಗೆದುಕೊಂಡು ಹೋದರೆ ಹೊಡೆಯುತ್ತಾರೆ... ಇದೋ ಗೂಡಿನಲ್ಲಿ ಎಲ್ಲಾ ತೆಗೆದಿಡು. ನಾನು ಆಮೇಲೆ ಬಂದು ತೆಗೆದುಕೊಳ್ಳುತ್ತೇನೆ. ಬೇರೆ ಯಾರಿಗೂ ಕೊಡಬೇಡ. ರಮೇಶನಿಗೂ ಕೂಡ..."

ಮಗು ಹೊರಟುಹೋದ ಸ್ವಲ್ಪ ಹೊತ್ತಿಗೆಲ್ಲಾ ಬೇವಿನ ಮರದ ಕೊಂಬೆಗೆ ಕಟ್ಟಿ ಒಣಗಿಹಾಕಿದ್ದ ಬಟ್ಟೆಗಳನ್ನು ಬಿಚ್ಚಿ ಉಟ್ಟುಕೊಂಡು, ಊಟ ಮಾಡುವುದಕ್ಕಾಗಿ ಹೊರಗೆ ಹೋದ.

ಮಧ್ಯಾಹ್ನ ಎರಡು ಗಂಟೆಗೆ ಊಟಮಾಡಿ ಬಂದವನು ಬಾಗಿಲನ್ನು ತೆಗೆದುಹಾಕಿ ತಲೆದಿಂಬಿನಲ್ಲಿ ಬೀಗದ ಕೈಗೊಂಚಲು, ಕತ್ತಿ, ಬೀಡಿ ಕಟ್ಟು, ಹಣ ತುಂಬಿದಚೀಲವುಳ್ಳ ಬೆಲ್ಟು ಮೊದಲಾದುವನ್ನು ಇಟ್ಟು, ಸ್ವಲ್ಪ ಹೊತ್ತು ಮಲಗಿ ನಿದ್ರೆ ಮಾಡಿದ.

ನಾಲ್ಕು ಗಂಟೆ ವೇಳೆಗೆ ಯಾರೋ ತನ್ನನ್ನು ಒಂದು ಕಡ್ಡಿಯಿಂದ ಚುಚ್ಚಿ ಎಬ್ಬಿಸುವುದನ್ನು ಅರಿತು ಕೆಂಪಾದ ಕಣ್ಣುಗಳನ್ನು ತೆರೆದು ನೋಡಿದ. ಎದುರುಗಡೆ ಪೋಲೀಸಿನವನು ನಿಂತಿದ್ದುದನ್ನು ಕಂಡು ಎದ್ದು ನಿಂತು ನಮಸ್ಕಾರ ಮಾಡಿದ.

ಕೊಳಾಯಿಯ ಸಮೀಪ ಕುಂಜುಮಣಿ, ಕೋನಾರಿ, ಸೀತಮ್ಮ ಇವರ ನೇತೃತ್ವದಲ್ಲಿ ಒಂದು ಗುಂಪಿಗೆ ಗುಂಪೇ ನಿಂತಿತ್ತು.

ಪೋಲೀಸಿನವರಿಗೆ ನಮಸ್ಕರಿಸಿದ ನಂತರ ತನ್ನ ಬೆಲ್ಟಿನ ಪರ್ಸಿನಿಂದ ಆ ರಶೀತಿಯನ್ನು ತೆಗೆದು ಕೊಟ್ಟ.

"ಗೊತ್ತಪ್ಪ... ಮಹಾ ರಶೀತಿ... ಐವತ್ತು ರೂಪಾಯಿ ಕೊಟ್ಟು ಅಡ್ವಾನ್ಸ್ ಕಟ್ಟಿದರಾಯಿತೆ? ತಕ್ಷಣ ಯೋಗ್ಯನಾಗಿ ಬಿಟ್ಟಂತಾಯಿತೇ, ನೀನು? ಮರ್ಯಾದೆಯಾಗಿ ಈ ದಿನವೇ ಸ್ಥಳ ಖಾಲಿ ಮಾಡಬೇಕು. ಏನು? ನಾಳೆ ನೀನಿಲ್ಲಿ ಇನ್ನೂ ಇದ್ದೀಯೆಂತ ವರ್ತಮಾನ ಬಂತೋ, ಕುತ್ತಿಗೆ ಹಿಡಿದು ತಳ್ಳಿಬಿಟ್ಟೇನು... ಯಾವಾಗಲೋ ನೀನು ರಿಲೀಸ್ ಆದೆ?' ಎಂದು ಬೆದರಿಸಿದ ಪೋಲೀಸಿನವ.

"ಮೊನ್ನೆಯ ದಿನ ಸ್ವಾಮಿ"– ಎಂದು ಕೈಕಟ್ಟಿಕೊಂಡು ನಮ್ರನಾಗಿ ಉತ್ತರ ಕೊಟ್ಟ. ಅವನ ಕಣ್ಣುಗಳಲ್ಲಿ ನೀರೂರಿತ್ತು.

ಆಗ ಬೀದಿಯಲ್ಲಿ ಗಾಡಿಯಲ್ಲಿ ಹೋಗುತ್ತಿದ್ದ ಆ ಕಾಲೋನಿಯ ಯಜಮಾನರಾದ ಸೋಮಸುಂದರಂ ಮೊದಲಿಯಾರ್ ಅಲ್ಲಿ ಕೂಡಿದ್ದ ಗುಂಪನ್ನು ಕಂಡು ಗಾಡಿಯನ್ನು ನಿಲ್ಲಿಸಲು ಹೇಳಿದರು.

ಮೊದಲಿಯಾರನ್ನು ಕಂಡು ಕುಂಜುಮಣಿ ಓಡಿ ಓಡಿ ಬಂದರು.

"ಇದು ನಿಮಗೇ ಸರಿಯೆ? ನಾಲ್ಕಾರು ಕುಟುಂಬ ಇರುವ ಜಾಗದಲ್ಲಿ ಊರಿಗೆಲ್ಲಾ ತಿಳಿದಿರುವ ಕಳ್ಳನನ್ನು ತಂದಿಡಬಹುದೇ?"

ವಾಕಿಂಗ್ ಸ್ಟಿಕ್ಕನ್ನು ನೆಲದಲ್ಲಿ ಊರಿ, ಎಲ್ಲಿಯೋ ನೋಡುವವರಂತೆ ಮೀಸೆಯನ್ನು ಸವರಿಕೊಂಡು ನಿಂತರು ಮೊದಲಿಯಾರ್.

"ಅಯ್ಯೋ ಪೆದ್ದೆ ಅವನ ಬಗ್ಗೆ ಅವರಿಗೇನು ಗೊತ್ತು? ಕಳ್ಳ ಎಂದು ಗೊತ್ತಿದ್ದರೆ ಮನೆ ಕೊಟ್ಟಿರುತ್ತಿದ್ದರೆ? ಅದೇ ಪೋಲೀಸಿನವನು ಬಂದು ಈಗಲೇ ಮನೆ ಖಾಲಿ ಮಾಡಬೇಕೆಂದು ಹೇಳಿಯಾಯಿತಲ್ಲ. ಆಯಿತು ಬಿಡು ... ಅವರ ಬಳಿ ಯಾಕೆ ಕಂಪ್ಲೈಂಟ್?" ಕುಂಜುಮಣಿಯನ್ನು ಸೀತಮ್ಮ ಗದರಿಸಿಕೊಂಡರು.

ಮೊದಲಿಯಾರ್ ಅವರ ಕಣ್ಣುಗಳು ಕೆಂಪೇರಿದುವು. ಆ ಕಡೆಯ ಮನೆಯನ್ನು ಕುರಿತು ಅವರು ವೇಗವಾಗಿ ಹೆಜ್ಜೆ ಹಾಕಿದರು. ಅವರು ಬರುವುದನ್ನು ಕಂಡ ಪೋಲೀಸಿನವನು ಬಾಗಿಲಲ್ಲೇ ಅವರನ್ನು ಸ್ವಾಗತಿಸಿ ಸಲಾಂ ಹೊಡೆದ.

"ಇಲ್ಲಿ ನಿನಗೇನು ಕೆಲಸ?" ಎಂದು ಪೋಲೀಸಿನವನನ್ನು ನೋಡಿ ಗದರಿಸಿದರು ಮೊದಲಿಯಾರ್.

"ಇವನೊಬ್ಬ ಕೇಡಿ ಸಾರ್. ಸ್ಟೇಷನ್‌ಗೆ ಬಂದು ಕಂಪ್ಲೈಂಟ್ ಕೊಟ್ಟಿದ್ದರು. ಆದ್ದರಿಂದ ಖಾಲಿ ಮಾಡಲು ಹೇಳಿ ಹೋಗುತ್ತಿದ್ದೇನೆ."

ಮೊದಲಿಯಾರ್ ಅವನನ್ನೂ ಪೋಲೀಸಿನವನನ್ನು ಉಳಿದವರನ್ನೂ ಒಂದು ಬಾರಿ ನೋಡಿದರು.

"ನನ್ನ 'ಟೆನೆಂಟ್'ನ್ನು ಖಾಲಿ ಮಾಡೆಂದು ಹೇಳುವುದಕ್ಕೆ ನೀನು ಯಾರು? ಮೊದಲು "ಯು ಗೆಟ್ ಔಟ್"

ಮೊದಲಿಯಾರ್ ಕೋಪವನ್ನು ಕಂಡು ಪೋಲಿಸಿನವನು ನಡುಗಿ ಹೋದ.

"ಯಸ್ ಸರ್" – ಎಂದು ಇನ್ನೊಂದು ಬಾರಿ ಸಲಾಂ ಹಾಕಿದ.

"ಅಧಿಕಾರ ಇದೆಯೆಂದು ಅದರ ದುರುಪಯೋಗ ಮಾಡಬಾರದು. ಕಳ್ಳತನ ಮಾಡಿದಾಗ ಜೈಲಿಗೆ ಹೋದ. ಆಮೇಲೆ ಯಾಕೆ ಹೊರಗೆ ಬಿಟ್ಟರು? ಕಳ್ಳತನ ಮಾಡದಿರುವಾಗ ಅವನು ಹೋಗುವುದೆಲ್ಲಿಗೆ? ಅವನು ಕಳ್ಳತನ ಮಾಡಿದರೆ ಆಗ ಬಂದು ಹಿಡಿದುಕೊಂಡು ಹೋಗು" ಎಂದು ಹೇಳಿ ಪೋಲೀಸಿನವನನ್ನು ಮೊದಲಿಯಾರ್ ಹೊರಗೆ ಕಳುಹಿಸಿದರು.

"ಓಯ್, ಕುಂಜುಮಣಿ ಇಲ್ಲಿ ಬನ್ನಿ. ನಿಮ್ಮಂತೆ ಇವನೂ ನನಗೆ ಬಾಡಿಗೆದಾರ. ನನಗೆ ಬೇಕಾದದ್ದು ಬಾಡಿಗೆ. ಅದನ್ನು ನೀವು ಕಳ್ಳತನ ಮಾಡಿ ಕೊಡುತ್ತೀರೋ ಜೂಜಾಡಿ ಕೊಡುತ್ತೀರಾ ಎಂಬ ವಿಚಾರ ನನಗೆ ಅಕ್ಕರೆಯಿಲ್ಲ. ಅದೇ ರೀತಿ ಅವನ ಬಗ್ಗೆ ನನ್ನ ಚಿಂತೆಯಿಲ್ಲ, ನೀವು ಜೈಲಿಗೆ ಹೋದ ಕಳ್ಳನೊಬ್ಬನನ್ನು ನೋಡಿ ಭಯಪಡುತ್ತೀರಿ, ನಾನು ಜೈಲಿಗೆ ಹೋಗದ ಅನೇಕ ಕಳ್ಳರನ್ನು ನೋಡುತ್ತಿದ್ದೇನೆ. ಅವನು ಈಗ ಇಲ್ಲೇ ವಾಸಿಸಿಕೊಂಡಿರುತ್ತಾನೆ. ಸುಮ್ಮನೆ ಚಿಂತೆಪಟ್ಟು ಒದ್ದಾಡಬೇಡಿ" – ಎಂದು ಕುಂಜುಮಣಿಯನ್ನು ಕುರಿತು ಹೇಳಿ ಕೋನಾರಿಯ ಕಡೆಗೆ ತಿರುಗಿದರು.

"ಏನು ಕೋನಾರಿ... ನೀನೂ ಸೇರಿ ಯೋಗ್ಯನಂತೆ ಮಾತನಾಡುತ್ತೀಯಾ...? ನಾಲ್ಕು ವರ್ಷಕ್ಕೆ ಹಿಂದೆ ಹಾಲಿನಲ್ಲಿ ನೀರು ಸೇರಿಸಿದುದಕ್ಕೆ ನೀನು ದಂಡ ತೆತ್ತವನು ತಾನೆ...?" ಎಂದು ಕೇಳಿದಾಗ ಕೋನಾರಿ ತಲೆ ಕೆರೆದುಕೊಂಡ.

ಕಡೆಯದಾಗಿ ತನ್ನ ಹೊಸ ಬಾಡಿಗೆದಾರನೊಂದಿಗೆ ಮೊದಲಿಯಾರ್ ಹೇಳಿದರು :

"ಇದೋ, ನೋಡಪ್ಪ... ನಿನ್ನ ಹತ್ತಿರ ನಾನು ಕೈನೀಡಿ ಎರಡು ತಿಂಗಳ ಅಡ್ವಾನ್ಸ್ ತೆಗೆದುಕೊಂಡಿದ್ದೇನೆ. ರುಜುಮಾಡಿ ರಶೀದಿ ಕೊಟ್ಟಿದ್ದೇನೆ. ಯಾರಾದರೂ ಬಂದು ನಿನ್ನನ್ನು ಬೆದರಿಸಿದರೆ ಬಂದು ನನಗೆ ಹೇಳು. ನಾನು ವಿಚಾರಿಸಿಕೊಳ್ಳುತ್ತೇನೆ..." ಎಂದು ಹೇಳಿ ಗಾಡಿಯ ಕಡೆಗೆ ಹೊರಟರು ಮೊದಲಿಯಾರ್.

ಅಂದು ಮಧ್ಯಾಹ್ನ ರಾತ್ರಿಯ ವರೆಗೆ ಅವನು ಅಲ್ಲಿಯೇ ಇದ್ದ. ಯಾವಾಗ ಮನೆಗೆ ಬೀಗ ಹಾಕಿಕೊಂಡು ಹೊರಗೆ ಹೋದನೆಂದು ಯಾರಿಗೂ ತಿಳಿಯದು.

ಉದಯಕಾಲದಲ್ಲಿ ಹಾಲು ಕರೆಯಲು ಬಂದ ಕೋನಾರಿ ಅವನು ಒಳಗೆ ಇದ್ದಾನೆಂಬ ಭಯದಿಂದಲೇ ಹಾಲು ಕರೆದ.

ಕುಂಜುಮಣಿ ಈ ದಿನವೂ ಆ ಕಳ್ಳನ ದರ್ಶನವಾಗಬಾರದಲ್ಲ ಎಂಬ ಭಯದಿಂದ ಕಿಟಕಿಯನ್ನು ತೆಗೆದು ಹಸುವಿನ ದರ್ಶನ ಮಾಡಿದರು.

ಕೊಳಾಯಿ ಬಳಿಗೆ ನೀರು ಹಿಡಿಯಲು ಬಂದ ಹೆಂಗಸರು ಮಾತ್ರ ಆ ಮನೆಗೆ ಬೀಗ ಹಾಕಿದುದನ್ನು ಕಂಡು ಧೈರ್ಯವಾಗಿ ಅವನ ಬಗ್ಗೆ, ಮೊದಲಿಯಾರ್ ಬಗ್ಗೆ ವಿಮರ್ಶೆಯಿಂದ ಮಾತನಾಡಿಕೊಂಡರು. ಸೀತಮ್ಮನವರ ಧ್ವನಿ ಎಲ್ಲರಿಗಿಂತ ಮೇಲಿತ್ತು.

ಆ ಮನೆಗೆ ಬೀಗ ಹಾಕಿದೆ ಎಂಬುದನ್ನು ಅರಿತ ಕೋನಾರಿ, ಕುಂಜುಮಣಿ ನಿನ್ನೆ ರಾತ್ರಿ ಹೊಡೆದ ಕೊಳ್ಳೆಯಿಂದ ಅವನು ಹಿಂತಿರುಗಿ ಬರುವುದನ್ನೇ ನೋಡಲು ಕಾದಿದ್ದರು.

ಮಧ್ಯಾಹ್ನವಾಯಿತು. ಸಾಯಂಕಾಲವಾಯಿತು. ಮಾರನೆಯ ದಿನವೂ ಆಯಿತು...

ಎರಡು ದಿನಗಳಿಂದ ಅವನು ಬಾರದಿದ್ದುದನ್ನು ಕಂಡು, ಕೋನಾರಿ ಮತ್ತು ಕುಂಜುಮಣಿ, ಅವನು ಕಳ್ಳತನ ಮಾಡಲು ಹೋದ ಕಡೆ ಸಿಕ್ಕಿಕೊಂಡಿರಬೇಕು ಎಂದು ಅಪಾರ ಸಂತೋಷದಿಂದ ಮಾತನಾಡಿಕೊಂಡರು.

ಆ ನಾಲ್ಕು ವರ್ಷ ವಯಸ್ಸಿನ ಮಗು ಮಾತ್ರ ಒಂದು ದಿನ ಮಧ್ಯಾಹ್ನ ಬೀಗ ಹಾಕಿದ್ದ ಆ ಮನೆಯ ಜಗುಲಿ ಹತ್ತಿ ತೆರೆದಿದ್ದ ಕಿಟಕಿಯಿಂದ ಒಳಗೆ ನೋಡಿತು.

ಗೂಡಿನ ತುಂಬಾ ಇದ್ದ ಚಾಕಲೇಟುಗಳನ್ನು ಕಣ್ಣೀರಿಟ್ಟು ನೋಡಿತು.

"ಏಯ್ ಮಿಠಾಯಿ ಮಾವಾ ನೀನು ಬರುವುದಿಲ್ಲವಾ?" ಎಂದು ಕಣ್ಣುಗಳನ್ನು ಒರೆಸಿಕೊಂಡು ಒಂಟಿಯಾಗಿ ಅಳತೊಡಗಿತು ಮಗು.

# 12. ಶಿಲುಬೆ

ಟ್ರಂಕ್ ರಸ್ತೆಯಲ್ಲಿ ವಿಪರೀತ ಶಬ್ದ ಮಾಡುತ್ತಾ ಆ ಬಸ್ ಹೋಗುತ್ತಿತ್ತು. ತನಗೆ ಎದುರಾಗಿ ಮೂರು ಸಾಲಿನ ಆಚೆ ನಾಲ್ಕನೆಯ ಸಾಲಿನಲ್ಲಿ ಕಿಟಕಿಯ ಬಳಿ ಕುಳಿತಿದ್ದ ಆ ತರುಣನ ಪಕ್ಕದಲ್ಲಿ ತನ್ನ ದೃಷ್ಟಿ ತಿರುಗಬಾರದೆಂಬ ನಿಶ್ಚಯ ಮನಸ್ಸಿನಿಂದ, ಓಡುತ್ತಿದ್ದ ಬಸ್ಸನ್ನು ಕಿಟಕಿಯ ಮೂಲಕ, ದಾರಿಯ ಪಕ್ಕದ ದೃಶ್ಯಗಳನ್ನು ನೋಡುತ್ತಿದ್ದ ಆ ಕ್ರೈಸ್ತ ಭಗಿನಿಯ ನೋಟಕ್ಕೆ ಆ ದೃಶ್ಯ ಗೋಚರವಾಯಿತು.

ತಲೆಯಲ್ಲಿ ಹುಲ್ಲಿನ ಕಟ್ಟು, ಸೊಂಟದಲ್ಲಿದ್ದ ಕೈಮಗು ಆ ರೈತ ಹೆಣ್ಣಿನ ತೆರೆದಿದ್ದ ಎದೆಯಲ್ಲಿ ಮುಖ ಹುದುಗಿಸಿ ನಿದ್ರೆ ಮಾಡುತ್ತಿತ್ತು. ತಾಯಿಯ ಬಳಿ ಹಾಲು ಕುಡಿದುಕೊಂಡು ನಿದ್ರೆ ಮಾಡುತ್ತಿತ್ತು. ಸಾಯಂಕಾಲ ಬಾಗಿದ ಬಿಸಿಲು ಕಣ್ಣಿನಲ್ಲಿ ಬೀಳದಂತೆ ಒಂದು ಕೈಯಲ್ಲಿ ಮಗುವನ್ನು ಅಪ್ಪಿಕೊಂಡು ಮತ್ತೊಂದು ಕೈಯನ್ನು ಅದರ ಹಣೆಯ ಮೇಲೆ ಹಿಡಿದು ದಾರಿಯಲ್ಲಿ ಚಲಿಸುತ್ತಿದ್ದ ಬಸ್ಸನ್ನು ನೋಡುತ್ತಿದ್ದ ಅವಳನ್ನು ಬಸ್ ಹೋದ ಮೇಲೆ ಈ ಕನ್ಯೆ ನೋಡಿದಳು. ಆ ಇಬ್ಬರು ಕ್ರೈಸ್ತ ಭಗಿನಿಯರೂ ಬಸ್ ಹೋಗುವ ದಿಕ್ಕಿಗೆ ಎದುರಾಗಿ ಹಿಂಭಾಗ ಕುಳಿತಿದ್ದರು.

ಆ ರೈತ ಹೆಣ್ಣು ಮಗುವಿನೊಂದಿಗೆ ನಿಂತಿದ್ದ ಆ ದೃಶ್ಯ ಈ ಕನ್ಯೆಯ ನೋಟಕ್ಕೆ ಏನು ಆನಂದ ತಂದಿತೋ – ಮುಖದಲ್ಲಿ ಪ್ರಭೆ ಬೀರಿ ಕಿಟಕಿಯ ಹೊರಗೆ ಸ್ವಲ್ಪ ತಲೆಹಾಕಿ ಬಾಗಿ ನೋಡಿದಳು. ನೀಲವರ್ಣದ ಶಿರವಸ್ತ್ರ, ಕೆನ್ನೆಯ ಮೇಲೆ ಪಟಪಟ ಹಾರುತ್ತಿತ್ತು. ತನ್ನನ್ನು ಇವಳು ನೋಡುತ್ತಿದ್ದುದನ್ನು ಅರಿತ ರೈತ ಹೆಣ್ಣು ಮಂದಹಾಸ ಬೀರಿದಳು. ಇವಳೂ ಉತ್ತರವಾಗಿ ತಲೆಯಾಡಿಸಿದಳು...

"ಕರುವಿಲಾ ಕರುತ್ತರಿತ್ತು
ಕನ್ನಿತಾಯಾಗಿ
ಉರುವಿಲಾನ್ನೈ ಮನಿದ ಉರುವಿನಿಲ್
ಉಲಗುಕ್ಕು ಅಳಿತ್ತ..."
(ಗರ್ಭಾದಾನವಿಲ್ಲದೆ ಧರಿಸಿ ಗರ್ಭವ
ಕನ್ಯೆಯೇ ತಾಯಾಗಿ,
ನಿರಾಕಾರನಿಗೆ ಆಕಾರವೊಟ್ಟು,
ಜಗಕ್ಕಿತ್ತ...)

ಎಂದು ಅವಳ ತುಟಿಗಳು ಹೇಳಿಕೊಂಡುವು ಮನಸ್ಸಿನಲ್ಲಿ. ಆ ರೈತ ಹೆಣ್ಣಿನ ರೀತಿ ತಮ್ಮ ಮಠದ ಬಾಗಿಲಲ್ಲಿ ಕೈಯ್ಯಲ್ಲಿ ದೇವಕುಮಾರನನ್ನು ಅಪ್ಪಿ ನಿಲ್ಲುವ ಪುನೀತ ಮೇರಿಯ ಶಿಲೆಯಂತೆ ಕಂಡಿತು. ನೋಟ ಆ ರೈತ ಹೆಣ್ಣಿನ ಚಿತ್ರ ಮರೆಯಾಗಿ, ಮೆಲ್ಲನೆ ಬಸ್ಸಿನ ಕಡೆ ತಿರುಗಿದಾಗ ಮತ್ತೆ ನಾಲ್ಕನೆಯ ಸಾಲಿನಲ್ಲಿ ಕುಳಿತಿದ್ದ ಆ ತರುಣನ ಮುಖದ ಕಡೆ ದೃಷ್ಟಿ ನೆಟ್ಟಿತು. ಅವನು ಅವಳನ್ನೇ – ಆ ಕನ್ಯೆಯ ದುಂಡಾದ ನೀಲ ಮತ್ತು ಕಪ್ಪು ವರ್ಣ ಕಲೆತ ಕುಂಚಿಗೆಯ ಹೊರಗೆ ಕಾಣುವ ಮುಖವನ್ನು ಮಾತ್ರ ನೋಡುತ್ತಿದ್ದ.

ಅವಳ ಮೈ ರೋಮಾಂಚನಗೊಂಡಿತು. ಕಣ್ಣುಗಳು ರಪರಪನೆ ಆಡಿದುವು. ಥಟ್ಟನೆ ಮುಖವನ್ನು ತಿರುಗಿಸಿಕೊಂಡಳು.

"ಯಾಕೆ? ಅವನು ಸುಂದರನಾಗಿಯೇ ಇದ್ದಾನಲ್ಲಾ! ಸುಂದರವಾಗಿದ್ದರೆ...? ಅದೇ ಪಾಪ. ಪಾಪದ ಫಲ – ಪಾಪದ ಗಂಟೇ! ಮನುಷ್ಯನ ರೂಪ ಜಗತ್ತಿನಲ್ಲಿ ಹುಟ್ಟುವುದೇ – ಜನ್ಮವೆತ್ತುವುದೇ ಪಾಪದ ಫಲ ತಾನೆ? ಬಹಿಷ್ಕಾರವಾಗಿದ್ದ ಹಣ್ಣನ್ನು ಬಯಸಿ ತಿನ್ನದಿದ್ದರೆ... ಆ್ಯಡಂ ಈವಾಳ ಸಂತತಿಯೆಲ್ಲಿ? ಆ್ಯಡಂ ಈವಾಳೂ ಪಿತನಿಂದ ಪುನೀತರಾಗಿ ಹುಟ್ಟಿದವರು.

"ಆದರೆ ಅವರು ಬಹಿಷ್ಕರಿಸಲ್ಪಟ್ಟ ಹಣ್ಣನ್ನು ತಿಂದುದರ ಫಲವಾಗಿ ಪಾಪಿಗಳಾದರು. ಅವರ ಪಾಪದ ಫಲವಾಗಿ, ಈ ಮನುಷ್ಯರೆಲ್ಲಾ – ನಾನು, ನನ್ನ ಪಕ್ಕದಲ್ಲಿ ಕುಳಿತಿದ್ದಾರಲ್ಲಾ... ಯಾರೊ ಹೆತ್ತು ಎಲ್ಲೋ ಬಿಸಾಡಿ ಹೋದ ಮೂರು ದಿನ ವಯಸ್ಸಿನ ಅನಾಥ ಶಿಶುವಾದ ನನ್ನನ್ನು ಎತ್ತಿಕೊಂಡು ಮಠದಲ್ಲಿ ಸೇರಿಸಿ ಬೆಳೆಸಿ ತನ್ನಂತೆ ಓರ್ವ ಕ್ರೈಸ್ತ ಕನ್ಯೆಯಾಗಿ ಮಾಡಿದ ನನ್ನ ತಾಯಿ ಇನ್‌ವಿಲಟಾ, ಸ್ವಲ್ಪ ಹಿಂದೆ ನೋಡಿದ ಆ ಗ್ರಾಮದ ಬಡತನದ ತಾಯಿಯೂ ಅವಳ ಕೈಯಲ್ಲಿದ್ದ ಶಿಶುವೂ, ಅದೋ ನನ್ನನ್ನೇ ನೋಡುತ್ತಿದ್ದಾನಲ್ಲಾ, ಆ ತರುಣ – ಅವನೂ. ಹುಟ್ಟಿದ್ದಾರೆ. ಪಾಪಿಗಳು... ಮನುಷ್ಯರು ಪಾಪಿಗಳು! ಬಹಿಷ್ಕರಿಸಲ್ಪಟ್ಟ ವಿಷಪೂರಿತ ಹಣ್ಣಿನಲ್ಲಿ ಹುಟ್ಟಿದ ವಿಷದ ಹುಳುಗಳು. ಸರ್ಪಗಳು...

ಬಸ್ ಗಡಗಡವೆಂದು ಓಡಿಕೊಂಡಿತ್ತು.

ಅವಳ ಕಣ್ಣುಗಳು ಮತ್ತೆ ಬಸ್ಸಿನ ಕಡೆ ತಿರುಗುವಾಗ ಆ ತರುಣನ ಮೇಲೆ ಹಾದು ಒಡನೆಯೇ ಪಕ್ಕಕ್ಕೆ ತಿರುಗಿದಾಗ ಅವಳ ಎದುರಾಗಿ ಒಂದು ಹೆಣ್ಣಿನ ಮಡಿಲಲ್ಲಿ ಕುಳಿತಿದ್ದ ಒಂದು ವರ್ಷದ ಮಗುವೊಂದು ತನ್ನ ಅಂದವಾದ ನಗುವಿನಿಂದ ಅವಳ ಹೃದಯವನ್ನು ಸೂರೆಗೊಂಡಿತು.

ಅವಳು ಮಗುವನ್ನು ನೋಡಿ ನಕ್ಕಳು. ಮಗು ಅವಳನ್ನು ನೋಡಿ ಧಾವಿಸಿತು. ತಾಯಿಯ ಮಡಿಲನ್ನು ಬಿಟ್ಟು ಇಳಿದು ಅವಳ ಪಕ್ಕದಲ್ಲಿದ್ದ ವೃದ್ಧೆ ಇನ್‌ವಿಲಟಾಳ ಮೊಳಕಾಲನ್ನು ಹಿಡಿದು ನೋಡಿತು. ವೃದ್ಧೆ ಇನ್‌ವಿಲಾ ತನ್ನ ಕೊರಳ ಮಣಿಮಾಲೆಯಲ್ಲಿದ್ದ ಚಿಕ್ಕ ಸಿಲುಬೆಯಲ್ಲಿ ಮಗ್ನಳಾಗಿದ್ದಳು.

ಅವಳಿಗೆ ಯಾವಾಗಲೂ ಅದೇ ಅಭ್ಯಾಸ ಎಂದು ಬಸ್ಸಿನಲ್ಲಿ ಹತ್ತಿದಾಗಿನಿಂದ ಅವಳನ್ನು ಗಮನಿಸಿಕೊಂಡಿದ್ದವರಿಗೆ ಗೊತ್ತು. ಸುಮಾರು ಎರಡು ಗಂಟೆಯಿಂದ ಸಿಲುಬೆಯ ಮೇಲಿಟ್ಟ ದೃಷ್ಟಿಯನ್ನು ಬದಲಾಯಿಸದೆ ಕುಳಿತಿದ್ದಳು. ಆ ಬೆಳ್ಳಿಯ ಸಿಲುಬೆಯಲ್ಲಿ ಏಸುವಿನ ಆಕಾರವಿತ್ತು.

ವೃದ್ಧೆ ಮಗುವಿನ ಗದ್ದವನ್ನೆತ್ತಿ ಮಂದಹಾಸದಿಂದ ಆಡಿಸಿದಳು. ಮಗು ಅವಳ ಕೈಯಲ್ಲಿದ್ದ ಸಿಲುಬೆಯನ್ನು ಓಡಿದೆಳೆಯಿತು. ಸಿಲುಬೆಯನ್ನು ಮಗುವಿನ ಕೈಯಲ್ಲಿ ಕೊಟ್ಟು "ಸ್ತೋತ್ರ ಹೇಳು, ದೇವರೇ... ಸ್ತೋತ್ರ ಹೇಳು..." ಎಂದು ಎರಡು ಕರಗಳನ್ನೂ ಜೋಡಿಸಿ ನಮಸ್ಕರಿಸುವುದನ್ನು ಹೇಳಿಕೊಟ್ಟಳು.

ಮಗು ನಮಸ್ಕಾರ ಮಾಡುತ್ತಾ ಕನ್ಯೆಯ ಕಡೆ ತಿರುಗಿ ಕೆನ್ನೆಗಳಲ್ಲಿ ಗುಳಿ ಬೀಳುವಂತೆ ನಕ್ಕು ಧಾವಿಸಿತು. ಅವಳು ಮಗುವನ್ನೆತ್ತಿಕೊಂಡು ಎದೆಗೆ ಅಪ್ಪಿಕೊಂಡಳು. ಹೃದಯದಲ್ಲಿ ಏನೋ ಉಕ್ಕಿ ಹರಿದು ಉಸಿರುಕಟ್ಟುವಂತಾಯಿತು. ಕಣ್ಣುಗಳಲ್ಲಿ ನೀರು ಬಂದು ಎದೆಗಳು ನೆನೆದುವು.

ವೃದ್ಧೆ ಇನ್‌ವೆಲಟಾ ಮತ್ತೆ ಸಿಲುಬೆಯಲ್ಲಿ ಮಗ್ನಳಾದಳು.

"ಕ್ಯಾಥರೀನ್ ಗಂಟೆ ಎಷ್ಟಾಯಿತು?" ಸಿಲುಬೆಯನ್ನು ನೋಡಿಕೊಂಡೇ ಕೇಳಿದಳು ಇನ್‌ವೆಲಟಾ. ಆ ಮಗುವಿನ ಮೃದು ಕೆನ್ನೆಯ ಮೇಲೆ ತನ್ನ ಕೆನ್ನೆಯನ್ನಿಟ್ಟು ಆ ಸಂತೋಷದಲ್ಲಿ ತನ್ನನ್ನೇ ಮರೆತಿದ್ದ ಅವಳ ಕಿವಿಗಳಲ್ಲಿ ವೃದ್ಧೆಯ ಮಾತು ಕೇಳಿಸಲಿಲ್ಲ.

"ಕ್ಯಾಥರಿನ್! ಕ್ಯಾಥರಿನ್! ನಿದ್ರೆ ಮಾಡುತ್ತಿದ್ದೀಯಾ...? ಮಗುವನ್ನು ಕೆಳಗೆ ಬಿಟ್ಟು ಬಿಟ್ಟೀಯಾ! ಗಂಟೆ ಎಷ್ಟು?"

"ಅಮ್ಮಾ...ಗಂಟೆ ಐದು" ಎಂದು ವೃದ್ಧೆಗೆ ಹೇಳಿ ಮಗುವನ್ನು ಮಡಿಲಿನಿಂದ ಕೆಳಗಿಳಿಸಿ, 'ಸ್ತೋತ್ರ ಹೇಳು, ದೇವರೆ..." ಎಂದು ಮುದ್ದಾಡಿದಳು ಕ್ಯಾಥರೀನ್. ಮಗು ನಮಸ್ಕಾರ ಮಾಡಿತು. ಅವಳೂ ನಮಸ್ಕಾರ ಮಾಡಿದಳು. ಅವಳ ನೋಟ ಮತ್ತೆ ಹೇಗೋ ಆ ನಾಲ್ಕನೆಯ ಸಾಲಿನಲ್ಲಿ ಕಿಟಕಿಯ ಸಮೀಪ ಕುಳಿತಿದ್ದ ಆ ತರುಣನ ಮೇಲೆ ಹೋಯಿತು...

ಈ ಬಾರಿ ಅವಳ ದೃಷ್ಟಿ ಬದಲಾಗದೆ ಶಾಂತವಾದ ನಯನಗಳು ಅವನ ಮೇಲೆ ನೆಲೆಸಿ ಅಲ್ಲೇ ಲಯವಾಗಿ ಹೋಗಿಬಿಟ್ಟಳೋ ಏನು?

ಅವನಿಗೆ ಇಪ್ಪತ್ತು ವರ್ಷ ವಯಸ್ಸಿರಬಹುದು. ಒಳ್ಳೆಯ ಕೆಂಪು ಬಣ್ಣ, ದಾರ್ಢ್ಯವಾದ. ದೇಹ, ಗಂಭೀರ, ಶಾಂತಿಯಿಂದ ಕೂಡಿದ ಮುಖ. ಕಿಟಕಿಯ ಸಮೀಪ ಬಸ್ ಹೋಗುವ ದಿಕ್ಕನ್ನು ನೋಡುತ್ತಾ ಕುಳಿತಿದ್ದುದರಿಂದ ಅವನ ಬಿಳಿಯ ಷರಟಿನ ಕಾಲರ್, ಆ ನೀಲ ವರ್ಣದ ಸಿಲ್ಕ್ ಟೈ ಪಟಪಟನೆ ಹಾರಾಡುತ್ತಿತ್ತು; ಕ್ರಾಪ್ ಕೂದಲು ಹರಡಿ ಹಣೆಯ ಮೇಲೆ ಗುಂಗುರಾಗಿ ನಿಂತಿತು. ಅವಳು ತನ್ನನ್ನೇ ನೋಡುವುದನ್ನು ಕಂಡು ಅವನ ತುಟಿಗಳು ಮೃದುವಾಗಿ ಬಿರಿದುವು. ಆಗ ಅವನ ಶುಭ್ರವಾದ ಬಿಳುಪಾದ ದಂತಶ್ರೇಣಿಯ ಆಕರ್ಷಣೆಗೆ ಅವಳೂ ಉತ್ತರವಾಗಿ ಮಂದಹಾಸ ಬೀರತೊಡಗಿದಳು.

ಕ್ಯಾಥರೀನ್ ನಕ್ಕಾಗ ದೇವರ ಮಗಳಂತೆ ಕಂಡಳು. 'ಜೀವಗಳ ಮೇಲೆ ಕರುಣೆ ತೋರು ಮನುಷ್ಯರಲ್ಲಿ ಮೈತ್ರಿಯಿಡು' ಎಂಬ ನಾಗರೀಕತೆಯಿಂದ ಏರ್ಪಟ್ಟ ದೈವೀಕ ಕಳೆ ಅವಳ ಮುಖದಲ್ಲಿ ಪ್ರಭೆಯನ್ನು ಬೀರುತ್ತಿತ್ತು.

'ಅವನು – ಆ ಮನುಷ್ಯ – ನನ್ನ ಬಗ್ಗೆ ಏನೆಂದುಕೊಳ್ಳಲಾರ' ಎಂದುಕೊಂಡಳು ಕ್ಯಾಥರೀನ್. 'ಓಹ್... ಅದೇನು ನೋಟ...' – ಕ್ಯಾಥರೀನಳ ಮುಖ ಕೆಂಪೇರಿ ತುಟಿಗಳು ಕಂಪಿಸಿದುವು. ಅವಳಿಗೆ ಅಳು ಬಂದಿತು. ತುಟಿ ಕಚ್ಚಿಕೊಂಡಳು. ಅವನೂ ಕೆಳಗಿನ ತುಟಿಯನ್ನು ಹಗುರವಾಗಿ ಕಚ್ಚಿದ. ಕ್ಯಾಥರೀನಳ ಕಣ್ಣೆವೆಗಳ ಕೊನೆಯಲ್ಲಿ ಉರುಳಿದ ಎರಡು ಮುತ್ತುಗಳು ಯಾರಿಗೂ ತಿಳಿಯದಂತೆ ಅವಳ ತಲೆಯ ಮೇಲೆ ತುಂಬಿಗೆಯ ಕೆಳಗೆ ಬಿದ್ದುವು. ಅವನು ಮಾತ್ರ ಅದನ್ನು ನೋಡಿಕೊಂಡಿದ್ದ.

'ಅವನು ನನ್ನ ಬಗ್ಗೆ ಏನೆಂದುಕೊಳ್ಳಲಾರ? ಇವಳೇಕೆ ಹೀಗಾದಳು ಎಂದುಕೊಳ್ಳುವನೋ? ಭಾವಗಳನ್ನು ಕಟ್ಟುಪಾಡಿನಲ್ಲಿಟ್ಟು ತನ್ನ ಕರ್ತವ್ಯವನ್ನು ನೆರವೇರಿಸದೆ ತೊಳಲುವ ಮುಗ್ಧೆಯೆಂದುಕೊಳ್ಳುವನೋ? ಪಾಪದ ಬಗ್ಗೆ ಚಿಂತಿಸಿದ ಮನೋಬಲವಿಲ್ಲದ ಹೇಡಿ ಎಂದುಕೊಳ್ಳುವನೊ?' – ಅವಳು ಥಟ್ಟನೆ ಮುಖ ತಿರುಗಿಸಿ ವೃದ್ಧೆ ಇನ್‌ವಿಲಟಾಳನ್ನು ನೋಡಿದ. ಅವಳು ಈ ಜಗತ್ತಿನ ನೆನಪನ್ನೇ ಬಿಟ್ಟವಳಂತೆ ಕೈಯಲ್ಲಿದ್ದ ಸಿಲುಬೆಯಲ್ಲಿ ಮಗ್ನಳಾಗಿದ್ದಳು. ಅವಳ ಮುಖದಲ್ಲಿ ಮಂದಹಾಸವಿತ್ತು. ಕೆಲವು ವೇಳೆ ಪ್ರಾರ್ಥಿಸುವಂತೆ ತುಟಿಗಳು ಅಲುಗಾಡುತ್ತಿದ್ದುವು. ಕ್ಯಾಥರೀನಳ ಮನಸ್ಸು ತನ್ನನ್ನೂ ತನ್ನ ತಾಯಿ ಇನ್‌ವಿಲಿಟಾಳನ್ನೂ ಹೋಲಿಸಿ ನೋಡಿತು :

"ಓಹ್... ಅವರೆಲ್ಲಿ... ನಾನೆಲ್ಲಿ...'

ಈ ಹದಿನೆಂಟು ವರ್ಷ ವಯಸ್ಸಿನಲ್ಲಿ ತಾನು ಎಷ್ಟು ಬಾರಿ ಪಾಪದ ಕ್ಷಮೆಗಾಗಿ ಪುನೀತ ಫಾದರ್ ಬಳಿ ಮಂಡಿಯಿಟ್ಟು ಕನ್‌ಫೆಸ್ ಮಾಡಿದ್ದುಂಟು ಎಂದು ಆಲೋಚಿಸಿದಳು ಕ್ಯಾಥರಿನ್.

"ಅಮ್ಮಾ...?"

"ಏನು ಕ್ಯಾಥರೀನ್..." – ಶಿಲುಬೆಯ ಕಡೆ ಮುಖವಾಗಿಸಿದ್ದ ಇನ್‌ವಿಲಟಾ ಸುಕ್ಕಾದ ಮುಖವನ್ನು ಎತ್ತಿ ಅವಳನ್ನು ನೋಡಿದಳು.

"ಅಮ್ಮಾ, ನೀವು 'ಕನ್‌ಫೆಷನ್' ಮಾಡಿಕೊಂಡಿದ್ದುಂಟೆ...?"

ಉಂ. ಮಾಡಿಕೊಂಡಿದ್ದೇನೆ ಮಗಳೇ. ನಾವೆಲ್ಲಾ ಪಾಪಿಗಳು ತಾನೆ? ಆದರೆ ನಮ್ಮ ಪಾಪಗಳನ್ನು ಮರೆಮಾಚದೆ ದೇವರೊಂದಿಗೆ ಹೇಳಿಕೊಂಡರೆ ನಮ್ಮ ರಕ್ಷಣೆಯಾಗುತ್ತದೆ. ನಮ್ಮ ಪಾಪಗಳನ್ನು ಅವರು ಹೊತ್ತುಕೊಳ್ಳುತ್ತಾರೆ. ಆದ್ದರಿಂದಲೇ ನಾವು ರಾತ್ರಿ ಮಲಗುವಾಗ ನಮ್ಮ ದಿನದ ಪಾಪಗಳನ್ನು ಅವನಿಗೆ ಒಪ್ಪಿಸುತ್ತೇವೆ. ಅದರಿಂದ ನಮ್ಮ ಆತ್ಮ ಪರಿಶುದ್ಧವಾಗುತ್ತದೆ. ಅದರ ಮೇಲೂ ನಮ್ಮ ಹೃದಯಗಳನ್ನು ನಮ್ಮ ಪಾಪಗಳು ಚುಚ್ಚಿಕೊಂಡೇ ಇರುವುದರಿಂದ, ನಾವು ಫಾದರ್ ಬಳಿ, ಅವರು ಕಿವಿಗೊಟ್ಟಾಗ,

ನಮ್ಮ ಪಾಪಗಳನ್ನು ಹೇಳಿಕೊಂಡು ಕ್ಷಮಾಪಣೆ ಕೇಳಿಕೊಳ್ಳುತ್ತೇವೆ. ನಮ್ಮ ಫಾದರ್ ನಮಗಾಗಿ ಕರ್ತನ ಬಳಿ ಜಪಿಸುತ್ತಾರೆ. ಅಂತಹ ಪಾಪಗಳನ್ನು ನಾನು ಮಾಡಿದ್ದುಂಟು... ಎಂದು ವೃದ್ಧೆ ಕಣ್ಣುಗಳನ್ನು ಒರೆಸಿಕೊಂಡಳು.

ಕ್ಯಾಥರೀನಳಿಗೆ ಆಶ್ಚರ್ಯವಾಯಿತು. 'ಇನ್‌ವಿಲಟಾ ಸಹ ಪ್ರಾಯದಲ್ಲಿ ತನ್ನಂತೆ ಇದ್ದಿರಬಹುದೇ' ಎಂದುಕೊಂಡಳು.

"ಕ್ಯಾಥರೀನ್... ಆಗ ನನಗೆ ನಿನ್ನ ವಯಸ್ಸಿರಬೇಕು. ನಾನೊಂದು ಕನಸು ಕಂಡೆ – ನನಗೆ ಮದುವೆಯಾದಂತೆ ಒಂದು ಕನಸು. ಪಾಪಿಷ್ಟ ಕನಸು! ಎಚ್ಚರಿಕೆಗೊಂಡು ರಾತ್ರಿಯೆಲ್ಲಾ ಅತ್ತೆ. ಕನಸು ಕಂಡಾಗ ಆ ಮದುವೆಯ ವೇಳೆಯಲ್ಲಿ ನಾನು ಉತ್ಸಾಹದಿಂದ ಕೂಡಿ ದ್ದಂತಿತ್ತು. ಅದನ್ನು ನೆನೆದು ಅತ್ತೆ. ಓರ್ವ ಕನ್ಯೆ ಹಾಗೆ ಕನಸು ಕಾಣಬಹುದೆ? ಮಾರನೆಯ ದಿನ ಆ ಪಾಪಕ್ಕಾಗಿ ಫಾದರ್ ಬಳಿ ಕ್ಷಮೆ ಪಡೆದೆ. ಆ ದಿನವೆಲ್ಲಾ ನೀರೂ ಕುಡಿಯದೆ ವ್ರತವಿದ್ದು ದೇವರ ಜಪ ಮಾಡುತ್ತಿದ್ದೆ."

ವೃದ್ಧೆ ಧ್ವನಿಯನ್ನು ತಗ್ಗಿಸಿ ಕ್ಯಾಥರೀನಳೊಂದಿಗ ಮೃದುವಾಗಿ ಮಾತನಾಡಿದಳು : "ಆಮೇಲೆ ಒಂದು ಹುಡುಗಿಯನ್ನು ತರಗತಿಯಲ್ಲಿ ಹೊಡೆದುಬಿಟ್ಟೆ... ಕಪಾಳಕ್ಕೆ ಸ್ಕೇಲಿ ನಿಂದ ಹೊಡೆದಾಗ ಅಲ್ಲಿ ಕೆಂಪು ಗುರುತು ಮೂಡಿತು. ಆ ದಿನವೆಲ್ಲಾ ಅದನ್ನು ನೆನೆಸಿ ವ್ಯಥೆಪಟ್ಟೆ. ಅದಕ್ಕಾಗಿಯೂ ಕನ್‌ಫೆಷನ್ ಮಾಡಿಕೊಂಡೆ. ಈ ರೀತಿ ಐದನೆಯ ಬಾರಿ.

'ಇಷ್ಟೇನೇ? ಇವರು ಮಾಡಿದ ಪಾಪವೆಲ್ಲಾ ಇಷ್ಟೇನೇ? ನಂಬುವುದಕ್ಕೆ ಆಗದಲ್ಲ' ಎಂದು ಅಚ್ಚರಿಗೊಂಡಳು ಕ್ಯಾಥರೀನ್.

'ಆಕಸ್ಮಾತ್ ಏನಾದರೂ ಮರೆಮಾಚುತ್ತಿದ್ದಾರೋ?' ಎಂಬ ಸಂದೇಹ ಕೂಡ ತಲೆದೋರಿತು. ಕ್ಯಾಥರೀನಳ ಸಂದೇಹಕ್ಕೆ ಉತ್ತರ ಹೇಳುವಂತೆ ಇನ್‌ವಿಲಟಾ ಹೇಳಿದಳು :

"ಪಾಪವನ್ನು ಮರೆಮಾಚುವುದು ಸೈತಾನನ ಕೆಲಸ. ಪಾಪವನ್ನು ಮನಬಿಚ್ಚಿ – ದೇವರ ಬಳಿ ಒಪ್ಪಿಸೋಣ. ದೇವರಿಂದ ನಾವು ಯಾವುದನ್ನೂ ಮರೆಮಾಚಲಾಗದು."

"ಹೌದು, ದೇವರಿಂದ ನಾವು ಯಾವುದನ್ನೂ ಮರೆಮಾಚಲಾಗದು" ಎಂದು ಕ್ಯಾಥರೀನಳೂ ತಲೆಯಾಡಿಸಿದಳು. ನಂತರ ತನ್ನ ಕೈಚೀಲದಿಂದ ಒಂದು ಪುಸ್ತಕವನ್ನು ಎತ್ತಿಕೊಂಡು ಓದತೊಡಗಿದಳು. ಅವಳ ದೃಷ್ಟಿ ಒಂದು ಬಾರಿ ಕಿಟಕಿಯ ಬಳಿ, ನಾಲ್ಕನೆಯ ಸಾಲಿನಲ್ಲಿ...

ಅವನು ಅವಳನ್ನೇ ನೋಡಿಕೊಂಡಿದ್ದ...

'ಓಹ್ ಅದೇನು ನೋಟ!' ಅವಳು ಪುಸ್ತಕವನ್ನು ಓದತೊಡಗಿದಳು :

'ಓರ್ವ ಸ್ತ್ರೀಯನ್ನು ಬಯಕೆಯಿಂದ ನೋಡುವವನು ತನ್ನ ಹೃದಯದಲ್ಲಿ ಅವ ಳೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ. ನಿನ್ನ ಬಲಗಣ್ಣು ನಿನಗೆ ಕೇಡು ಮಾಡಿದರೆ ಅದನ್ನು ಕಿತ್ತು ಬಿಸಾಡು, ನಿನ್ನ ಶರೀರ ಪೂರ್ತಿ ನರಕದಲ್ಲಿ ಬೀಳುವುದನ್ನು ನೋಡುವುದ ಕ್ಕಿಂತ ನಿನ್ನ ಅವಯವಗಳಲ್ಲಿ ಒಂದನ್ನು ಕಳೆದುಕೊಳ್ಳುವುದು ನಿನಗೆ ಒಳ್ಳೆಯದು –'

ಕ್ಯಾಥರೀನ್ ಅದರ ಮುಂದೆ ಓದಲಾಗಲಿಲ್ಲ – ಕಣ್ಣುಗಳನ್ನು ಮುಚ್ಚಿಕೊಂಡಳು. ಪುಸ್ತಕ ಹಾಗೇ ತೆರೆದಿತ್ತು; ಕಣ್ಣುಗಳು ಮುಚ್ಚಿಕೊಂಡಿದ್ದುವು...

'ಇದೇನು ಪಾಪದ ಭಾವನೆಗಳು?' ಎಂದು ಮನಸ್ಸು ತಳಮಳಗೊಂಡಿತು. ಇವನು ಯಾಕೆ ಇನ್ನೂ ಇಳಿಯದೆ ಕುಳಿತಿದ್ದಾನೆ? ಸೈತಾನನ ಮತ್ತೊಂದು ಅಂಶವೇ? ನನ್ನನ್ನು ಪರೀಕ್ಷಿಸುತ್ತಿದ್ದಾನೋ? ಇವನ ಬಗ್ಗೆ ನನಗೇನು ಚಿಂತೆ?... ಓ ತಂದೆಯೇ...?

ಅವಳು ಥಟ್ಟನೆ ಕೊರಳಲ್ಲಿದ್ದ ಶಿಲುಬೆಯನ್ನು ಕುರಿತು ಮನಸ್ಸಿನಲ್ಲಿ ಜಪಿಸಲಾರಂಭಿಸಿದಳು: 'ಪರ ಮಂಡಲಗಳಲ್ಲಿರುವ ನಮ್ಮ ತಂದೆಯೇ... ನಮ್ಮನ್ನು ಪರೀಕ್ಷೆಗೆ ಒಳಗು ಮಾಡದೆ ಕೆಡುಕಿನಿಂದ ನಮ್ಮನ್ನು ರಕ್ಷಿಸು... ಅಮೆನ್.. '

ಆದರೆ ತಾನೆ ಏನು? ಅವಳು ಕಣ್ತೆರೆದಾಗ ಅವನನ್ನೇ ಅವಳ ದೃಷ್ಟಿ ಸಂಧಿಸಿತು.

'ಮನುಷ್ಯ ಪಾಪದಿಂದ ತಪ್ಪಲು ಸಾಧ್ಯವೇ ಇಲ್ಲವೆ? ಆ್ಯಡಮನಿಗಾಗಿ ದೇವರು ಪಡೆದ ಸ್ವರ್ಗನಂದನವಾದ ಏಡನ್ ತೋಟದಲ್ಲಿ ಸರ್ಪವೂ ಬಹಿಷ್ಕೃತವಾದ ಮರವೂ ಹೇಗಿದ್ದುವು? ದೇವರು ಮಾನವನನ್ನೂ ಸೃಷ್ಟಿಸಿ ಯಾಕೆ ಪಾಪವನ್ನೂ ಸೃಷ್ಟಿಸಿದ...? ಪಾಪದಲ್ಲಿ ಆನಂದವಿರುವುದು ಬರಿಯ ಭ್ರಮೆಯೆ? ಆನಂದವೇ ಪಾಪವೇನು? – ಪ್ರಪಂಚದಲ್ಲಿ ಕೋಟಿಲೆಖ್ಖದಲ್ಲಿ ಮಾನವರು ನರಕಕ್ಕೇ ಹೋಗುವರೇ? ನಾನು ಮಾತ್ರ ಯಾಕೆ ಪಾಪಕ್ಕೆ ಭಯಪಡುತ್ತೇನೆ? ಇದೋ ಈ ಸುಂದರವಾದ ತರುಣ ತನ್ನ ಪ್ರಾಣವನ್ನೇ ದೃಷ್ಟಿಯಲ್ಲಿ ಸಂಗ್ರಹಿಸಿಟ್ಟುಕೊಂಡು ನನ್ನನ್ನು ನೋಡುತ್ತಿದ್ದಾನಲ್ಲಾ! ಮನುಷ್ಯರೆಲ್ಲಾ, ಹೆಂಗಸರೆಲ್ಲಾ ಆಕೃತಿಯಲ್ಲಿ ನನ್ನಂತೆ ತಾನೆ ಇರುತ್ತಾರೆ...?

ಕ್ಯಾಥರೀನ್ ತನ್ನ ಎದುರೇ ಎರಡನೆಯ ಸಾಲಿನಲ್ಲಿ ಕುಳಿತಿದ್ದ ಆ ಯುವ ದಂಪತಿಗಳನ್ನು ನೋಡಿದಳು. ಅವಳು ಗರ್ಭಿಣಿ. ಆಯಾಸದಿಂದಲೋ, ಬಯಕೆಯಿಂದಲೋ ಕಣ್ಣುಗಳನ್ನು ಮುಚ್ಚಿಕೊಂಡು ಗಂಡನ ಭುಜದ ಮೇಲೆ ಒರಗಿದ್ದಳು. ಆ ದೃಶ್ಯವನ್ನು ಕಂಡಾಗ ಕ್ಯಾಥರೀನಳ ಒಳಮನಸ್ಸಿನಲ್ಲಿ ಸೈತಾನನ ಕಂಠದಿಂದ ಬಂದಂತೆ ಒಂದು ಭಾವನೆಯೆದ್ದಿತು.

'ಅವಳಿಗೂ ನನಗೂ ಭೇದ ಈ ತೊಡುಗೆಯಲ್ಲಿ ತಾನೆ? ಇದನ್ನು ಕಳಚಿ ಓಡಿಹೋಗಿ ಆ ತರುಣನ ತೋಳ್ತೆಕ್ಕೆಯಲ್ಲಿ ಒರಗಿಕೊಂಡರೆ...?

'ಅಯ್ಯೋ ತಂದೆಯೇ, ನಾನು ಪದೇ ಪದೇ ಪಾಪವನ್ನು ಮಾಡುತ್ತಿದ್ದೇನಲ್ಲಾ. ನನ್ನನ್ನು ರಕ್ಷಿಸು.'

ಬಸ್ಸು ನಿಂತಿತು. ಬಸ್ ಸ್ಟ್ಯಾಂಡಿನಲ್ಲಿ ಸಂದಣಿ. ಆ ಬೇಸರದಿಂದ ಬಸ್ಸು ಇಳಿದ ಗುಂಪುಗಳ ಮಾತುಗಳ ಶಬ್ದವೂ ಸಂಗಮಗೊಂಡಿತು. ಎಲ್ಲರೂ ಇಳಿಯುವವರೆಗೆ ವೃದ್ಧೆ ಇನ್‌ವಿಲಟಾ ಮತ್ತು ಕ್ಯಾಥರೀನ್ ಕಾದಿದ್ದರು. ಕಡೆಯಲ್ಲಿ ಇಬ್ಬರೂ ಕೆಳಗೆ ಇಳಿದರು.

ಜಟಕಾ ಗಾಡಿಯವನೊಬ್ಬ ಓಡಿಬಂದ.

"ಕ್ರೈಸ್ತ ಮಠಕ್ಕೆ ತಾನೆ ಅಮ್ಮಾ? ಬನ್ನಿ ಬನ್ನಿ" ಎಂದು ಗಾಡಿಯ ಬಳಿಗೆ ಕರೆದುಕೊಂಡು ಹೋದ.

ಆಗ ಸಾಯಂಕಾಲವಾಗುತ್ತಿದ್ದು ಹೊಂಗಿರಣಗಳ ಬೆಳಕಿನಲ್ಲಿ ನೀಲ ಬಣ್ಣದ ಸೂಟು, ಬಿಳಿದಾದ ಷರಟು, ನೀಲವರ್ಣದ ಟೈಯೊಂದಿಗೆ ಕೈಯಲ್ಲಿ ಸೂಟ್‌ಕೇಸ್ ಹಿಡಿದು ಅವನು – ಆ ತರುಣ, ಸುಂದರ – ಸೈತಾನಿನ ದೂತನಂತೆ ನಿಂತಿದ್ದ.

ಕ್ಯಾಥರೀನಳಿಗೆ ಕಿವಿಯ ಪಕ್ಕದಲ್ಲಿ ರೋಮಾಂಚನವಾಯಿತು. ಮಂದಹಾಸ ಬೀರಿದಳು. ಅವನೂ ನಕ್ಕ. ಅವರ ಸಮೀಪ ಬಂದು ಮೊದಲು ಇನ್‌ವಿಲಟಾಳನ್ನು ಕುರಿತು "ಸ್ತೋತ್ರ, ತಾಯಿ" ಎಂದು ಕೈಮುಗಿದ.

"ಸ್ತೋತ್ರ, ದೇವರೇ" ಎಂದು ವೃದ್ಧೆಯೂ ಕೈಮುಗಿದಳು.

"ಸ್ತೋತ್ರ..." ಎಂದು ಕ್ಯಾಥರೀನಳನ್ನು ಅವನು ನೋಡುವಾಗ ಉತ್ತರವಾಗಿ ನಮಸ್ಕರಿಸಿದ ಕ್ಯಾಥರೀನಳ ಕೈಗಳು ನಡುಗಿದುವು.

"ಸ್ತೋತ್ರ..." ಎಂದು ಹೇಳುವಾಗ ದನಿ ಕುಗ್ಗಿತು. ಕಣ್ಣುಗಳಲ್ಲಿ ನೀರು ಬಂದಿತು.

ಇವರಿಬ್ಬರೂ ಗಾಡಿಯೇರಿ ಕುಳಿತಾಗ ಅವನು ತಲೆಯ ಮೇಲೆ ಕೈಯನ್ನಾಡಿಸಿ ಬೀಳ್ಕೊಟ್ಟ; ಅವಳೂ ಮನಃಪೂರ್ವಕ ನಕ್ಕು ಕೈಯಾಡಿಸಿದಳು... ಗಾಡಿ ಚಲಿಸಿತು; ಅವನ ಆಕೃತಿ ಮರೆಯಾಯಿತು. ಅವಳ ಕೈಗಳು ಕೆಳಗಿಳಿದುವು. ಹೃದಯ ತುಂಬಿ ಬಂತು.

"ಕ್ಯಾಥರೀನ್ ಯಾರದು? ನನಗೆ ಗೊತ್ತಾಗಲಿಲ್ಲವಲ್ಲ" ಎಂದು ಕೇಳಿದಳು ಇನ್‌ವಿಲಟಾ.

"ಹೋ..." ಎಂದು ಕೈ ಬೆರಳುಗಳನ್ನು ಹೆಣೆದುಕೊಂಡು ಕ್ಯಾಥರೀನ್ ಹುಸಿನಗೆ ಬೀರಿದಳು :

"ಅಮ್ಮಾ ಮೊದಲು ನನಗೂ ತಿಳಿಯಲಿಲ್ಲ. ನನ್ನ ಕ್ಲಾಸಿನಲ್ಲಿ ಓದುತ್ತಿದ್ದಾಳಲ್ಲಾ ಇಸಾಬೆಲ್ – ಅವಳ ಅಣ್ಣ..."

"ಓಹ್..."

'ದೇವರೇ ನನ್ನನ್ನು ರಕ್ಷಿಸು. ಎಂತಹ ಪಾಪ ಎಂತಹ ಪಾಪ...' ಎಂದು ಮನಸ್ಸಿನಲ್ಲಿ ಗೊಣಗಿಕೊಂಡರೂ ಕ್ಯಾಥರೀನ್ ನಯನಗಳು ಅವನು ಮಂದಹಾಸದಿಂದ ಕೈಯಾಡಿಸಿ ಬೀಳ್ಕೊಟ್ಟ ದೃಶ್ಯವನ್ನು ಕಂಡು ಆನಂದಪಡುತ್ತಿತ್ತು...

'ಅವರು ಯಾರೋ? ಮತ್ತೆ ಅವರನ್ನು ಕಾಣುವ ಭಾಗ್ಯ... ಭಾಗ್ಯವೇ...? ಇಲ್ಲ ದಿದ್ದರೆ ಆ ಪಾಪ – ಮತ್ತೆ ನನಗೆ ದೊರಕೀತೆ?' ಎಂದು ಮನಸ್ಸು ಹಾತೊರೆಯಿತು...

ಪಾಪ ಮಾಡಲು ಕೂಡ ತನಗೆ ಅರ್ಹತೆಯಿಲ್ಲ ಎಂದೆಣಿಸಿದಾಗ ಕಣ್ಣುಗಳಲ್ಲಿ ಅಶ್ರು ಮೂಡಿತು; ಗಂಟಲು ಕಟ್ಟಿ ಅಳು ಬಂತು. ಅವಳು ಅಳಲು ಸಾಧ್ಯವೆ? ಅಳುವ ಹಕ್ಕಿಲ್ಲ...?

ತಲೆಯ ಮೇಲಿದ್ದ ಕುಂಚಿಗೆ ಗಾಳಿಯಲ್ಲಿ ಹಾರಾಡಿ ಮುಖದ ಮೇಲೆ ಬಿದ್ದುದು ಅನುಕೂಲವಾಯಿತು. ಆ ನೀಲವರ್ಣದ ಬಟ್ಟೆಯೊಳಗೆ ದೇಹ ಮುಖ ಮತ್ತು ಮನಸ್ಸು ಉಕ್ಕಿ ಅಳುತ್ತಿರಲು ಗಾಡಿ ಚಲಿಸುತ್ತಿತ್ತು.

ವೃದ್ಧೆ ಇನ್‌ವಿಲಟಾ ಕೈಯಲ್ಲಿದ್ದ ಚಿಕ್ಕ ಸಿಲುಬೆಯಲ್ಲಿ ಮಗ್ನಳಾಗಿ ಕರ್ತನನ್ನು ಪ್ರಾರ್ಥಿಸುತ್ತಿದ್ದಳು.

## 2

ಆ ರಾತ್ರಿಯೆಲ್ಲಾ ಕ್ಯಾಥರೀನ್ ನಿದ್ರೆಯಿಲ್ಲದೆ ಹಾಸುಗೆಯಲ್ಲಿ ಮಲಗಿ ತನ್ನ ಪಾಪಗಳಿಗಾಗಿ ದೇವರ ಬಳಿ ಬೇಡಿಕೊಳ್ಳುತ್ತಿದ್ದಳು.

ಕೆಲವು ಬಾರಿ ಆ ತರುಣ ಮುಖ, ಮಂದಹಾಸ ನೆನಪು ಮಾಡಿಕೊಂಡು ನಿಟ್ಟುಸಿರು ಬಿಟ್ಟಳು.

ನಂತರ ಆಯಾಸಗೊಂಡು ಮಲಗಿದ ನಂತರ ಕನಸು ಕಂಡಳು.

ಕನಸಿನಲ್ಲಿ...

...ಒಂದು ದೊಡ್ಡ ಸಿಲುಬೆ, ವೃದ್ಧೆ ಇನ್‌ವಿಲಟಾ ಅದನ್ನು ಎತ್ತಿಕೊಂಡು ಭುಜದ ಮೇಲೆ ಹೊತ್ತು ನಡೆಯುತ್ತಿದ್ದಳು. ಬಹಳ ದೂರ ನಡೆದ ನಂತರ ಅವಳ ಆಕೃತಿ ಮಾತಾ ಮಂದಿರದಂತೆ ದೊಡ್ಡ ಆಕೃತಿಯಾಯಿತು; ಭುಜದ ಮೇಲೆ ಹೊತ್ತು ಬಂದ ಬ್ರಹ್ಮಾಂಡವಾದ ಸಿಲುಬೆ ಅವಳ ಅಂಗೈಯಲ್ಲಿತ್ತು. ಅದನ್ನು ನೋಡಿಕೊಂಡೇ ನಸು ನಗೆಯಿಂದ ಕರ್ತನನ್ನು ಜಪಿಸಿಕೊಂಡಿದ್ದಳು ಇನ್‌ವಿಲಟಾ.

ಮಾತಾಮಂದಿರದ ಗಂಟೆ ಮೊಳಗುತ್ತಿತ್ತು. ಆಗಸದಿಂದ ಪುನೀತ ಪ್ರಭೆ ಹಾದು ಬಂದು ಇನ್‌ವಿಲಟಾಳ ಕೊರಳು ಮುಟ್ಟಿತು...

ಮಾತಾಮಂದಿರದ ಗಂಟೆ ಮೊಳಗಿತು.

ಇನ್ನೊಂದು ಹಿರಿದಾದ ಸಿಲುಬೆ. ಅದನ್ನು ಹೊರಲು ಕ್ಯಾಥರೀನ್ ಬಂದಳು. ಬಾಗಿ ಎತ್ತಿದಳು. ಸಿಲುಬೆಯನ್ನು ಅಲುಗಿಸಲು ಕೂಡ ಅವಳಿಂದ ಸಾಧ್ಯವಾಗಲಿಲ್ಲ... ತಿಣಕಿದಳು... ಅವಳ ಬೆನ್ನಮೇಲೆ ಛಾಟಿಯಿಂದ ಹೊಡೆದಂತೆ ವೇದನೆ... ಸಿಲುಬೆಯನ್ನು ಅಲುಗಾಡಿಸಲೂ ಆಗಲಿಲ್ಲ...

ಆಗ ದೂರದಲ್ಲಿ ಒಂದು ಧ್ವನಿ ಕೇಳಿಸಿತು :

"ಕ್ಯಾಥರೀನ್... ನನ್ನ ಪ್ರಿಯಳೇ... ಕ್ಯಾಥರೀನ್!"

ಅವಳು ಹಿಂತಿರುಗಿ ನೋಡಿದಳು; ಆ ತರುಣ ಓಡಿ ಬರುತ್ತಿದ್ದ. ಕ್ಯಾಥರೀನ್ ಸಿಲುಬೆಯನ್ನು ಬಿಟ್ಟು ಅವನನ್ನು ಕುರಿತು ಧಾವಿಸಿದಳು. ಅವನ ಬಾಹುಬಂಧನದಲ್ಲಿ ಸಿಲುಕಿ ಅವನ ಎದೆಯಲ್ಲಿ ಮುಖ ಮುಚ್ಚಿಕೊಂಡು ಅತ್ತಳು. ಅವನು ಅವಳ ಮುಖವನ್ನೆತ್ತಿ ಅವಳ ತುಟಿಗಳಿಗೆ ಚುಂಬನವಿತ್ತ...

ಆಹಾ ಆ ಚುಂಬನ...!

'ಇದು ಪಾಪವೇ...? ನಾನು ಪಾಪಿಯಾಗಿಯೇ ಇರಲು ಬಯಸುತ್ತೇನೆ...?" ಎಂದು ಅವನನ್ನು ನಿಕಟವಾಗಿ ಅಪ್ಪಿಕೊಳ್ಳಲು...

ಮಾತಾಮಂದಿರದ ಗಂಟೆ ಮೊಳಗಿತು...

ಎಚ್ಚರಿಕೆಯಾಯಿತು, ಕಣ್ಣೀರು, ಅಪರಾಧವೆಸಗಿದ ಭಾವನೆ...

ತಲೆಬಾಗಿ ಎಲ್ಲರೊಂದಿಗೆ ಸೇರಿ ಮೊಳಕಾಲೂರಿ ಕರ್ತನನ್ನು ಕುರಿತು ಜಪಿಸುವಾಗ...

ಅಯ್ಯೋ! ಪಾಪ... ಮನಸಾರೆ ಕಣ್ಣೀರು ಬಿಡುವುದಾಯಿತು.

ಹೃದಯದಲ್ಲಿ ಭಾರವಾದ ಪಾಪದ ಹೊರೆ ಕಣ್ಣುಗಳ ಮೂಲಕ ಕಣ್ಣೀರಾಗಿ ಕರಗಿ ಬಿಡುತ್ತದೆಯೆ...?

## 3

ಅಂದು ಫಾದರ್ ಬಳಿಗೆ ಕನ್‌ಫೆಷನ್ನಿಗಾಗಿ ಹೋದಳು ಕ್ಯಾಥರೀನ್.

ಶುದ್ಧವಾದ ಅಂಗಿ ಧರಿಸಿ, ಕಣ್ಣುಗಳಲ್ಲಿ ಕರುಣೆಯ ಪ್ರಭೆ ತುಂಬಿಕೊಂಡು ಮುಗ್ಧ ಮಂದಹಾಸದಿಂದ ಕರೆಯುವ ಅವರ ಮುಖವನ್ನು ನೋಡಿ ಅವರ ಬಳಿಗೆ ಹೋಗಿ, ನಾಚಿಕೆಯಿಂದ ಹಿಂತೆಗೆದು ನಡೆದಳು ಕ್ಯಾಥರೀನ್.

"ಫಾದರ್"

"ಮಗಳೇ..." ಎಂದು ಅವರು ಅವಳಿಗೆ ಕಿವಿಗೊಟ್ಟರು.

"ನಾನು ಮಹಾಪಾಪಿ... ಮಹಾಪರಾಧ ಮಾಡಿಬಿಟ್ಟೆ... ನಾನು ಪಾಪಿ...

"ಪಾಪಿಗಳನ್ನೇ ದೇವರು ರಕ್ಷಿಸುತ್ತಾನೆ ಮಗಳೇ... ಏಳು 'ನೀತಿವಂತರನ್ನೇ ಅಲ್ಲ – ಪಾಪಿಗಳನ್ನೂ ಅವರ ಮನಸ್ಸಿನ ಪರಿವರ್ತನೆಗಾಗಿ ಕರೆಯುತ್ತಿದ್ದೇನೆ' ಎಂದರು – ಎಂದು ನೀನು ಓದಿಲ್ಲವೆ...? ನಿನ್ನ ಪಾಪಗಳನ್ನು ನಿನ್ನ ಬಾಯಿಂದಲೇ ಹೇಳಿ ಪಶ್ಚಾತ್ತಾಪಪಟ್ಟರೆ ಕ್ಷಮೆಯುಂಟು ಮಗಳೇ..."

ಕ್ಯಾಥರೀನ್ ಅವರ ಪಾದಗಳಿಗೆ ಬಾಗಿ ಒಡಲು ಕಂಪಿಸುತ್ತಿರಲು ಕಣ್ಣೀರಿಟ್ಟು ಹೇಳಿದಳು. ಮಾತುಗಳು ಮೆಲ್ಲನೆ ಬಂದುವು. ಫಾದರ್ ಆಶ್ಚರ್ಯಪಟ್ಟರು.

ಅವಳು "ಫಾದರ್... ನಾನು ಮಾಡಿದ ಮಹಾಪಾಪ ಕ್ಷಮಿಸಲಾಗದ ಪಾಪ... ಓ... ಕ್ರೈಸ್ತ ಭಗಿನಿಯಾಗಿ ನಾನು ಬದಲಾವಣೆ ಹೊಂದಿದುದು... ಓಹ್ ಓಹ್..." – ಅವಳು ಬಿಕ್ಕಿ ಬಿಕ್ಕಿ ಅತ್ತಳು. ತನ್ನನ್ನೇ ಶಿಲುಬೆಯಲ್ಲಿ ಏರಿಸಿದಂತೆ ಒದ್ದಾಡಿದಳು.

# 13. ನಾನೇನು ಮಾಡಲಿ, ಹೇಳಿ

ನಲವತ್ತು ವರ್ಷಗಳಾದುವು... ಈ ಮನೆಗೆ ಸೊಸೆಯಾಗಿ ಬಂದು...ಕೈ ತುಂಬಾ ಒಂದು ಗೂಡೆ ಬೊಂಬೆಗಳನ್ನು ಎತ್ತಿಕೊಂಡು... ತಂದೆಯವರು ಎತ್ತಿಕೊಂಡು ಬಂದುಬಿಟ್ಟ ರಲ್ಲ... ಆಗ ತಾಯಿ – ಅವರೇ, ನನ್ನ ಅತ್ತೆ ಇದ್ದರು... ಅತ್ತೆಗೆ ಅತ್ತೆಯೆ, ತಾಯಿಗೆ ತಾಯಿಯೇ... ಹೆತ್ತ ತಾಯಿಗೆ ಮಗಳಾಗಿದ್ದುದು ಐದು ವರ್ಷ ಮಾತ್ರ ತಾನೆ... ಉಳಿದ ಕಾಲವೆಲ್ಲಾ ಅತ್ತೆಗೆ ಸೊಸೆ ತಾನೆ... ಅಂಗಳದಲ್ಲಿ ನನ್ನನ್ನು ಇಳಿಸಿ ಟವಲಿನಿಂದ ಮುಖ ವನ್ನು ಮುಚ್ಚಿಕೊಂಡು ತಂದೆಯವರು ಯಾಕೆ ಅತ್ತರೆಂದು ಈಗಲೂ ನನಗೆ ಅರ್ಥ ವಾಗಿಲ್ಲ... ಇದೋ ಈ ಕೋಣೆಯಲ್ಲಿ ಆಗಲೇ ಸ್ಥಳ ಸಂಕೋಚವೇನೂ ಇರಲಿಲ್ಲ – ಆ ಇಟ್ಟಿಗೆ ನೆಲದ ಮೇಲೆಯೇ ಬಂಗರವನ್ನು ಬಿಡಬೇಕೆಂದು ನಾಲಿಗೆಯನ್ನು ಚಾಚಿ ಕಚ್ಚಿ ಕೊಂಡು ಬೀಸಿ ಬೀಸಿ ಬಂಗರವನ್ನು ಆಡಿಸುತ್ತಾ ನಿಂತಿದ್ದರಲ್ಲ, ಅವರು ನನಗೆ 'ಗಂಡ' ಎಂದು ಅರ್ಥವಾಗುವುದಕ್ಕೇ ಬಹಳ ದಿನಗಳು ಹಿಡಿಸಿದುವು... ಅದಕ್ಕಾಗಿ ಪಟಪಟ ಎಂದು ತಲೆಯ ಮೇಲೆ ಹೊಡೆಯುವುದೇನು...? 'ಹೋಗೋ' ಎಂದು ಒಂದು ದಿನ ಚೆನ್ನಾಗಿ ಬೈದುಬಿಟ್ಟೆ... ಅಡುಗೆಮನೆಯಲ್ಲಿ ಕೆಲಸ ಮಾಡುತ್ತಿದ್ದ ಅವರು ಓಡಿಬಂದರು : "ಅಯ್ಯಯ್ಯೋ... ಏನೇ ಇದು? ಅವನು... ಇವನು ಎಂದು ಅವನನ್ನು?"

"ಅವನು ಮಾತ್ರ ನನ್ನನ್ನು ಹೊಡೆಯಬಹುದೇ?"

...ತಾಯಿಗೆ ಒಂದು ಕಡೆ ನಗು... ನನ್ನನ್ನು ಅಪ್ಪಿ ಹಿಡಿದುಕೊಂಡು, ನಮ್ಮ ಸಂಬಂಧವನ್ನು ವಿವರಿಸಿ ಹೇಳುತ್ತಿದ್ದರು... ಆದರೆ, ಎಲ್ಲಾ ಅರ್ಥವಾಗುವ ಕಾಲ ಬಂದಾಗ ತಾನೆ ಅರ್ಥವಾಗುತ್ತೆ...? ನೆನೆಸಿಕೊಂಡರೆ, ಎಲ್ಲವೂ ಆಶ್ಚರ್ಯ... ಇವರನ್ನು ಕಂಡರೆ ನನಗೆ ಹೇಗೆ ಇಷ್ಟು ಭಯವೇರ್ಪಟ್ಟಿತು? ಭಯ ಎಂದರೆ, ಅದು ಸಂತೋಷ ದಿಂದ ಭಯ... ಮರ್ಯಾದೆಯಿಂದ ಕೂಡಿದ ಭಯ, ಭಯ ಅನ್ನುವುದು ಸರಿಯಲ್ಲ... ಅದು ಒಂದು ವಿಧದ ಭಕ್ತಿಯೆನ್ನಬಹುದು... ಹೇಗೋ ಉಂಟಾಯಿತು... ಉಂ... ನಲವತ್ತು ವರ್ಷಗಳಾದುವು...

'ಈ ವ್ಯಕ್ತಿಯನ್ನು ಕಟ್ಟಿಕೊಂಡು ನಾನು ಏನು ಕಂಡೆ? ಏನುಂಟು?' ಎಂದು ಕೊಳದ ತೀರದಿಂದ ದೇವಾಲಯದ ಪ್ರಾಕಾರದ ವರೆಗೆ ಗೊಣಗಿಕೊಂಡು ಕಣ್ಣೀರು ಬಿಡುತ್ತಾ ಕೆಲವರೆಲ್ಲಾ ನೊಂದುಕೊಂಡು ತಿರುಗಾಡುತ್ತಾರಲ್ಲ, ಅವರದೆಲ್ಲಾ ಅದೇನು ಜನ್ಮವೊ!

ನನಗೆ ಒಂದು ಕೊರತೆಯೂ ಇಲ್ಲ... ಹೌದು... ಯಾವ ದೇವಸ್ಥಾನದಲ್ಲಿ ಬೇಕಾ ದರೂ ನಿಂತು, ಮಡಿಯುಟ್ಟುಕೊಂಡು ಹೇಳುತ್ತೇನೆ – ನನಗೆ ಯಾವ ಕೊರತೆಯೂ

ಇಲ್ಲ... ನೋಡಿದವರು ಹೇಳುತ್ತಾರೆ... ನನಗೆ ಮಕ್ಕಳಿಲ್ಲವೆಂಬುದನ್ನೇ ದೊಡ್ಡ ಕೊರತೆಯಾಗಿ ಆಡಿಕೊಳ್ಳುತ್ತಾರೆ... ಹೇಳುತ್ತಾರೆ... ನಾನೇ ಕೇಳಿದ್ದೇನೆ. ಯಾಕೆ... ಸುಳ್ಳು ಯಾಕೆ ಹೇಳಬೇಕು...? ನನಗೆ ಆ ಕೊರತೆ ಸ್ವಲ್ಪ ಕಾಲ ಇತ್ತು. ಅದೆಷ್ಟು ಅಜ್ಞಾನ ಎಂದು ಆಮೇಲೆ ಅರ್ಥವಾಯಿತು... ನನಗೆ ಸ್ವತಃ ಅರ್ಥವಾಗಲಿಲ್ಲ... ಅವರು ವಿವರಿಸಿ ಹೇಳಿದರು. ಅದರಿಂದ ಮಾತ್ರ ಅದು ಸಾಧ್ಯ. ಮಾತನಾಡತೊಡಗಿದರೆ ಅದೆಲ್ಲಿಂದ ಆ ಸೂತ್ರಗಳೆಲ್ಲಾ ಕೈಕಟ್ಟಿಕೊಂಡು ಬಂದು ಅವರ ಮುಂದೆ ನಿಲ್ಲುತ್ತವೆಯೋ ಶಾಸ್ತ್ರಗಳಿಂದ, ವೇದಗಳಿಂದ ನಿರೂಪಣೆಗಳನ್ನೆತ್ತಿ ಹೇಳಿ... ಅದೆಂತಹ ಸಂದೇಹವಾಗಿದ್ದರೂ ಸರಿ, ಯಾವ ರೀತಿಯ ಅಜ್ಞಾನದ ಚಿಂತೆಯಾದರೂ ಸರಿ, ಅವರು ಮಾತುಗಳಿಂದಲೇ ಹೊಡೆದೋಡಿಸುವ ಸಾಮರ್ಥ್ಯ... ಅಂತಹುದು ಅವರ ವಾಗ್ಬಲ... ಅಂತಹ ಜ್ಞಾನ... ಅದು ಅವರಿಗೆ ಮಾತ್ರ ಸಾಧ್ಯ... ಏನೋ ನಮ್ಮವರು ಎಂಬುದಕ್ಕಾಗಿ ಅಪಾರವಾಗಿ ಹೊಗಳುತ್ತಿದ್ದೇನೆಂದು ಭಾವಿಸಬೇಡಿ... ಅವರನ್ನು ಹೊಗಳುವ ತಿಳುವಳಿಕೆ ನನಗಿಲ್ಲ. ಅಂತಹ ವಿದ್ವಾಂಸರಿಗೆ ಸರಿಯಾದ ನಿರಕ್ಷರಕುಕ್ಷಿಯಾದ ನಾನು ಸಹಧರ್ಮಿಣಿಯಾಗಿದ್ದೇನೆ. ನೋಡಿ. ಈ ಬಗ್ಗೆ ನಾನೇ ಒಂದು ಬಾರಿ ಅವರೊಂದಿಗೆ ಹೇಳಿದೆ. ದೊಡ್ಡ ಭಾಷಣವನ್ನೇ ಮಾಡಿದರು. ಅವರಿಗೆ ನಾನು ಸಹಧರ್ಮಿಣಿಯಾಗಿರುವುದು ಎಷ್ಟು ಹೊಂದಾಣಿಕೆ ಎಂದರೆ, ಅವರಿಗೆ ಈ ಬಗ್ಗೆ ಎಷ್ಟು ಸಂತೋಷವೆಂದರೆ ಎಂದು ನನ್ನ ಬಳಿ ಹೇಳಿದುದೆಲ್ಲವನ್ನೂ ನಾನು ಹೇಗೆ ಹೇಳಲಿ? ಅವರಿಗೆ ಸಹಧರ್ಮಿಣಿಯಾಗಿರಲು ನನಗೆ ಅರ್ಹತೆಯಿದೆ ಎಂಬುದು ಸತ್ಯವೇ ಆಗಿರಲಿ. ಅದರಿಂದ ಅವರನ್ನು ಹೊಗಳುವ ಯೋಗ್ಯತೆ ನನಗೆ ಬಂದಿತೆಂದು ಅರ್ಥವೇ?

ಮಹಾ ವಿದ್ವಾನ್ ಶ್ರೀಮಾನ್... ಎಂದು ಹೇಳಿದರೆ ಈ ರಾಜಧಾನಿಗೇ ಗೊತ್ತು. ಇವರ ಪ್ರಖ್ಯಾತಿ ಮದರಾಸೇನು, ಕಾಶಿಯವರೆಗೆ ಹರಡಿತ್ತು...

ಇವರಲ್ಲಿ ವಿದ್ಯಾಭ್ಯಾಸ ಮಾಡಿದವರು, ಈ ಮನೆಯಲ್ಲಿ ನನಗೆ ಸಹಾಯಕವಾಗಿ ಕೆಲಸ ಮಾಡಿದವರು ಎಷ್ಟು ಮಂದಿ ಕಲೆಕ್ಟರಾಗಿ ದೊಡ್ಡ ದೊಡ್ಡ ಉದ್ಯೋಗಗಳಲ್ಲಿ ಇದ್ದಾರೆ ಗೊತ್ತೆ?

ನಾವೇ ಹೆತ್ತು ನಾವೇ ಬೆಳೆಸಿ ನಾಯಿ ಬೆಕ್ಕಿನಂತಿದ್ದರೆ ಆಯಿತೆ?

ಇದೋ, ಈಗಲೂ ಶಂಕರಮಠದ ಜಗುಲಿಯ ಮೇಲೆ ಎದುರುಗಡೆ ಸಾಲಾಗಿ ಮಕ್ಕಳನ್ನು ಕೂಡಿಸಿಕೊಂಡು ಅವರು ಪಾಠ ಹೇಳುತ್ತಿದ್ದಾರೆ... ಅವರ ಕಂಠ ಮಾತ್ರ ಪ್ರತ್ಯೇಕವಾಗಿ ಘನವಾಗಿ ನಾಭಿಯಿಂದ ಹೊರಟು ಬರುವುದನ್ನು ಕೇಳಿದಾಗ ರೋಮಾಂಚನವಾಗುತ್ತದೆ. ಆಮೇಲೆ ಮಕ್ಕಳ ಗುಂಪು ಕೂಡಿ ಉಚ್ಚರಿಸುವುದು... ಆ ಮಕ್ಕಳು ಅಷ್ಟು ಶ್ರದ್ಧೆಯಿಂದ ಭಕ್ತಿಯಿಂದ, ಸಣ್ಣ ಧ್ವನಿಗಳಲ್ಲಿ ಅವರಂತೆ ಉಚ್ಚರಿಸಬೇಕೆಂದು ಪ್ರಯಾಸಪಟ್ಟು ಆ ಘನತೆ ಇಲ್ಲದೆ ಆ ಸ್ಥಾಯಿ ಮುಟ್ಟಲು ಹೊಟ್ಟೆಯೆತ್ತಿಕೊಂಡು ಎದೆಯ ಮೇಲೆ

ಕೈಕಟ್ಟಿ ಉಚ್ಚರಿಸುವರಲ್ಲ... ಅದು ಕಿವಿಯಲ್ಲಿ ಬಿದ್ದಾಗ, ಹೊಟ್ಟೆಯಲ್ಲಿ ತಳಮಳ ವಾಗುತ್ತದಲ್ಲ, ಅದು ಹೆತ್ತವರಿಗೆ ಮಾತ್ರ ಉಂಟಾಗುವುದೋ?

ಅವರು ಹೇಳುತ್ತಿದ್ದರು... "ಮಕ್ಕಳನ್ನು ಹೆರುವುದು ದೊಡ್ಡ ಕೆಲಸವೇನಲ್ಲ; ಅವುಗಳ ಹೊಟ್ಟೆಯ ಪಾಡು ನೋಡಿ ಬೆಳೆಸುವುದೂ ಮಹತ್ಕಾರ್ಯವಲ್ಲ. ಅರಿವು, ಶಿಕ್ಷಣ ಕೊಟ್ಟು ಜ್ಞಾನವಂತರನ್ನಾಗಿ ಮಾಡುವುದೇ ದೊಡ್ಡ ಕೆಲಸ. ನಾವೆಲ್ಲಾ ಎಲ್ಲರಂತೆ ಸಾಧಾರಣವಾಗಿ ಮಕ್ಕಳನ್ನು ಪಡೆದೆವೆಂಬುದಕ್ಕಿಂತ ಈ ರೀತಿ ಜ್ಞಾನಿಗಳ ಸೃಷ್ಟಿ ಮಾಡಿದೆ ವೆಂಬುದೇ ಶ್ರೇಷ್ಠವಾದುದು..." ಇನ್ನೂ ಏನೇನೋ ಹೇಳುತ್ತಿದ್ದರು. ಅದನ್ನೆಲ್ಲಾ ಮತ್ತೆ ಹಾಗೆಯೇ ಹೇಳುವುದಕ್ಕೆ ನನಗೆ ಬರುತ್ತದೆಯೆ...? ಆದರೆ, ಅದು ಎಷ್ಟು ಸತ್ಯವೆಂಬುದು ನನ್ನ ಮನಸ್ಸಿಗೆ ಅರ್ಥವಾಗುತ್ತದೆ.

ಇವರಲ್ಲಿ ವಿದ್ಯೆ ಕಲಿತು ಈ ನಗರದಲ್ಲಿ ಯಾವುದೋ ಸಂಸ್ಕೃತ ಕಾಲೇಜಿನಲ್ಲಿ ಪ್ರೊಫೆಸ ರಾಗಿರುವನಲ್ಲಾ ಶೀಮಾಚ್ಚು... ಈಗ ಪಂಡಿತ ಶ್ರೀನಿವಾಸ ಶಾಸ್ತ್ರಿಗಳೆಂದು ಹೆಸರಂತೆ... ಕೇಳುವಾಗ ಮನಸ್ಸಿಗೆ ಎಷ್ಟು ಹರ್ಷವೆನಿಸುತ್ತದೆ... ಹೆತ್ತರೆ ಮಾತ್ರ ಹಾಗನ್ನಿಸುವು ದೇನು...? ಹೆತ್ತವರು ಇಲ್ಲೇ ಇದ್ದಾರೆ... ತನ್ನ ಮಗ ತನ್ನನ್ನು ಸರಿಯಾಗಿ ನೋಡಿ ಕೊಳ್ಳಲಿಲ್ಲವೆಂದು ಸದಾ ಶಪಿಸಿಕೊಂಡು...

ಅವರು ಒಂದೊಂದು ವಿಚಾರ ಹೇಳುವಾಗಲೂ ಏನೋ ಚಮತ್ಕಾರದಿಂದ ತರ್ಕ ಮಾಡಿ ಸಾಧಿಸುವಂತೆ ತೋರುತ್ತದೆ. ಥಟ್ಟನೆ 'ಅವತ್ತೇ ಅವರು ಎಷ್ಟು ಓರಣವಾಗಿ ಹೇಳಿದರು' ಎಂದು ನೆನೆಸಿಕೊಂಡು ಆಶ್ಚರ್ಯಪಡುವಂತೆ ಪ್ರತಿಯೊಂದು ಘಟನೆ ಸಂಭವಿಸುತ್ತದೆ.

ಆ ದಿನ ದೇವಸ್ಥಾನಕ್ಕೆ ಹೋಗಿ ಬರುವಾಗ ಶೀಮಾಚ್ಚು ತಾಯಿ ಒಂದು ಕ್ಷಣ ನಿಲ್ಲಿಸಿ, ಆ ಶೀಮಾಚ್ಚು ಇವರನ್ನು ತಿರುಗಿ ಕೂಡ ನೋಡದೆ ಅತ್ತೆಯ ಮನೆಯೇ ಗತಿ ಎಂದು ಹೋದುದನ್ನೂ... ಅವನನ್ನು ಬೆಳೆಸುವುದಕ್ಕೂ ವಿದ್ಯಾಭ್ಯಾಸ ಮಾಡಿಸುವುದಕ್ಕೂ ಪಟ್ಟ ಕಷ್ಟವನ್ನು ಸ್ವಲ್ಪವೂ ಕೃತಜ್ಞತೆಯಿಲ್ಲದೆ ಅವನು ಮರೆತುಬಿಟ್ಟನೆಂದು ಹೇಳಿ ಕೊಳ್ಳುತ್ತಾ ಅತ್ತು ಅವನನ್ನು ಶಪಿಸಿದರಲ್ಲಾ... ಆಗ ನನಗೆನಿಸಿತು... ಹೀಗೆ ಹೆರು ವುದೂ ಬೇಡ, ಹೀಗೆ ಶಪಿಸುವುದೂ ಬೇಡ ಎಂದು... ಏನೋ ಆಕೆಯ ಮನಸ್ಸಿನ ಸಮಾಧಾನಕ್ಕಾಗಿ ನಾನೂ ಹೇಳಿದ್ದನ್ನು ಕೇಳಿ ತಲೆಯಾಡಿಸಿದೆನೇ ಹೊರತು, ನನಗೆ ಅರ್ಥ ವಾಯಿತು, ಈ ವೃದ್ಧೆ ಅಸೂಯೆಯ ಕುಂಡದಲ್ಲಿ ಬಿದ್ದು ಸುಟ್ಟು ಹೋಗುತ್ತಿದ್ದಾರೆಂದು! ವೃದ್ಧೆಗೆ ಇಲ್ಲಿ ಯಾವ ಕೊರತೆಯೂ ಇಲ್ಲ. ಸೌಖ್ಯವಾಗಿ ಚೆನ್ನಾಗಿಯೇ ಇದ್ದಾರೆ... ಆದರೂ ತಾನು ಹೆತ್ತ ಮಗನಿಂದ ಬೇರೆಯವರು ತನಗಿಂತ ಸುಖವಾಗಿದ್ದುಬಿಟ್ಟಾರು ಎಂಬ ಕೋಪ, ಅವರ ಮನಸ್ಸನ್ನು ಹಿಡಿದು ಅಲ್ಲಾಡಿಸುತ್ತಿತ್ತು... 'ಸಂಬಂಧವನ್ನು ಹೇಳಿಕೊಳ್ಳುವವರಿಗೆ ಬಂಧನವನ್ನು ಮೆಚ್ಚುವುದು ಬರದು' ಎಂದು.

ಎಲ್ಲಾ ಇವರು ಹೇಳಿದ್ದೇ ನನಗೆ ಅರ್ಥವಾಗುವುದು... ಇಲ್ಲದಿದ್ದರೆ ಈ ವೃದ್ಧೆ ಯೊಂದಿಗೆ ಸೇರಿ ನಾನೂ ಶೀಮಾಚ್ಛು ಬಗ್ಗೆ ಅದೇ ಭಾವನೆ ಹೊಂದಿರುತ್ತಿದ್ದೆ.

ಇವರು ಎಲ್ಲವನ್ನೂ ಇದು ಹೀಗೆ ಅಂತ ಆಳವಾಗಿ ಬಿಡಿಸಿ ಹೇಗೆ ನೋಡುತ್ತಾರೊ! ತನಗೆ ಅದರಿಂದ ನಷ್ಟವೇ – ಲಾಭವೇ ಅಂತ ಕೂಡ ಯೋಚಿಸುವುದಿಲ್ಲ. ಎಷ್ಟು ಮಂದಿ ಅದನ್ನು ಒಪ್ಪುತ್ತಾರೆ, ಎಷ್ಟು ಮಂದಿ ಅದನ್ನು ಒಪ್ಪುವುದಿಲ್ಲ ಎಂಬುದರ ಬಗ್ಗೆಯೂ ಯೋಚಿಸುವುದಿಲ್ಲ. ಅವರ ಶಾಸ್ತ್ರಕ್ಕೆ, ತರ್ಕಕ್ಕೆ, ಒಪ್ಪದ ಕೆಲಸವನ್ನು ಲೋಕವೇ ಅವ ರೆದುರು ಬಂದು ನಿಂತರೂ 'ಥೂ' ಅಂತ ಬದಿಗೆ ಸರಿಸಿಬಿಡುತ್ತಾರೆ... ಹಾಗೆ ಸರಿಸಿದು ದನ್ನು ಎಷ್ಟು ನ್ಯಾಯವೆಂದು ಲೋಕವನ್ನೇ ಹಿಡಿದೆಳೆದು ಕೂಡಿಸಿ ವಾದ ಮಾಡಲೂ ಸಿದ್ಧ. ನಾನೂ ಇಷ್ಟು ವರ್ಷ ನೋಡುತ್ತಿದ್ದೇನಲ್ಲಾ... ಒಬ್ಬರಾದರೂ 'ಅದೇನೋ ನೀವು ಹೇಳುವುದು ಸರಿಯಲ್ಲ ಸ್ವಾಮಿ' ಎಂದು ಹೇಳಿ ಹೋದುದಿಲ್ಲ. ಆ ರೀತಿ ವಾದಿಸುತ್ತಿದ್ದರು.

ಅವರೊಂದಿಗೆ ಜಗುಲಿಯ ಮೇಲೆ ಕೂತು ಇವರು ಮಾತನಾಡುವಾಗ ನಾನು ಅವರ ಬೆನ್ನ ಹಿಂದೆ ಕೋಣೆಯಲ್ಲಿ ಕುಳಿತು ಕೇಳಿಸಿಕೊಳ್ಳುತ್ತಿದ್ದೆ. ಅವರು ಮಾತನಾಡುವುದ ರಲ್ಲಿ ಬಹಳ ಅಂಶಗಳು ನನಗೆ ಅರ್ಥವಾಗುವುದೇ ಇಲ್ಲ. ಅದೇನು ಇಂಗ್ಲೀಷ್ ಮಾತ ನಾಡುತ್ತಾರೆ! ನನಗೆ ಗೊತ್ತಾಗಿ ಇಪ್ಪತ್ತು ವರ್ಷದ ನಂತರ ಇವರು ಇಂಗ್ಲೀಷ್ ಭಾಷೆ ಕಲಿತರು. ಒಬ್ಬರಿಗೆ ಸಂಸ್ಕೃತ ಪಾಠ ಹೇಳಿ ಕೊಟ್ಟು – ಅವರಿಗೆ ಇವರಿಗಿಂತ ವಯಸ್ಸು ಹಿರಿದು – ಅವರ ಬಳಿ ಇವರು ಇಂಗ್ಲೀಷ್ ಕಲಿತರು. ಇಲ್ಲಿಂದ ಕುಂಭಕೋಣಕ್ಕೆ ಹೋಗಿ ಏನೇನೋ ಪರೀಕ್ಷೆಗೆ ಕಟ್ಟಿ ಬರೆದು ಬಂದರು.

ಈಗ ಇವರು ಬರೆದ ಗ್ರಂಥಗಳನ್ನು ಅಲ್ಲಿ ಓದುವವರಿಗೆ ಪಠ್ಯಪುಸ್ತಕಗಳನ್ನಾಗಿ ಇಟ್ಟಿರುವರಂತೆ.

ಹತ್ತು ವರ್ಷಕ್ಕೆ ಹಿಂದೆ ಕಾಶಿಯಲ್ಲಿ ಯಾವುದೋ ಮಹಾ ಸಮ್ಮೇಳನವೆಂದು ಇವರು ಹೋದಾಗ ನಾನೂ ಜೊತೆಗೆ ಹೋದೆ. ಇವರಿಗೆ ಏನೇನೋ ಪದವಿಗಳನ್ನು ಇತ್ತರು... ನನಗೆ ಬಹಳ ಹೆಮ್ಮೆಯೆನಿಸಿತು. ನಾನು ಬೆಳ್ಳಿ ಕೊಡದ ತುಂಬಾ ಗಂಗಾ ತೀರ್ಥವನ್ನು ತಂದು ಊರಿನವರಿಗೆಲ್ಲಾ ಹಂಚಿದೆ. ನನಗೇನು ಕೊರತೆ?

ಆಗ ಕಾಶಿಯಿಂದ ಹಿಂತಿರುಗುವಾಗ ಮದರಾಸಿನಲ್ಲಿ ಶೀಮಾಚ್ಛು ಮನೆಯಲ್ಲಿ ತಂಗಿ ದೆವು. ಅಲ್ಲಿನ ದೊಡ್ಡ ರೈಲ್ವೆ ನಿಲ್ದಾಣಕ್ಕೆ ಶೀಮಾಚ್ಛು ಕಾರನ್ನು ತಂದಿದ್ದ. ಪ್ಲಾಟ್‌ಫಾರಂ ನಲ್ಲಿ ನಮ್ಮನ್ನು ನಿಲ್ಲಿಸಿ ಸಾಷ್ಟಾಂಗವಾಗಿ ನಮಸ್ಕಾರ ಮಾಡಿದರು. ಸಮುದ್ರ ತೀರಕ್ಕೆ ಕರೆದುಕೊಂಡು ಹೋಗಿ ತೋರಿಸಿದರು. ಮದರಾಸಿನಲ್ಲಿ ಕಾರು ಇಲ್ಲದಿದ್ದರೆ ಕೆಲಸ ನಡೆಯ ದಂತೆ! ಆಗಲೂ ಹಿಂದಿನಂತೆಯೇ ಇವರ ಎದುರು ಕೈಕಟ್ಟಿ ನಿಂತು ಏನೇನೋ ಸಂದೇಹ ಗಳನ್ನು ಬಗೆಹರಿಸಿಕೊಂಡ. ಆದರೆ ಕಾಲೇಜಿಗೆ ಹೋಗುವಾಗ ನೋಡುವುದಕ್ಕೆ ನನಗೇ

ಭಯವಾಗಿತ್ತು. ದೊರೆಯಂತೆ ಏನೇನೋ ಉಟ್ಟಿದ್ದ, ತೊಟ್ಟಿದ್ದ. ಇವರು ಏನಪ್ಪ ಅಂದರೆ, ಆ ವೇಷ ನೋಡಿ ಗಟ್ಟಿಯಾಗಿ ನಕ್ಕರು.

ಇದಾದ ಮೇಲೆ ಒಂದು ದಿನ ಈ ಮನೆ ಮುಂದೆ ಒಂದು ದೊಡ್ಡ ಕಾರು ಬಂದು ನಿಂತಿತು. ಯಾರಾರೋ ದೊಡ್ಡ ಮನುಷ್ಯರೆಲ್ಲಾ – ಶೀಮಾಚ್ಚು ಪ್ರೊಫೆಸರ್ರಾಗಿದ್ದಾನಲ್ಲಾ ಆ ಕಾಲೇಜಿನವರಂತೆ – ಎಲ್ಲರೂ ಬಂದು ಈ ಮನೆಯ ಜಗುಲಿಯ ಮೇಲೆ ಕುಳಿತರು. ಶೀಮಾಚ್ಚು ಮಾತ್ರ ಮನೆಯವನಂತೆ ಅಡುಗೆಯ ಮನೆಯ ವರೆಗೆ ಬಂದುಬಿಟ್ಟ. ನಾನು ಅವನ ಹತ್ತಿರ "ಸಾಧ್ಯವಾದಾಗ ಈ ಕಡೆ ಬಂದು ತಾಯಿಯವರನ್ನು ನೋಡಿ ಹೋಗಬಾರದೆ?" ಎಂದು ಕೇಳಿದೆ... "ನನಗೆ ಸಮಯವೇ ಸಿಕ್ಕುವುದಿಲ್ಲ... ನನ್ನೊಡನೆ ಬಂದುಬಿಡಿ ಅಂತ ಕರೆದರೂ ಬರುವುದಿಲ್ಲ ಎನ್ನುತ್ತಾರೆ" ಎಂದು ಹೇಳಿ ವ್ಯಥೆಪಟ್ಟ. ಆಮೇಲೆ ತಾನು ಬಂದ ಕೆಲಸ ಹೇಳಿದ :

ಅವನು ಕೆಲಸ ಮಾಡುವ ಕಾಲೇಜಿನಲ್ಲಿ ಇವರನ್ನು ಯಾವುದೋ ದೊಡ್ಡ ಸ್ಥಾನಕ್ಕೆ ಕರೆಸಿಕೊಳ್ಳಲು ತವಕದಿಂದ ಇದ್ದಾರಂತೆ. ಆದರೆ ಇವರನ್ನು ಕೇಳುವುದಕ್ಕೆ ಹಿಂದೆಗೆಯುತ್ತಿದ್ದಾರಂತೆ. 'ನಾನು ಮಾತನಾಡಿ ಅವರನ್ನು ಒಪ್ಪಿಸುತ್ತೇನೆ' ಎಂದು ಧೈರ್ಯ ಹೇಳಿ ಇವನು ಕರೆದುಕೊಂಡು ಬಂದಿದ್ದಾನಂತೆ... ಇನ್ನೂ ಏನೇನೋ ಹೇಳಿದ... ನನಗೂ ಬಹಳ ಆಸೆಯುಂಟಾಯಿತು.

ಇವರು ಬಂದೊಡನೆ ಎಲ್ಲರೂ ಜಗುಲಿಯ ಮೇಲೆ ಕುಳಿತು ಮಾತನಾಡಿದರು, ಮಾತಾಡಿದರು, ಅಷ್ಟು ಮಾತಾಡಿದರು. ನಾನು ಕೋಣೆಯಲ್ಲಿ ಕುಳಿತು ಕೇಳಿಸಿಕೊಂಡೇ ಇದ್ದೆ. ಅವರು ಮಾತನಾಡಿದ್ದು ಏನೂ ಅರ್ಥವಾಗಲಿಲ್ಲ. ಆದರೆ, ಒಂದು ವಿಚಾರ ಅರ್ಥವಾಯಿತು... ಅವರ ಗರ್ವ ಇವರ ಬಳಿ ನಡೆಯಲಿಲ್ಲ ಅಂತ...

ಕಡೆಯಲ್ಲಿ ಆ ದಿನ ಅವರೆಲ್ಲಾ ಹೊರಟು ಹೋದ ಮೇಲೆ ನಾನೇ ಕೇಳಿದೆ :

"ನೀವು ಈ ಉದ್ಯೋಗಕ್ಕೆ ಒಪ್ಪಿದ್ದರೆ ಏನಾಗುತ್ತಿತ್ತು? ಅಲ್ಲಿ ಓದುವವರೂ ವಿದ್ಯಾರ್ಥಿಗಳು ತಾನೆ? ಅಲ್ಲಿ ಹೇಳಿಕೊಡುವುದೂ ಇದೇ ಪಾಠ ತಾನೆ...? ನಿಮಗೆ ಯಾಕೆ ಈ ಹಠ? ಪಾಪ ಶೀಮಾಚ್ಚು ತುಂಬಾ ಆಸೆಯಿಂದ, ನಂಬಿಕೆಯಿಂದ ಬಂದ" – ನಾನು ಹೇಳಿದುದನ್ನು ಕೇಳಿ ಅವರು ನಕ್ಕರು.

ಇವರಿಗೆ ಇದೊಂದು, ಹುಟ್ಟಿನಿಂದ ಬಂದುದು ಆ ನಗು. ಅದೂ ಆ ನಗು ಇದೆಯಲ್ಲಾ, ನನ್ನ ಬಳಿ ಮಾತ್ರ.

ನಗುತ್ತಲೇ ಹೇಳಿದರು :

"ಶೀಮಾಚ್ಚು ಉಟ್ಟುತೊಟ್ಟು ತಿರುಗುತ್ತಾನಲ್ಲಾ, ಆ ವೇಷದಲ್ಲಿ ನನ್ನನ್ನು ನೋಡಬೇಕೆಂದು ನಿನಗೆ ಆಸೆಯಾಗಿದೆಯೇನೋ... ವಿದ್ಯಾಭ್ಯಾಸ ಮಾಡಿಸಲು ಕೂಲಿ ಹಣ ತೆಗೆದುಕೊಳ್ಳಬಾರದೆಂದು ನಿನಗೆ ತಿಳಿಯದೆ? ಉಪಾಧ್ಯಾಯರಿಗೆ ಕೂಲಿ ಕೊಟ್ಟಮೇಲೆ ವಿದ್ಯಾರ್ಥಿಗೆ ಅವರ ಬಳಿ ಏನು ಮರ್ಯಾದೆ ಇರುತ್ತೆ, ಹೇಗೆ ಮರ್ಯಾದೆ ಉಳಿಯುತ್ತೆ?

ಇವನು ಕೂಲಿ ತೆಗೆದುಕೊಳ್ಳುವವನಾದನಲ್ಲ... 'ಕೂಲಿ ಸಾಲದು' ಎಂದು ಝಂಡಾ ಹಿಡಿದು ಘೋಷಣೆ ಮಾಡುತ್ತಾ – ನನ್ನನ್ನೂ ಝಂಡಾ ಹಿಡಿಯುವಂತೆ ಘೋಷಣೆ ಮಾಡುವಂತೆ ಹೇಳದಿದ್ದರೂ – ಆ ಗುಂಪಿಗೆ 'ನಾಯಕರಾಗಿ ಬನ್ನಿ' ಎನ್ನುತ್ತಾರೆ... ಇದೆಲ್ಲಾ ನನ್ನಿಂದ ಆಗುವ ಕೆಲಸವೇನು? ನೀನೇ ಹೇಳು" ಎಂದರು.

ನಾನೇನು ಹೇಳಲಿ...? ಏನೂ ಹೇಳದೆ ಬಾಯಿಮುಚ್ಚಿಕೊಂಡು ಅವರು ಹೇಳುವುದನ್ನೇ ಕೇಳುತ್ತಿದ್ದೆ.

ಇವರ ಮೈಮೇಲೆ ಒಂದು ಷರಟು ಧರಿಸಿ ನಿಲ್ಲುವುದನ್ನು ನೆನಸಿಯೇ ನನಗೆ ನಗು ಬರುತ್ತೆ. ಆ ನೆನಪು ಕೂಡ ಹೊಂದುವುದಲ್ಲ... ನಾನೂ ಅವರೊಂದಿಗೆ ನಕ್ಕು. ಆ ವಿಷಯವನ್ನು ಅಲ್ಲಿಗೆ ಬಿಟ್ಟೆ.

ಇವರ ಬಗ್ಗೆ ಇಷ್ಟು ತಿಳಿದಿದ್ದೂ ನಾನು ಹೋಗಿ ಹೀಗೆ ಕೇಳಿದೆನಲ್ಲಾ ಎಂದು ನಾಚಿಕೆ ಪಟ್ಟೆ. ಆದರೂ ಈ ನಲವತ್ತು ವರ್ಷದಲ್ಲಿ ನಾನು ಪೆದ್ದಾಗಿಯೇ ಇದ್ದೇನೆ... ಹೊಸ ಹೊಸದಾಗಿ ಏನಾದರೊಂದು ಮಾಡುವುದು. ಅವರು ನಗುವುದು – ಹೀಗೆಯೇ ಆಯಿತು ನನ್ನ ಜನ್ಮ.

ಹತ್ತು ದಿನದ ಹಿಂದೆ ಒಂದು ವಿಷಯ... ಹೀಗೆಯೇ ಇವರ ಬಳಿ ವಿದ್ಯಾಭ್ಯಾಸ ಮಾಡುತ್ತಿದ್ದವನೊಬ್ಬ... ಯಾವುದೋ ಒಂದು ಚೀಟಿ ತಂದು "ಅತ್ತೆ ಅತ್ತೆ... ಇದು ಸರ್ಕಾರ ನಡೆಸುವ" ಬಹುಮಾನದ ಚೀಟಿಯೋ ಅದೃಷ್ಟದ ಚೀಟಿಯೋ... ಏನೋ ಹೇಳಿ "ಒಂದು ರೂಪಾಯಿ ಮಾತ್ರ... ತೆಗೆದುಕೊಳ್ಳಿ... ಸಿಕ್ಕುವುದೇ ಕಷ್ಟ... ನಿಮಗಾಗಿ ಸಂಗ್ರಹಿಸಿ ತಂದೆ ಎಂದು ಕೊಟ್ಟ... ನಾನೂ ಅದರ ಬಗ್ಗೆ ಏನೂ ವಿಶೇಷವಾಗಿ ಆಲೋಚಿಸದೆ, ಏನೋ ಹುಡುಗ ನಮ್ಮನ್ನು ಜ್ಞಾಪಿಸಿಕೊಂಡು ಅಕ್ಕರೆಯಿಂದ ತೆಗೆದುಕೊಂಡು ಬಂದಿದ್ದಾನೆಂದು ಒಂದು ರೂಪಾಯಿ ಕೊಟ್ಟು ತೆಗೆದುಕೊಂಡೆ.

ಆ ಹುಡುಗ ಅದರ ಬಗ್ಗೆ ದೊಡ್ಡ ಭಾಷಣವನ್ನೇ ಮಾಡಿದ... ಎಷ್ಟೋ ಮಂದಿ ಅದರಿಂದ ಬಹುಮಾನ ಪಡೆದು ಲಕ್ಷಾಧಿಪತಿಗಳಾದರಂತೆ... ಬಡವರಿಗೂ ಅದು ದಕ್ಕುತ್ತದಂತೆ... ಇನ್ನೂ ಏನೇನೋ ಹೇಳಿದ... ನಾನು ಸುಮ್ಮನೆ ವಿನೋದಕ್ಕೆ ತೆಗೆದುಕೊಂಡೆ...

ಆದರೆ... ಆ ಸಾಯಂಕಾಲ ಇವರು ಜಗುಲಿಯ ಮೇಲೆ ಕುಳಿತು, ಐದಾರು ಮಂದಿ ಬಳಿ ಈ ಬಹುಮಾನದ ಚೀಟಿಯನ್ನು ಹರಿದು ತುಂಡುತುಂಡು ಮಾಡುತ್ತಿದ್ದರು!

ಕೋಣೆಯಲ್ಲಿ ಕುಳಿತು ಕೇಳಿಸಿಕೊಂಡಾಗ ನನ್ನನ್ನು ಹಾಗೆಯೇ ಕಪಾಳಕ್ಕೆ ಹೊಡೆಯುವಂತಿತ್ತು.

ಅದೂ ಆದಿನ ಅವರು ಮಾತನಾಡುವಾಗ, ಅದು ಸಾಧಾರಣವಾಗಿ ಎಂದಿನಂತೆ ನಿಧಾನವಾಗಿ ವಾದಿಸುತ್ತಿದ್ದರಲ್ಲ, ಹಾಗಿರಲಿಲ್ಲ. ಈ ಲೋಕವನ್ನೇ ಶಪಿಸಲು ಹೊರಟವರಂತೆ ಆವೇಶದಿಂದ ಕೂಗಾಡಿದರು.

ಇವರಿಗೆ ಇದರ ಬಗ್ಗೆ ಯಾಕೆ ಇಷ್ಟು ಕೋಪವೆಂದು ನನಗೆ ಅರ್ಥವಾಗಲಿಲ್ಲ.

"ಈ ದೇಶದಲ್ಲಿ ಹೀಗೆ ನಡೆಯಬಹುದೇ...? ಜೂಜುಗಾರ ಜೂಜು ಆಡಲಿ. ವ್ಯಭಿಚಾರಿಗಳು ವ್ಯಭಿಚಾರ ಮಾಡಲಿ... ಆಡಳಿತ ನಡೆಸುವವರು, ಲೋಕಪರಿಪಾಲನ ಮಾಡುವವರು ಇದನ್ನು ಮಾಡಬಹುದೇ...? ಕಲಿ ಆವರಿಸಿ ನಾವು ನಿರ್ನಾಮವಾಗುತ್ತೇವೆಂಬುದಕ್ಕೆ ಇದೇ ಸಾಕ್ಷಿ. ಲೋಪವಿಲ್ಲದೆ ರಾಜ್ಯ ಪರಿಪಾಲನೆ ಮಾಡಿದ ಧರ್ಮರಾಯ ಹೇಗೆ ಕೆಟ್ಟ...? ಯೋಚಿಸಿ ನೋಡಿ... ಧರ್ಮರಾಯ ಜೂಜಿನಿಂದ ತಾನೇ ಕೆಟ್ಟ... ಜೂಜಿನಲ್ಲಿ ಗೆದ್ದವನೂ ಚೆನ್ನಾಗಿ ಬದುಕುವುದಿಲ್ಲ, ಸೋತವನೂ ಅಷ್ಟೇ ಎಂಬ ಸತ್ಯವನ್ನೇ ತಾನೆ ಮಹಾಭಾರತ ಹೇಳುತ್ತದೆ...? ಜೂಜಿನಲ್ಲೂ ಒಂದು ಧರ್ಮವಿದೆ, ಕೇಳು... ಸಮ ಅಂತಸ್ತಿನಲ್ಲಿರುವವರು ಜೂಜು ಆಡಬಹುದು... ಅದೂ ಪಾಪ – ಆ ಪಾಪಕ್ಕೂ ಒಂದು ಎಲ್ಲೆಯಿದೆ... ರಾಜ್ಯಭಾರ ಮಾಡುವವರು, ರಾಜ್ಯಪರಿಪಾಲನೆ ಮಾಡುವವರು ಪಾಮರರನ್ನು, ಹೀಗೆ ಮಾಯಾಜಾಲ ತೋರಿಸಿ ಜೂಜು ಆಡುತ್ತಾರಲ್ಲ. ಇದು ಸರಿಯೆ? ಹೋಯಿತು... ಎಲ್ಲಾ ಹೋಯಿತು. ಇನ್ನು ಈ ಸಮಾಜದಲ್ಲಿ ಯಾವ ವ್ಯವಸ್ಥೆಯೂ ಇರುವುದಿಲ್ಲ... ಬಡತನದಿಂದ ನಾಶವಾಗುವುದಕ್ಕೆ ಬದಲಾಗಿ ಜೂಜಿನಿಂದ ಜನಸಮೂಹ ನಾಶವಾಗಿ ಬಿಡುತ್ತೆ. ತಿರುವಳ್ಳೂರ್ ಬೀದಿಬೀದಿಯಲ್ಲಿ ತಿರುವಳ್ಳುವರ್ ಪ್ರತಿಮೆ ಪ್ರತಿಷ್ಠೆ ಮಾಡಿದರೆ ಸಾಕೆ... ಅವರು ಜೂಜಿನ ಬಗ್ಗೆ ಒಂದು ಅಧ್ಯಾಯವನ್ನೇ ಬರೆದಿದ್ದಾರಲ್ಲ..." ಎಂದು ಆ ಹತ್ತು ಶ್ಲೋಕಗಳನ್ನೂ ಒತ್ತಿ ಹೇಳಿದರು. ಅವಕ್ಕೆ ಅರ್ಥವನ್ನು ಹೇಳಿದರು... ಮಹಾಭಾರತದಿಂದ ಶ್ಲೋಕಗಳನ್ನು ಆರಿಸಿ ನುಡಿದರು. "ಉದ್ಧಾರವಾಗುವುದಿಲ್ಲ... ಉದ್ಧಾರವಾಗುವುದಿಲ್ಲ" ಎಂದು ಹಣೆ ಚಚ್ಚಿಕೊಂಡರು...

ನನಗೆ ಹೊಟ್ಟೆಯಲ್ಲಿ ತಳಮಳವಾಯಿತು... ಯಾಕೆ ಈ ಶನಿಯನ್ನು ಒಂದು ರೂಪಾಯಿ ಕೊಟ್ಟು ತೆಗೆದುಕೊಂಡೆ ಎನಿಸಿತು. ಆದರೂ ಇವರು ಯಾಕೆ ಇಷ್ಟಕ್ಕಾಗಿ ಈ ಆವೇಶಗೊಂಡಿದ್ದಾರೆಂದು ಅರ್ಥವಾಗಲಿಲ್ಲ. ಇವರು ಷರಟು ಹಾಕುವುದಿಲ್ಲ, ಅದಕ್ಕಾಗಿ ಲೋಕವೇ ಇವರಂತೆ 'ಷರಟಿಲ್ಲದೆ, ಜುಟ್ಟು ಬಿಟ್ಟು, ಪಂಚಾಂಗ ನೋಡಿಯೇ ಕ್ಷೌರಮಾಡಿಕೊಂಡು ಇರಬೇಕೆಂದು ಹೇಳುವರೇನು?' ಎಂದು ನಾನು ಮಾಡಿದ ಕೆಲಸಕ್ಕೆ ಒತ್ತಾಸೆಯಾಗಿರುವಂತೆ ಮನಸ್ಸಿನಲ್ಲಿ ಪ್ರತಿವಾದ ಮಾಡಿಕೊಂಡೆ.

ಆ ಚೀಟಿ ತೆಗೆದು ಇಟ್ಟುಕೊಂಡುದರಿಂದ ಈಗ ಆದ ಅನಾಹುತವೇನು ಎಂದು ಸಮಾಧಾನಪಟ್ಟುಕೊಂಡರೂ, ಥಟ್ಟನೆ ನಮ್ಮ ಕರ್ಮ ಒಂದು ನೂರು ರೂಪಾಯಿ ಬಂತೆಂದು ಇಟ್ಟುಕೊಳ್ಳಿ... ಊರು ಪೂರ್ತಿ ಇದೇ ಹಗರಣವಾಗಿ ಬಿಡುತ್ತದೆ...

ಅದೂ ಇವರು ಈ ರೀತಿ ಮಾತನಾಡುತ್ತಿರುವಾಗ... ನಾನು ತೆಗೆದುಕೊಂಡುದು ಬಯಲಾದರೆ ಇವರ ಪ್ರಾಮಾಣಿಕತೆಯ ಬಗ್ಗೆ ಎಲ್ಲರೂ ಸಂದೇಹ ಪಡುತ್ತಾರಲ್ಲ ಎಂದು ನನಗೆ ಮನಸ್ಸು ಕಳವಳಗೊಂಡಿತು...

ಆ ಹುಡುಗ – ಆ ಚೀಟಿ ಕೊಟ್ಟವನು – ಹೇಳಿತು : ಪತ್ರಿಕೆಯವರೆಲ್ಲಾ ಫೋಟೋ ಗ್ರಾಫರನ್ನು ಕರೆದುಕೊಂಡು ಬಂದು ಯಾವ ಹಳ್ಳಿಯವನಾಗಿದ್ದರೂ ಸರಿ, ಹುಡುಕಿ ಕೊಂಡು ಬಂದುಬಿಡುವರಂತೆ. ಮದರಾಸಿನಲ್ಲಿ ಇದಕ್ಕಾಗಿ ದೊಡ್ಡ ಸಮಾರಂಭ ನಡೆಸಿ ಗಣ್ಯ ವ್ಯಕ್ತಿಗಳ ಕೈಯಾರೆ ಬಹುಮಾನ ಕೊಡಿಸುವರಂತೆ… ಅಯ್ಯೋ ಎಂತಹ ಕೆಲಸವಾಯಿತು…

ಸರಿ, ತೆಗೆದುಕೊಂಡಾಯಿತು… ಇದೆಲ್ಲಾ ಏನು ಅನಾವಶ್ಯಕ ಕಲ್ಪನೆ ಎಂದು ಅವರ ಬಳಿ ನಾನು ಈ ಬಗ್ಗೆ ಮಾತೂ ಹೇಳಲಿಲ್ಲ…

ಬೇಕೆಂದೇ ಆ ದಿನ ಅವರಿಗೆ ಊಟ ಬಡಿಸುವಾಗ ನಾನೇ ಮಾತು ತೆಗೆದೆ…

"ಏನದು? ಏನೋ ಬಹುಮಾನದ ಚೀಟಿಯಂತೆ… ಒಂದು ರೂಪಾಯಿ ಕೊಟ್ಟು ತೆಗೆದುಕೊಂಡವರಿಗೆ ಒಂದು ಲಕ್ಷ ರೂಪಾಯಿ ಸಿಕ್ಕುವುದಂತೆ. ಸರ್ಕಾರವೇ ನಡೆಸುವುದ ರಿಂದ ಸುಳ್ಳು, ಕಪಟತನ, ಮೋಸ ಏನೂ ಇಲ್ಲವಂತೆ. ಪ್ರಾಮಾಣಿಕವಾಗಿ ನಡೆಯುವುದಂತೆ, ಪಕ್ಕದ ಮನೆಯ ಹುಡುಗಿ ಒಟ್ಟಿಗೆ ಹತ್ತು ರೂಪಾಯಿಗೆ ತೆಗೆದುಕೊಂಡಿದ್ದಾಳಂತೆ ಅದೇನದು…?" ಎಂದು ಕೇಳಿದೆ.

"ಅದು ನಮ್ಮ ಅಡುಗೆಮನೆಯವರೆಗೆ ಬಂದಾಯಿತೇನು? ಅದು ರಾಜ್ಯಾಂಗ ನಡೆಸುವ ಜೂಜು – ಅಷ್ಟೇ. ಕಾಲರಾ ಹರಡಿದಂತೆ ಜನರನ್ನು ಅಟ್ಟಿ ಹಿಡಿಯುತ್ತೆ. ಕಾಲರಾ, ಸಿಡುಬು ಬರದಂತೆ ತಡೆಯುವ ಸರ್ಕಾರವೇ ಇದನ್ನೂ ಮಾಡುತ್ತೆ. ಆದ್ದರಿಂದ ಅದಕ್ಕೆ ಹಣ ದೊರೆಯುವುದಂತೆ. ಬಡವರು ಲಕ್ಷಾಧಿಪತಿಗಳಾಗುವರಂತೆ. ಹಾಳಾಗಲಿ. ನೀನೂ ನಾನೂ ಲಕ್ಷಾಧಿಪತಿಗಳಾಗಲಿಲ್ಲವೆಂದು ಅಳುತ್ತೇವೇನು? ಆ ಬಗ್ಗೆ ನಮಗೇಕೆ ಚಿಂತೆ?" ಎಂದರು.

"ಒಂದು ಲಕ್ಷ ರೂಪಾಯಿ ತಂದು ನಿಮ್ಮ ಬಳಿಯಿತ್ತರೆ ಬೇಡಾಂತ ಹೇಳಿಬಿಡುತ್ತೀ ರೇನು?" ಎಂದೆ.

ಇವರು ನನ್ನನ್ನು ನೋಡಿ ನಕ್ಕರು. ನನಗೆ ಅವಮಾನವೆನಿಸಿತು… ಮೈ ಮುಳ್ಳಾಯಿತು. 'ನಲವತ್ತು ವರ್ಷ ನನ್ನೊಂದಿಗೆ ಬಾಳಿದ ನಿನಗೆ ಇಂತಹ ಸಂದೇಹ ಬಂದಿತೆ' ಎಂದು ಕೇಳುವಂತಿತ್ತು ಆ ನಗು… ನಾನು ತಲೆಬಾಗಿಸಿದೆ.

"ನೀವು ಬೇಡಾಂತ ಹೇಳುತ್ತೀರಿ, ಅದು ನನಗೆ ಗೊತ್ತು. ಹಾಗೆ ಯಾಕೆ ಹೇಳಬೇಕು ಅನ್ನುತ್ತೇನೆ…? ನಿಮ್ಮ ಮುತ್ತಾತಂದಿರಿಗೆ ಮಾನ್ಯವಾಗಿ ದೊರೆತ ಈ ಮನೆಗೆ ಆ ಪಶ್ಚಿಮದ ಮೂಲೆಯಲ್ಲಿ ಮೂರು ವರ್ಷಗಳಿಂದ ಗೋಡೆಯಲ್ಲಿ ಬಿರುಕು ಬಿಟ್ಟು ಮಳೆ ಬಂದಾಗ ತೇವವಾಗಿಬಿಡುತ್ತೆ – ಅದನ್ನು ರಿಪೇರಿ ಮಾಡಲು ಮಾರ್ಗವಿಲ್ಲದೆ ಸುಮ್ಮ ನಿದ್ದೇವಲ್ಲಾ – ನಮಗೂ ಹಣ ಅವಶ್ಯಕವಾಗಿದೆಯಲ್ಲ… ಅದೃಷ್ಟ ಲಕ್ಷ್ಮಿಯನ್ನು ಯಾಕೆ ಅಲಕ್ಷ್ಯ ಮಾಡಬೇಕೆಂದು ಆಲೋಚನೆ. ಅದು ತಪ್ಪೇ?" ಎಂದು ಕೇಳಿದೆ.

"ಓಹ್ ನೀನು ಮಾತನಾಡುವುದು ಕೇಳಿದರೆ ಆ ಚೀಟಿ ತೆಗೆದುಕೊಳ್ಳಲು ಆಸೆ, ಹೌದು ತಾನೆ?"

ನಾನು ಮಾತನಾಡಲಿಲ್ಲ.

"ಪೆದ್ದೇ... ಪೆದ್ದೇ... ಆಸೆಯೇ ಮರ್ಯಾದೆಗೆ ಶತ್ರು. ಅದರಲ್ಲಿ ಬಹುಮಾನ ಸಿಕ್ಕುವುದಿಲ್ಲ ಅಂತ ಅದು ತಪ್ಪು ಎಂದು ಹೇಳುವುದಿಲ್ಲ. ಬಂದರೂ ಅದು ಅಧರ್ಮವಾಗಿ ಬಂದ, ಹಲವರ ಹೊಟ್ಟೆ ಉರಿಸಿ ಸಂಪಾದಿಸಿದ ಹಣ ಎನ್ನುತ್ತೇನೆ. ಧರ್ಮಮಾರ್ಗದಲ್ಲಿ ಸಂಪಾದಿಸದೆ ಬರುವ ಸಂಪತ್ತು ಪಾಪದ ಮೂಟೆ ತಾನೆ... ನೀನು ಹೇಳಿದೆಯಲ್ಲಾ, ನಮ್ಮ ಮುತ್ತಾತಂದಿರ ಬಗ್ಗೆ... ಅವರೆಲ್ಲಾ ಆಶೀರ್ವಚನ ದಾನ ಪಡೆದು ಮಹಾ ಮೇಧಾವಿಗಳಾಗಿ ಬಾಳಿದರು... ನನಗೆ ಚೆನ್ನಾಗಿ ಜ್ಞಾಪಕವಿದೆ... ತಂದೆಯವರು ಇದೇ ಶಂಕರಮಠದಲ್ಲಿ ಹಗಲೆಲ್ಲಾ ವಿದ್ಯೆ ಹೇಳಿಕೊಡುತ್ತಿದ್ದರು... ಸಾಯಂಕಾಲ ಹರಿಕಥೆ ನಡೆಸುತ್ತಿದ್ದರು. ಪ್ರಾತಃಕಾಲ ಆಶೀರ್ವಚನ ದಾನಕ್ಕೆ ಹೋಗುತ್ತಿದ್ದರು... ಮರುವೇಳೆಗೆ ಉಳಿಯದಂತೆ ಇರುತ್ತಿತ್ತು. ಶ್ಲೋಕವನ್ನು ಹೇಳಿಕೊಂಡು ನಡುಬೀದಿಯಲ್ಲಿ ನಡೆಯುತ್ತಿದ್ದರು... ಮನೆಯೊಳಗಿಂದ ಆ ಮನೆ ಮಗು ಕೈಯಲ್ಲಿ ಒಂದು ಹಿಡಿ ಅಕ್ಕಿಯನ್ನು ಅಳತೆಯಂತೆ ಎತ್ತಿಕೊಂಡು ಬಂದು ನಡುಬೀದಿಗೆ ಬಂದು ದಾನ ಕೊಡುತ್ತಿದ್ದರು. ಮಗುವಿನ ಕೈ ಅಳತೆ ಯಾಕಿಟ್ಟರು ಗೊತ್ತೆ...? ದೊಡ್ಡವರ ಕೈ ಅಳತೆಯಾದರೆ ನಾಲ್ಕು ಮನೆಗಳಿಂದ ಪಾತ್ರೆ ತುಂಬಿಹೋಗುತ್ತಿತ್ತು. ಉಳಿದವರು ಮನೆಯಲ್ಲಿ ಕಾಯುತ್ತಾರಲ್ಲ, ಆ ದಾನವನ್ನು ತಡೆದ ಪಾಪ, ಹೆಚ್ಚಾಗಿ ಕೊಟ್ಟವರಿಗೆ ತಾಕುವುದಿಲ್ಲವೆ? – ಅದಕ್ಕಾಗಿಯೇ ಹಾಗೆ. ಆ ಪಾತ್ರೆ ತುಂಬಿದ ನಂತರವೂ ಯಾರಾದರೂ ದಾನ ತಂದರೆ ಅದನ್ನು ತೆಗೆದುಕೊಳ್ಳುತ್ತಿರಲಿಲ್ಲ. ಕೊಡಲು ಬಂದವರ ತಲೆಯ ಮೇಲೆ ಅಕ್ಷತೆಯಿಟ್ಟು ಆಶೀರ್ವಾದ ಮಾಡಿ ಬರುತ್ತಿದ್ದರು... ಆ ವಂಶದ ಪುಣ್ಯವೇ ಈ ಜ್ಞಾನ. ಇದಕ್ಕಿಂತ ಅದೃಷ್ಟ ಬೇರೇನಿದೆ ಎಂದು ನನಗೆ ಗೊತ್ತಾಗಿಲ್ಲ... ಈ ನೆಮ್ಮದಿಯನ್ನು, ಈ ಮನಸ್ಸಿನ ಆರೋಗ್ಯವನ್ನು ಎಷ್ಟು ಲಕ್ಷ ರೂಪಾಯಿ ತಂದುಕೊಟ್ಟೀತು...? ಜೂಜಿನಲ್ಲಿ, ಹಣದಿಂದ ಲಕ್ಷಾಧಿಪತಿಗಳನ್ನು ಈ ರಾಜ್ಯಾಂಗ ಸೃಷ್ಟಿಸಬಹುದು. ಆದರೆ ಜ್ಞಾನಿಯನ್ನು, ಚತುರ್ವೇದ ಪಂಡಿತನನ್ನು ಸೃಷ್ಟಿಸು ಎಂದು ಹೇಳು ನೋಡೋಣ" – ಎಂದು ಆ ದಿನ ಪೂರ್ತಿ ಹೊರಗೆ ಹೋಗಿ ಬಂದು ನನ್ನೊಂದಿಗೆ ಮಾತನಾಡುತ್ತಿದ್ದರು.

ಇದೆಲ್ಲಾ ನಡೆದು ಹತ್ತು ದಿನಗಳಾದುವು... ಆ ಚೀಟಿಯ ವಿಚಾರವನ್ನು ನಾನು ಮರೆತೇ ಬಿಟ್ಟೆ...

ನೆನ್ನೆ ಆ ಹುಡುಗ ಚೀಟಿ ತಂದು ಕೊಟ್ಟನಲ್ಲ – ಒಂದು ಪೇಪರು ತೆಗೆದುಕೊಂಡು ಬಂದು "ಬಹುಮಾನ ಪಡೆದವರ ನಂಬರುಗಳೆಲ್ಲಾ ಬಂದಿವೆ... ನಿಮ್ಮ ಚೀಟಿ ತನ್ನಿ, ನೋಡೋಣ" ಎಂದು ಉತ್ಸಾಹವಾಗಿ ಕೂಗಾಡಿಕೊಂಡು ಓಡಿಬಂದ. ಒಳ್ಳೆಯದಾಯಿತು. ಆಗ ಅವರು ಮನೆಯಲ್ಲಿ ಇರಲಿಲ್ಲ...

ನನಗೆ ಹೊಟ್ಟೆಯಲ್ಲಿ ಸಂಕಟವಾಯಿತು.

'ಈಶ್ವರ, ನನ್ನನ್ನು ಬಯಲಿಗೆ ಎಳೆಯಬೇಡ' ಎಂದು ಪ್ರಾರ್ಥಿಸಿದಾಗ ಒಂದು ಯುಕ್ತಿ ತೋರಿತು :

"ಅದನ್ನು ಎಲ್ಲಿ ಇಟ್ಟೆನೋ? ಕಾಣಿಸಲಲ್ಲಪ್ಪ" ಎಂದು ಅವನಿಗೆ ಸುಳ್ಳು ಹೇಳಿದೆ... ಅದರಲ್ಲಿ ನಂಬರು ಬಂದಿದ್ದರೆ, ಗ್ರಹಚಾರ – ಊರಿಗೆ ಊರೇ ಬಂದು ಇಲ್ಲಿ ಸೇರುವು ದಿಲ್ಲವೆ?

ಆ ಮಗುವಿಗೆ ಮುಖ ಬಾಡಿತು. ಕೋಪ ಬಂದಂತೆ ಮುಖಮಾಡಿ ಆ ಪೇಪರನ್ನೂ ಬಿಸಾಡಿ ಹೋಯಿತು.

ಅವನು ಹೋದ ಮೇಲೆ ನಾನೇ ಆ ಪೇಪರನ್ನು ತೆಗೆದುಕೊಂಡು ಕೋಣೆಗೆ ಹೋಗಿ ಒಬ್ಬಳೇ ನೋಡಿದೆ.

ನನಗೆ ಓದುವುದು ಬರದಿದ್ದರೂ ಅಂಕಿಗಳು ಗೊತ್ತಿದ್ದುವು. ಆ ಸಂಖ್ಯೆಗಳ ಮುಂದೆ ಏನೋ ಬರೆದಿತ್ತು – ಅದೇನೆಂದು ತಿಳಿಯಲಿಲ್ಲ. ಆದರೆ, ಅದೇ ರೀತಿ ಆ ಚೀಟಿಯಲ್ಲಿ ಇದೆಯೋ ಎಂದು ಹುಡುಕಿ ನೋಡಿದೆ...

ದೇವರೇ ಎತ್ತಿದ ಕೂಡಲೇ ಮೊದಲಿಗೇ ಅದೇ ಎರಡು ಅಂಕಿ. ಆಮೇಲೆ ಅದೇ ರೀತಿ ಮೂರು... ಏಳು, ಸೊನ್ನೆ... ಒಂದು... ಒಂದು... ಆರು...

ಹಾಗೆಂದರೆ, ಒಂದು ಲಕ್ಷ ರೂಪಾಯಿ ಅದೃಷ್ಟ ನನಗೇ ಒದಗಿ ಬಂದಿದೆಯೋ...? ಅಯ್ಯೋ... ಈಗ ನಾನೇನು ಮಾಡಲಿ...?

ಮಧ್ಯಾಹ್ನ ಅವರು ಬಂದಾಗ, ಚೀಟಿಯನ್ನು ತೆಗೆದುಕೊಂಡು ಹೋಗಿ ಅವರ ಕಾಲ ಬಳಿಯಿಟ್ಟು 'ನನ್ನನ್ನು ಕ್ಷಮಿಸಿ' ಎಂದು ಅತ್ತೆ.

"ನಾನು ವಿನೋದಕ್ಕೆಂದು, ಆ ಹುಡುಗ ಒತ್ತಾಯಮಾಡಿತೆಂದು ತೆಗೆದುಕೊಂಡೆ. ಇದರ ಬಗ್ಗೆ ನೀವು ಇಷ್ಟು ಕೋಪದ ಅಭಿಪ್ರಾಯವುಳ್ಳವರಾಗಿದ್ದೀರೆಂದು ಆಮೇಲೆ ತಿಳಿಯಿತು... 'ನಮಗೆಲ್ಲಿ ಅಂತಹ ಅದೃಷ್ಟ?' ಎಂದು ಅಸಡ್ಡೆಯಿಂದಿದ್ದೆ... ಬಹುಮಾನ ಬರದಿರಲಿ ಎಂದು ಭಗವಂತನಲ್ಲಿ ಬೇಡಿಕೊಂಡೆ .. ಈಗ ಹೀಗಾಯಿತಲ್ಲಾ... ಕ್ಷಮೆ ತೋರಿ ಇದನ್ನೂ ನನ್ನನ್ನೂ ಪರಿಗ್ರಹಿಸಲೇಬೇಕು" ಎಂದು ಅತ್ತೆ.

ಅವರು ಹಾಗೆಯೇ ನಕ್ಕರು. ನಗುತ್ತಲೇ ನನ್ನನ್ನು ಎತ್ತಿ ನಿಲ್ಲಿಸಿದರು. ಮುಖದಲ್ಲಿ ಆ ನಗುವನ್ನು ಬದಲಾಯಿಸದೆ ಹೇಳಿದರು :

"ಅರೆ, ಈಗ ನೀನು ಲಕ್ಷಾಧಿಪತಿಯಾಗಿಬಿಟ್ಟೆ... ಶಹಭಾಷ್... ಇದು, ನನ್ನ ಸಂಬಂಧವಿಲ್ಲದೆ ನೀನು ಹುಡುಕಿಕೊಂಡ ಸಂಪತ್ತು! ಯಾಕೆ ನನ್ನ ಕಾಲ ಬಳಿ ತಂದಿಟ್ಟು ಈ ಪಾಪವನ್ನು ನನ್ನ ತಲೆಗೆ ಕಟ್ಟುತ್ತೀಯೆ... ನನಗೆ ಲಕ್ಷ ರೂಪಾಯಿ ಬೇಕಾಗಿಲ್ಲ ವೆಂದು ಹೇಳಿದುದು ವಿನೋದಕ್ಕಲ್ಲ. ನಿಜವಾಗಿಯೇ ನನಗೆ ಬೇಡ. ನನಗೆ ಇರುವ ಚಿಂತೆ ಯೆಲ್ಲಾ ಎಂದಿನಂತೆ – ಇಪ್ಪತ್ತು ವರ್ಷಗಳ ಹಿಂದೆ ಇದ್ದ ರೀತಿಯಲ್ಲಿದೆ... ಈಗ ಬರು

ಬರುತ್ತಾ, ವೇದಾಭ್ಯಾಸ ಮಾಡುವವರು ಕಡಿಮೆಯಾಗುತ್ತಿದ್ದಾರಲ್ಲ ಅಂತ. ಇನ್ನೂ ಹತ್ತು ಹುಡುಗರು ಸಿಕ್ಕಿದರೆ ಸಾಕು... ಹಣದಿಂದ ಅವರು ಬರಬಾರದು... ಹಣಕ್ಕಾಗಿಯೂ ಬರಬಾರದು... ಇದು ನಿನಗೆ ಅರ್ಥವಾಗದು, ಸರಿ, ಇದು ನಿನಗೆ ಸೇರಿದ ಪ್ರಶ್ನೆ. ನಾನು ಎಂದೆಂದಿಗೂ ಆಶೀರ್ವಚನ ದಾನದವನೇ. ನನ್ನ ತಂದೆ, ತಾತ ಎಲ್ಲರೂ ಬಂದ ದಾರಿ ಅದೇ. ಲಕ್ಷಾಧಿಪತಿಗೆ ಪತಿಯಾಗಿರುವ ಅಂತಸ್ತು, ಗುಣ ಯಾವುದೂ ನನ್ನಲ್ಲಿಲ್ಲ... ಎಂದು ಮಾತನಾಡುತ್ತಲೇ ಇದ್ದರು ಅವರು.

"ಯಾಕೆ ಇಷ್ಟೆಲ್ಲಾ ಬಿಡಿಸಿ ಬಿಡಿಸಿ ಹೇಳುತ್ತಿದ್ದೀರಿ...? ಈಗ ನಾನು ಇದಕ್ಕೆ ಏನು ಮಾಡಬೇಕು ಹೇಳಿ... ಹೇಳಿದಂತೆ ಮಾಡುತ್ತೇನೆ. ಹೀಗಾದೀತೆಂದು ನಿರೀಕ್ಷಿಸದೆ ನಡೆದು ಹೋಯಿತು... ಇನ್ನು ನಾನು ಏನು ಮಾಡಬೇಕು?" ಎಂದು ನಾನು ಅವರನ್ನು ಮತ್ತೆ ಮತ್ತೆ ಕೇಳಿದೆ...

ಅವರು ನಿರ್ದಾಕ್ಷಿಣ್ಯವಾಗಿ ನನ್ನನ್ನು ನೋಡಿ ನಕ್ಕರು.

ಕಡೆಯಲ್ಲಿ ಪಾಠಶಾಲೆಗೆ ಹೋಗಲು ಅವರಿಗೆ ಹೊತ್ತಾಯಿತಂತೆ... ಹೋಗುವಾಗ ಅದೇ ರೀತಿ ನಕ್ಕು ಹೇಳಿ ಹೋದರು :

"ಈ ಅದೃಷ್ಟ ಚೀಟಿಯನ್ನು ಸದುಪಯೋಗಪಡಿಸಿಕೊಳ್ಳುವುದೆಂದು ನಿರ್ಧರಿಸಿದರೆ, ಅದು ನಿನ್ನ ಇಷ್ಟ. ನೇರವಾಗಿ ಹೋಗಿ ಫೋಟೋ ತೆಗೆಸಿಕೊಂಡು, ಪತ್ರಿಕೆಯಲ್ಲಿ ಪ್ರಕಟಿಸಿಕೊಂಡು, ನೀನು ಆನಂದವಾಗಿ ಬಾಳಬಹುದು... ನಾನು ಇಂತಹವರ ಸಹಧರ್ಮಿಣಿಯೆಂದು ಹೇಳಿಕೊಳ್ಳಬಾರದು... ಹುಂ, ನಿನ್ನ ತೃಪ್ತಿಗಾಗಿ ಆ ಸುಳ್ಳನ್ನು ಹೇಳಿಕೊಂಡು ಕಾಲ ಕಳೆ. ಇಲ್ಲದಿದ್ದರೆ 'ಈ ಮಾಯಾಜಾಲದಲ್ಲಿ ನಾನು ಸಿಕ್ಕಿಕೊಳ್ಳುವುದಿಲ್ಲ, ನನಗಿದು ಬೇಡ' ಎಂದು ಆ ದರಿದ್ರ ಚೀಟಿಯನ್ನು ಹರಿದು ಬಿಸಾಡು. ಹೌದು, ಹರಿದು ಬಿಸಾಡು. ಬೇರೆ ಯಾರಿಗಾದರೂ ಕೊಟ್ಟು ಅದಕ್ಕೆ ಬಡ್ಡಿ ತೆಗೆದುಕೊಂಡರೂ ಒಂದೇ, ಕೃತಜ್ಞತೆಯನ್ನು ಪಡೆದರೂ ಒಂದೇ. ಕಪಟ ಮನಸ್ಸಿಗೆ ಅದೆಲ್ಲಾ ಹೊಳೆಯುತ್ತೆ. ಅದಕ್ಕೆ ಬಲಿಯಾಗದೆ, ಯಾವ ರೀತಿಯಿಂದಲೂ ಅದಕ್ಕೆ ಆಳಾಗದೆ ಹರಿದು ಬಿಸಾಡು. ಎರಡು ದಾರಿಗಳೂ ನಿನಗೆ ಸೇರಿದ್ದು. ಅದು ಪಾಪವೇ, ಭಾಗ್ಯವೇ ಎಂದು ತೀರ್ಮಾನಿಸಬೇಕಾದುದು ನೀನು. ನನಗೆ ಹೊತ್ತಾಯಿತು" ಎಂದು ಹೇಳಿ ಹೊರಟೇ ಬಿಟ್ಟರಲ್ಲ.

ಇದಕ್ಕೆ ನಾನೇನು ಮಾಡಬಹುದು ಹೇಳಿ?

ದೇವರೇ! ಒಂದು ಲಕ್ಷ ರೂಪಾಯಿ! ಈ ಒಂದು ಲಕ್ಷ ರೂಪಾಯಿಗಳನ್ನು, ಅದೃಷ್ಟ ಲಕ್ಷ್ಮಿಯನ್ನು ನಿರ್ದಾಕ್ಷಿಣ್ಯವಾಗಿ ಹರಿದು ಬಿಸಾಡುವುದೆ? ಅವರ ಕೈಯಲ್ಲಿ ಕೊಟ್ಟರೆ, ಹರಿದು ಬಿಸಾಡುತ್ತಾರೆ. ಅವರಂತಹ ಜ್ಞಾನಿಗಳಿಗೆ ಅದು ಸುಲಭ.

ನಮ್ಮಂತಹ ಅಜ್ಞಾನಿಗಳಿಗೆ ಅದು ಸಾಧ್ಯವಾಗುವ ಕೆಲಸವೆ, ಹೇಳಿ?

ಎಷ್ಟು ಲಕ್ಷಗಳಾದರೂ ಇವರದೇ ಹಿರಿಮೆ. ಅದನ್ನು ನಾನು ಅಲ್ಲಗಳೆಯುವುದಿಲ್ಲ. ಆ ಲಕ್ಷ ರೂಪಾಯಿಗಳನ್ನು ಕಾಲು ಧೂಳಿನಂತೆ ಭಾವಿಸುವರಲ್ಲ! ಈ ಮಹಾಪುರುಷ

ಆಶೀರ್ವಚನ ದಾನ ವೃತ್ತಿ ನಡೆಸಿದರೆ ಕೊರತೆಯಾಗುವುದೇನೂ ಇಲ್ಲ. ಇಂತಹವರೊಂದಿಗೆ ಸಂಸಾರ ಮಾಡಿದರೆ, ಅಂತಹ ಬಾಳಿನಲ್ಲೂ ನನಗೆ ಹೆಮ್ಮೆಯುಂಟು!

ಹಣ ದೊಡ್ಡದೆ? ಜ್ಞಾನ ದೊಡ್ಡದೆ? ಇದೆಲ್ಲಾ ನನಗೆ ತಿಳಿಯದು. ಆದರೆ, ಹಣ – ಅದು ಎಷ್ಟು ದೊಡ್ಡದೇ ಆಗಿದ್ದರೂ ಹೇಗೆ ಸ್ಥಿರವಲ್ಲವೋ ಅದೇ ರೀತಿ ಮನುಷ್ಯ ಎಷ್ಟು ದೊಡ್ಡ ಜ್ಞಾನಿಯಾಗಿದ್ದರೂ ಬಾಳು ಶಾಶ್ವತವಲ್ಲವಲ್ಲ.

ಹೀಗೆ ಭಾವಿಸುವುದಾಗಲಿ ಹೇಳುವುದಾಗಲಿ ಮಹಾಪಾಪ. ಆದರೆ ಈ ಕಾಲದಲ್ಲಿ ಎಂತಹ ಪತಿವ್ರತೆಯೂ ಸಹಗಮನ ಮಾಡುವುದಿಲ್ಲವಲ್ಲ. ಇವರ ನಂತರ ಒಂದು ವೇಳೆ ನಾನು ಜೀವಿಸಿರಬೇಕಾಗಿ ಬಂದರೆ... ದೇವರೆ ದೇವರೇ...

ಆಶೀರ್ವಚನ ದಾನ ವೃತ್ತಿಯಲ್ಲಿ ನನಗೇನು ಹೆಮ್ಮೆ? ಎಲ್ಲರೂ, 'ಭಿಕ್ಷುಕಿ' ಎಂದು ತಾನೆ ನನ್ನನ್ನು ಕರೆಯುತ್ತಾರೆ? ಕಟ್ಟಿಕೊಂಡ ಹೆಂಡತಿಯನ್ನು ಭಿಕ್ಷುಕಿಯನ್ನಾಗಿ ಮಾಡಿಬಿಟ್ಟ ಎಂದು ಈ ಮಹಾಜ್ಞಾನಿಯನ್ನು ಕುರಿತೂ ಆಡಿಕೊಳ್ಳುತ್ತಾರೆ.

ಅವರು ಹರಿದು ಬಿಸಾಡಬಹುದು. ನಾನು ಹಾಗೆ ಮಾಡಲಾದೀತೆ? ಆದರೆ, ಅವರು ಹೀಗೆ ಹೇಳಿ ಹೋಗಿಬಿಟ್ಟರಲ್ಲ.

ನಾನು ಕೈಯಲ್ಲಿ ಚೀಟಿಯನ್ನು ಹಿಡಿದು ನಿಂತೆ. ಭಾರವಾಗಿದೆ. ಇದಕ್ಕೆ ನಾನೇನು ಮಾಡಲಿ – ಹೇಳಿ?

# 14. ಹೊಸ ಚಪ್ಪಲಿ ಕಚ್ಚುತ್ತದೆ

ಅವಳ ಮುಖದ ಮೇಲೆ ಹೊಡೆದಂತೆ ಬಾಗಿಲನ್ನು ಧಡಾರನೆ ಹಾಕಿಕೊಂಡು ಹೊರಗ ಬಂದು ನಿಂತ ನಂದಗೋಪಾಲ. ಬಾಗಿಲನ್ನು ಹಾಕುವವರೆಗೆ ಎಲ್ಲಿ ಹೋಗಬೇಕೆಂದಾಗಲಿ, ಎಲ್ಲಿಯಾದರೂ ಹೋಗಬೇಕೆ ಎಂಬುದನ್ನು ಅವರು ಆಲೋಚಿಸಲೇ ಇಲ್ಲ. ಅವಳ ಮೇಲೆ ಉಂಟಾದ ಕೋಪ, ತನಗೆ ಅಪಮಾನವಾಗುವಂತೆ – ತನ್ನ ಭಾವನೆಗಳನ್ನು ಅಸಡ್ಡೆ ಮಾಡಿ ಗೋಡೆಯ ಕಡೆ ತಿರುಗಿಕೊಂಡು ನಿದ್ದೆ ಮಾಡುವ ಅವಳಿಗೆ ಜೊತೆಯಾಗಿ ಎದ್ದಿದ್ದ – 'ಯಾಕೆ, ನಿದ್ರೆ ಮಾಡಲಿಲ್ಲವೆ?' ಎಂದು ಅವಳು ಕೇಳಬೇಕು ಎಂದು ನಿರೀಕ್ಷಿಸುತ್ತಿದ್ದ – ಅವಮಾನ ತಡೆಯಲಾಗದೆ ಅವನು ಹೊರಗೆ ಬಂದು ಕೋಪದಿಂದ ಬಾಗಿಲನ್ನು ತೆಗೆದು ಬಿರುಸಾಗಿ ಮುಚ್ಚಿದ.

ಅವಳು ನಿಜವಾಗಿಯೇ ನಿದ್ರೆ ಮಾಡಿದ್ದರೆ ಆ ಶಬ್ದಕ್ಕೆ ಎಚ್ಚರಗೊಳ್ಳಬೇಕಿತ್ತು. 'ಆ ಶಬ್ದಕ್ಕೆ ಪಕ್ಕದ ಭಾಗದ ಮನೆಯವರು ಯಾರಾದರೂ ಎಚ್ಚರಗೊಂಡರೋ?' ಎಂದು ತಾನು ಮಾಡಿದ ಕೆಲಸಕ್ಕಾಗಿ ಅವನು ಅವಮಾನದಿಂದ ಬೆದರಿ ನಿಶಾರಾತ್ರಿ ಆ ವಠಾರದಲ್ಲಿ ಮುಚ್ಚಿದ್ದ ಬಾಗಿಲುಗಳ ಕಡೆ ನೋಡಿದ. ಒಳಗೆ ಸಣ್ಣ ದೀಪ ಬೆಳಗುತ್ತಿದ್ದುದು ಬಾಗಿಲು ಮೇಲಿದ್ದ ವೆಂಟಿಲೇಟರ್ ಮೂಲಕ ಗೋಚರವಾಗುತ್ತಿತ್ತು. ಟೇಬಲ್ ಫ್ಯಾನ್ ತಿರುಗುವ ಶಬ್ದ ಕೇಳಿಸುತ್ತಿತ್ತು. ಗಂಟೆ ಹನ್ನೊಂದಾಗಿರಬಹುದು. ಕೈಗಡಿಯಾರವನ್ನು ನೋಡಿದ. ಕತ್ತಲಲ್ಲಿ ಕಾಣಿಸಲಿಲ್ಲ. ಎಲ್ಲಿಯಾದರೂ ಹೋಗಿ ಬೆಳಕು ಹರಿದ ಮೇಲೆ ಬಂದರೇನು?' ಎಂದು ಅವನಿಗೆ ಅನಿಸಿತು. 'ಬಾಗಿಲನ್ನು ತೆಗೆದುಹಾಕಿ ಹೇಗೆ ಇವಳನ್ನು ಒಂಟಿಯಾಗಿ ಬಿಟ್ಟು ಹೋಗುವುದು?' ಎಂಬ ಆತಂಕವೂ ಉಂಟಾಯಿತು. ಅವಳು ಬೇಕೆಂದೇ ಹಠವಾಗಿ ಮಲಗಿದ್ದು ನಟಿಸುತ್ತಿದ್ದಾಳೆಂದು ಅವನೆಂದುಕೊಂಡ.

ಏನು ಮಾಡುವುದೆಂದೇ ಅವನಿಗೆ ತೋರಲಿಲ್ಲ. ತನ್ನ ಮೇಲೆ ತನಗೇ ಪರಿತಾಪ ಉಂಟಾಯಿತು. ಇದೆಲ್ಲಾ ತನ್ನ ಅನಾವಶ್ಯಕ ಹಣೆಬರಹ ತಾನೆ ಎಂದು ತಲೆಯಲ್ಲಿ ಆಲೋಚನೆಯೊಂದು ಸುಳಿಯಿತು. ತಾನುಂಟು ತನ್ನ ಉದ್ಯೋಗ ಮತ್ತು ಸಂಪಾದನೆಯುಂಟು ಎಂದು ಸ್ವತಂತ್ರವಾಗಿ ತಿರುಗುವ ಬಾಳಿನಲ್ಲಿ ಸಂತೋಷ ಅಥವಾ ಬೇಸರ ಅನುಭವಿಸುತ್ತಿದ್ದುದನ್ನು, ಹಾಗೆ ಜೀವನ ಸಾಗಿಸುವುದು ಎಂದು ತೀರ್ಮಾನ ಕೈಗೊಂಡಿದ್ದವನನ್ನು ಈ ವಿವಾಹ, ಪತ್ನಿ, ಸಂಸಾರ ಎಂದೆಲ್ಲಾ, ಇದರಲ್ಲಿ ಏನೇನೋ ಮಹದಾನಂದವಿರುವಂತೆ, ಮಾನವನ ಬಾಳಿನ ಅರ್ಥವೇ ಅದರಲ್ಲಿ ಅಡಗಿರುವುದಾಗಿ ಕಲ್ಪಿಸಿಕೊಂಡ ಹುಚ್ಚುತನದಲ್ಲಿ ಸಿಕ್ಕಿಸಿದ ಆ ಸೈತಾನನ ಚೇಷ್ಟೆಯನ್ನು ನೆನೆಸಿದ ನಿಟ್ಟುಸಿರಿನಿಂದ, ಮನೆ

ಯೊಳಕ್ಕೂ ಹೋಗದೆ ಹೊರಗಡೆಯೂ ಹೋಗದೆ ಬಾಗಿಲಲ್ಲಿ ಕುಳಿತು, ಸಿಗರೇಟು ಹಚ್ಚಿ, ರಾತ್ರಿ – ನಕ್ಷತ್ರ ತುಂಬಿದ್ದ ಆಕಾಶವನ್ನು ನೋಡಿದ.

'ಆ ಸೈತಾನ' ಎಂದು ಗೊಣಗಿಕೊಂಡಾಗ ಅವನಿಗೆ ಗಿರಿಜೆಯ ನೆನಪು ಬಂತು. 'ಅವಳು ಎಷ್ಟು ಆತ್ಮೀಯತೆ ಹೊಂದಿದಳು, ಇಂಗಿತ ಜ್ಞಾನವುಳ್ಳವಳು – ಸೈತಾನಳನ್ನು ಕಟ್ಟಿ ಕೊಂಡು ಬಂದು ಮನೆಯಲ್ಲಿಟ್ಟುಕೊಂಡು ಅವಳನ್ನೇ ಹಾಗೆನ್ನುವೆನಲ್ಲಾ ಎಂದು ಆ ನೆನಪನ್ನು ತುಂಡರಿಸಿದ ನಂದಗೋಪಾಲ. ಆದರೂ ತಾನು ಮದುವೆ ಮಾಡಿಕೊಂಡು ಗೃಹಸ್ಥನಾಗಿ ಕುಟುಂಬ ನಡೆಸುವುದಕ್ಕೆ ಕಾರಣಳಾದವಳು ಆ ಗಿರಿಜಾ ಎಂಬುದರಿಂದ, ತನಗೆ ಅವಳ ಮೇಲೆ ಉಂಟಾಗುವ ಈ ಕೋಪಕ್ಕೆ ನ್ಯಾಯವುಂಟು ಎಂದುಕೊಂಡ.

ಈಗ ಈ ಸಮಯದಲ್ಲಿ 'ಅವಳನ್ನು ಹೋಗಿ ನೋಡಿದರೆ?' ಎಂಬ ಆಲೋಚನೆ ಹೊಳೆಯಿತು. ಅವಳನ್ನು ಯಾವಾಗ ಬೇಕಾದರೂ ಹೋಗಿ ನೋಡಬಹುದು. ಈ ಆರು ತಿಂಗಳ ಕಾಲದಲ್ಲಿ ಮದುವೆಯಾದ ನಂತರ ಪ್ರತಿದಿನ ಇವಳೊಂದಿಗೆ ಮನಸ್ತಾಪ ಕಟ್ಟಿ ಕೊಂಡು 'ಯಾಕೆ ಇಂತಹ ತಕರಾರಿಗೆ ಸಿಕ್ಕಿಕೊಂಡೆ' ಎಂದು ಬೇಸರವಾದಾಗಲೆಲ್ಲಾ ಅವನು ಗಿರಿಜೆಯನ್ನು ಜ್ಞಾಪಕ ಮಾಡಿಕೊಳ್ಳುವುದುಂಟು. ಆದರೂ ಅಲ್ಲಿಗೆ ಹೋಗ ಬೇಕೆಂಬ ಮನೋಭಾವ ಉಂಟಾದುದು ಈಗಲೇ.

ನಾನು ಇವಳನ್ನು ಮದುವೆಯಾಗುವ ಮುನ್ನ ಹೇಗೆಲ್ಲಾ ಇದ್ದರೂ, ಈಗ ಇವಳನ್ನು ಒಂಟಿಯಾಗಿ ಬಿಟ್ಟು, ಅಲ್ಲಿಗೆ ಹೋಗುವುದು ಇವಳಿಗೆ ದ್ರೋಹ ಮಾಡಿದಂತಾಗುವು ದಿಲ್ಲವೆ? – ಎಂದು ಯೋಚಿಸಿದ. ಇವಳೆಂತಹ ಜಗಳಗಂಟಿಯಾಗಿದ್ದರೂ', ಇವಳ ಮೇಲೆ ತನಗೆ ಎಂತಹ ಕೋಪವಿದ್ದರೂ ತನ್ನ ಮೇಲಿನ ದ್ವೇಷದಿಂದ ಅದಕ್ಕೆ ಸಮಾಧಾನ ಪಡೆ ಯುವ ಪ್ರಯತ್ನವೇನಾದರೂ ಮಾಡಿದರೆ ಅದನ್ನು ತಾನು ತಾಳಬಹುದೆ – ? ಎಂದು ಕೊಂಡು, ಹಾಗೆಂದು ಕೊಂಡುದನ್ನೇ ತಾಳಲಾರದೆ ಹಣೆಯನ್ನುಜ್ಜಿಕೊಂಡ.

ಗಡಿಯಾರ ಒಂದು ಹೊಡೆಯಿತು. ಇನ್ನೂ ಒಂದು ಗಂಟೆಯಾಗಿರಲಾರದು. ಮುಚ್ಚಿದ್ದ ಬಾಗಿಲನ್ನು ಮೆಲ್ಲನೆ ತೆರೆದು ಕೈಗಡಿಯಾರವನ್ನು ಒಳಗಿನಿಂದ ಬಂದ ಬೆಳಕಿನ ಕಿರಣದಲ್ಲಿ ನೋಡಿದ. ಇವನ ಗಡಿಯಾರದಲ್ಲಿ ಇನ್ನೂ ಹನ್ನೊಂದೂವರೆ ಆಗಿರಲಿಲ್ಲ. ಗಂಟೆ ಹೊಡೆದುದು ಹನ್ನೊಂದೂವರೆಯೇ ಎಂದು ತೀರ್ಮಾನಿಸಿಕೊಂಡು ಬಾಗಿಲ ಸಂದಿಯಿಂದ ಅವಳನ್ನು ನೋಡಿದ. ಅವಳು ಅಲುಗಾಡದೆ, ಹೊರಳದೆ ಹಿಂದೆ ಮಲಗಿ ದ್ದಂತೆಯೇ ಬೆನ್ನು ತಿರುಗಿಸಿಕೊಂಡೇ ಮಲಗಿದ್ದಳು. ಇವನಿಗೆ ಕೋಪ ಬಂದಿತು. ಎದ್ದು ಹೋಗಿ ಬೆನ್ನಲ್ಲಿ ಎರಡೇಟೋ ಒಂದು ಒದೆಯೋ ಕೊಡೋಣವೇ ಎಂಬ ಅಹಂಭಾವ ಮೂಡಿತು. ಛೀ ಎಂದು ತನ್ನ ಮೇಲೆ ತಾನೇ ಬೇಸರಗೊಂಡ.

ಅಂತಹ ಕ್ರೂರವಾದ, ಆಭಾಸವಾದ ಸಂಭವಗಳನ್ನು ಅವನು ಬಾಲ್ಯದಲ್ಲಿ ಅನುಭವಿ ಸಿದ್ದ... ಥಟ್ಟನೆ ಅರ್ಧ ರಾತ್ರಿಯಲ್ಲಿ ಅವನ ತಾಯಿಯ ದೈನ್ಯವಾದ ಗೋಳು ಕೇಳಿಸು ತ್ತಿತ್ತು. ಎಚ್ಚರಗೊಂಡು ಎದ್ದು ದೇಹ, ಪ್ರಾಣ ಕಂಪಿಸುತ್ತಿದ್ದಂತೆ ಇವನು ನಿಲ್ಲುತ್ತಿದ್ದ.

ಇವನ ತಂದೆ, ಹುಚ್ಚು ಹಿಡಿದವರಂತೆ ಆವೇಶದಿಂದ ಇವನ ತಾಯಿಯನ್ನು ಮುಖ ಮೋರೆ ನೋಡದೆ ಕಾಲು ಕೈಗಳಿಂದ ಎತ್ತಿ ಎತ್ತಿ ಹೊಡೆಯುತ್ತಿರಲು ಅವಳು "ಅಯ್ಯೋ ಪಾಪಿ... ಚಂಡಾಲ..." ಎಂದು ಅಳುತ್ತಲೇ ಆಕ್ರೋಶದಿಂದ ನಿಂದಿಸುತ್ತಿದ್ದಳು. ಅವಳ ನಿಂದನೆಯನ್ನು ಕೇಳಿ ಅವರು ಮತ್ತಷ್ಟು ಬಡಿಯುತ್ತಿದ್ದರು...

ಆ ದಿನಗಳು ಮಹಾ ಕ್ರೂರವಾದುವು. ಮಾರನೆಯ ದಿನ, ಏನೂ ನಡೆಯಲೇ ಇಲ್ಲ ವೆಂಬಂತೆ ಅವರಿಬ್ಬರೂ ವರ್ತಿಸುತ್ತಿದ್ದುದೂ – ಅವರು ತಂದೆಗೆ ಸೇವೆ ಮಾಡುವುದೂ, ತಂದೆ, ತಾಯಿಯ ಹೆಸರು ಹಿಡಿದು ಕರೆದು ವ್ಯವಹರಿಸುವುದೂ – ಇವನಿಗೆ ಬಹಳ ಆಭಾಸವಾಗಿ ಕಾಣುತ್ತಿತ್ತು. ಇದೆಲ್ಲಾ ಏನೆಂದೇ ಅರ್ಥವಾಗದ ಆಶ್ಚರ್ಯ ಉಂಟಾಗು ತ್ತಿತ್ತು.

ಹದಿನೈದು ವರ್ಷಗಳವರೆಗೆ ಹೀಗೆ ಅವನ ಜೀವನ ನಡೆಯಿತು. ಅವರ ಜಗಳಕ್ಕಿಂತ ಅವರ ಶಾಂತ ಪರಿಸ್ಥಿತಿ ಅವನ ಮನಸ್ಸಿಗೆ ಅಸಹನೀಯವಾಗಿತ್ತು. ಅವನಿಗೆ ತಂದೆಯ ಮೇಲೆ ಮಹಾ ದ್ವೇಷ. 'ಕುಟುಂಬ ದಾಂಪತ್ಯ ಎನ್ನುವುದು ಮಹಾ ಸಂಕಟಕರ' ಎಂಬ ಭಾವನೆ ಬಾಲ್ಯದಲ್ಲಿಯೇ ಅವನಿಗೆ ಉಂಟಾಗಲು ಆ ಅನುಭವಗಳೇ ಕಾರಣವಾದುವೇನೋ.

ಈಗ ಅವನ ತಂದೆಯವರಿಲ್ಲ. ಅವನ ವಿಧವೆ ತಾಯಿ ವೃದ್ಧಾಪ್ಯವನ್ನು ಗ್ರಾಮದಲ್ಲಿ ಕಳೆಯುತ್ತಿದ್ದರು. ತಾವು ಸಾಯುವ ಮುನ್ನ ಇವನಿಗೆ ಮದುವೆಯಾಗುವುದನ್ನು ನೋಡ ಬೇಕೆಂಬ ತಮ್ಮ ಆಸೆಯನ್ನು ಇವನಿಗೆ ತಿಳಿಸುವಾಗಲೆಲ್ಲಾ ಅವರ ಬಾಳಿನ ಕಡೆ ಕೈತೋರಿ ತಾಯಿಯನ್ನು ಪರಿಹಾಸ ಮಾಡುತ್ತಿದ್ದ. ಅವರಿಗೆ ಆಗ ವ್ಯಥೆ ಮತ್ತು ಕೋಪವೂ ಬರು ತ್ತಿತ್ತು. ಆದರೂ ಅದನ್ನು ತೋರ್ಪಡಿಸಿಕೊಳ್ಳದೆ "ನನ್ನ ಬಾಳಿನಲ್ಲಿ ಯಾವ ಕೊರತೆ ಇತ್ತು?" ಎಂದು ಹೆಮ್ಮೆಯಾಗಿ ಕೇಳುತ್ತಿದ್ದರು. ಕಡೆಯಲ್ಲಿ "ಮದುವೆಮಾಡಿಕೊಳ್ಳುವು ದಿಲ್ಲ" ಎಂದು ಕಠಿಣವಾಗಿ ಅವರೆದುರಿಗೇ ಹೇಳಿ ಬಂದುಬಿಡುತ್ತಿದ್ದ ನಂದಗೋಪಾಲ.

ನಗರದಲ್ಲಿ ನೌಕರಿ ಮಾಡುತ್ತಾ ಒಂಟಿ ಬಾಳಿಗೆ ಹೊಂದಿಕೊಂಡು ಹಾಗೆಯೇ ಮೂವತ್ತು ವರ್ಷ ಕಳೆದ ಅವನಿಗೆ ಮದುವೆಯ ಆಸೆ, ಗೃಹಸ್ಥ ಜೀವನದ ಆನಂದ ಕಲ್ಪನೆಗಳನ್ನೂ ಬೆಳೆಸಿ ಒಪ್ಪಿಸಿದುದು ಗಿರಿಜೆಯ ನಂಟು.' ಗಿರಿಜೆಗೆ ಮೊದಲು ಅವನಿಗೆ ಅಂತಹ ಸಂಬಂಧ ಬೇರಾವ ಹೆಣ್ಣನೊಂದಿಗೂ ಇರಲಿಲ್ಲ. ಅವಳಿಗೆ ಇವನು ತೀರಾ ಹೊಸಬ. ಆದರೆ ಅವಳು ಹಾಗಲ್ಲ ಎಂದು ಇವನಿಗೆ ಮಾತ್ರವಲ್ಲ, ಬೇರೆಯವರಿಗೂ ತಿಳಿದಿತ್ತು. ಅವಳಾದರೂ ಅವೆಲ್ಲವನ್ನೂ ಮುಚ್ಚಿಡುವ ಸ್ಥಿತಿಯಲ್ಲಿರಲಿಲ್ಲ. ಏನಾದ ರಾಗಲಿ, ಇವನೊಂದಿಗೆ ಕಳೆದ ದಿನಗಳಲ್ಲಿ ಅವಳು ನಿಜವಾಗಿ ಪ್ರೀತಿಯಿಂದ ಓರ್ವ ಹೆಣ್ಣಿನ ಜೊತೆಯಿರುವುದು, ಸಂಬಂಧ ಹೊಂದಿರುವುದು, ಗಂಡನಿಗೆ ಎಷ್ಟು ಆನಂದ, ಅನುಕೂಲ ಎಂಬುದನ್ನು ಮನದಟ್ಟು ಮಾಡಿಕೊಡುವ ರೀತಿಯಿಂದಿದ್ದಳು. ಆ ಎರಡು ತಿಂಗಳ ಕಾಲ ಬಹು ಮೇಲ್ಪಟ್ಟದ ಗೃಹಸ್ಥತನ ಎಂದು ಈ ನಿಮಿಷ – ಇವನನ್ನು ಅವಮಾನಪಡಿ ಸಿಯೂ ಅಸಡ್ಡೆಯಿಂದ ದೂರಮಾಡಿಯೂ ಈ ಅರ್ಧರಾತ್ರಿಯಲ್ಲಿ ಹೊರಗೆ ಕೂಡಿಸಿ

ಬೆನ್ನು ತಿರುಗಿಸಿ ಮಲಗಿದ್ದಾಳಲ್ಲ, ಅವಳ ಮೇಲೆ ಉಕ್ಕಿ ಬರುವ ಕೋಪದಲ್ಲಿ – ನೆನೆಸಿ ಕೊಂಡು ನಿಟ್ಟುಸಿರು ಕಣ್ಣೀರಿನೊಡನೆ ಪರಿತಾಪಕರವಾಗಿ ನಂದಗೋಪಾಲ ಮತ್ತೆ ಮನೆಯೊಳಗೆ ಹಿಂತಿರುಗಿ ನೋಡಿದ.

ಅವಳು ನಿಶ್ಚಯವಾಗಿ ಏಳುವುದಿಲ್ಲ; ಸಮಾಧಾನಕ್ಕೆ ಮುಂದೆ ಬರುವುದಿಲ್ಲ. ಈ ಆರು ತಿಂಗಳ ಅನುಭವದಲ್ಲಿ ಇಂತಹ ಪ್ರಸಂಗಗಳು ಅವನಿಗೆ ಅಭ್ಯಾಸವಾಗಿ ಹೋಗಿ ಇದರ ಆರಂಭ ಬೆಳವಣಿಗೆ ಅಂತ್ಯ ಅವನಿಗೆ ಒಂದೊಂದು ಬಾರಿಯೂ ಮುಂಚೆಯೇ ಗೊತ್ತಾಗಿದ್ದರೂ ಈಗ ತಾಳಲಾರದೆ ಹೋದ. ನಂತರ ಯೋಚಿಸಿ ನೋಡಿದುದರಲ್ಲಿ ಇವನ ಬುದ್ಧಿಪೂರ್ವಕವಾದ ಯಾವ ನ್ಯಾಯ ರೀತಿಗೂ ಈ ಘಟನೆಗಳು ಹೊಂದಲಿಲ್ಲ. ದಿನಗಳೆದಂತೆ ಈ ಜೀವನ ಅಪಮಾನಕರವಾಗಿಯೂ ಚಿಂತೆಯಿಂದ ತುಂಬಿದುದಾಗಿಯೂ ಮಾರ್ಪಡುತ್ತಿದ್ದುದನ್ನು ಹೇಗೆ ತಡೆಯುವುದು ಎಂದು ಅರ್ಥವಾಗಲೂ ಇಲ್ಲ.

ಒಳಗೆ ಮಂದವಾದ ಬೆಳಕು, ಒಣಗಿ ಹಾಕಿದ್ದ ಬಟ್ಟೆಗಳೂ ನೆರಳಲ್ಲಿ ಕಾಣಿಸುತ್ತಿದ್ದ ಅಡುಗೆ ಮನೆಯೊಳಗೆ ಪಾತ್ರೆಗಳ ಹೊಳಪೂ ಅವು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ರೀತಿಯೂ ಮನಸ್ಸಿಗೆ ದುಃಖವನ್ನುಂಟುಮಾಡಿದವು.

ಒಂದೇ ಕೋಣೆ, ಅದರ ಪಕ್ಕದಲ್ಲಿ ಬಾಗಿಲಿಲ್ಲದ ಒಂದು ಗೋಡೆಯಿಂದ ಭಾಗವಾದ ಚಿಕ್ಕ ಅಡುಗೆಮನೆಯೂ ಅದರೊಳಗೆ ಅಡಗಿದ್ದ ಬಚ್ಚಲೂ ಇದ್ದ ಆ ಮನೆಗೆ ನಲವತ್ತೈದು ರೂಪಾಯಿ ಬಾಡಿಗೆ. ಸಂಸಾರದ ಖರ್ಚು ತಿಂಗಳು ನೂರೈವತ್ತು; ನಂದಗೋಪಾಲನಿಗೆ ಸಂಬಳ ಹೆಚ್ಚುಕಡಿಮೆ ಮುನ್ನೂರು ರೂಪಾಯಿ. ಒಗ್ಗಟ್ಟಾದ ಮನಸ್ಸಿನಿಂದ ಬಾಳಿದರೆ ಈ ಕೊರತೆ ದುಃಖಕರವಾದುದೇನೂ ಅಲ್ಲ. ಆರೇಳು ಮಂದಿ ಸೇರಿ ಪ್ರತಿಯೊಬ್ಬ ನೂರು ರೂಪಾಯಿ ಕೊಟ್ಟು ಎಲ್ಲಾ ವಸತಿಗಳನ್ನು ಪಡೆದು ಬಾಳಿದ ಆ ಮೆಸ್ ಜೀವನಕ್ಕೆ ಈಗ ಮನಸ್ಸು ಹಾತೊರೆಯುತ್ತಿದ್ದುದನ್ನು ಅರಿತು ಇವನಿಗೇ ಬೇಸರವಾಯಿತು.

ದೀರ್ಘವಾದ ನಿಟ್ಟುಸಿರು ಬಿಟ್ಟು ಎದ್ದ. ಗಿರಿಜೆಯನ್ನು ಹೋಗಿ ನೋಡಿ ರಾತ್ರಿ ಅವಳೊಂದಿಗೆ ಕಳೆದರೆ ಮನಸ್ಸಿಗೆ ಸಮಾಧಾನ ತಂದೀತು ಎನಿಸಿತು. 'ಬೇರೆ ಯಾವುದಕ್ಕೂ ಅಲ್ಲ' – ಎಂಬ ಎಣಿಕೆಯಿಂದ ಈ ತಳಮಳವನ್ನು ಒದರಿ 'ಅವಳೊಂದಿಗೆ ಮಾತನಾಡಿ ಕೊಂಡಿರುವುದೇ ನನಗೆ ನೆಮ್ಮದಿ' ಎಂಬ ಸಮಾಧಾನದಿಂದ ಮೇಲೆ ಎದ್ದ. ಒಳಗೆ ಹೋಗಿ ಷರಟು ಧರಿಸಿದ. ನೈಟ್ ಲ್ಯಾಂಪ್‌ನ ಮಂದ ಬೆಳಕಿನ ಜೊತೆಗೆ 40 ವೋಲ್ಟ್ ಲೈಟ್ ಹಾಕಿದಾಗ ಉಂಟಾದ ಬೆಳಕು ಕಣ್ಣು ಚುಚ್ಚಿತು.

"ಏಯ್..." ಎಂದು ಅವಳನ್ನು ಮೆಲ್ಲನೆ ತಟ್ಟಿ ಎಚ್ಚರಿಸಿದ. ಅವಳು ಅಲುಗಾಡಲಿಲ್ಲ.

"ಈಗ ನಿನ್ನ ಬಳಿ ಬೇಡಿಕೊಳ್ಳಲು ಎಬ್ಬಿಸಲಿಲ್ಲ. ನಾನು ಹೊರಗೆ ಹೋಗುತ್ತೇನೆ. ಬಾಗಿಲು ಹಾಕಿಕೋ" ಎಂದು ಅವಳ ಭುಜವನ್ನು ಅಲುಗಿಸಿ ನೋವಾಗುವಂತೆ ಹಿಡಿದು ಒರಟಾಗಿ ತಿರುಗಿಸಿದ.

ಅವಳು ಎದ್ದು ಕುಳಿತು ದ್ವೇಷದಿಂದ ರೋಷದಿಂದ ಇವನನ್ನು ನೋಡಿದಳು.

ಇಷ್ಟು ಹೊತ್ತು ಏಳದವಳು ನಾನು ಹೋಗುತ್ತೇನೆ ಎನ್ನುತ್ತಲೂ ಬಾಗಿಲು ಹಾಕಿಕೊಳ್ಳಲು ಸಿದ್ಧವಾಗಿ ಎದ್ದು ಕುಳಿತುದು ಅವನಿಗೆ ಇನ್ನೂ ಕೋಪ ಉಂಟುಮಾಡಿತು.

'ಈ ಅವೇಳೆಯಲ್ಲಿ ಎಲ್ಲಿಗೆ ಹೋಗುತ್ತೀರಿ?' ಎಂದು ಕೇಳುವುದು ನ್ಯಾಯವಾಗಿತ್ತು. ಆದರೆ ಅವಳು ಕೇಳಲಿಲ್ಲ. 'ಹೋಗಬೇಕಾದರೆ ತೊಲಗಿಹೋಗಿ... ನಾನು ಶಾಂತಿಯಿಂದ ಮಲಗಿಕೊಳ್ಳುತ್ತೇನೆ' ಎಂಬಂತೆ ಅವಳು, ಅವನು ಷರಟು ಹಾಕಿಕೊಂಡು ನಿಂತುದನ್ನು ಅಲಕ್ಷಿಸಿ, ಎದ್ದು ಮಂಚದ ಮೇಲೆ ಕುಳಿತಿದ್ದಳು. ಅವನು ಬಾಗಿ ಮಂಚದ ಕೆಳಗೆ ಚಪ್ಪಲಿಗಳನ್ನು ಹುಡುಕಿದ. ಮಂಚದ ಹೊರಗೆ ಅವಳ ಸೀರೆಯ ನೆರಿಗೆಯೋ ಕಾಲುಗಳ ನೆರಳೋ ಅಡ್ಡವಾಗಿತ್ತು. ತಾನು ಬಾಗಿ ಚಪ್ಪಲಿಗಳನ್ನು ಹುಡುಕುವಾಗ ಅವಳು ಹೀಗೆ ಕುಳಿತಿದ್ದು – ತಾನು ಅಡ್ಡಹಾಕಿರುವೆ ವಿಚಾರ ಅವಳಿಗೆ ತಿಳಿಯದು ಎಂಬುದು ಅವನ ಅರಿವಿಗೆ ಬಂತು – ಮಂಚದ ಮೇಲೆ ಕುಳಿತಿರುವುದೇ ಅವಮರ್ಯಾದೆ ಎಂದು ಅವನ ಭಾವನೆ. ಆ ಕೋಪದಿಂದಲೇ ಅವನು ಚಪ್ಪಲಿಗಳನ್ನು ಹುಡುಕಿ ಎತ್ತಿಕೊಂಡು ನಿಂತಾಗ ಮಂಚದ ಅಂಚಿಗೆ ತಲೆ ತಾಕಿತು. ಕಣ್ಣೀರು ಬರುವಂತೆ ನೋವಾಯಿತು. ಅವಳು ಯಾವ ಆತಂಕವನ್ನೂ ತೋರದೆ ಕುಳಿತಿದ್ದಳು. 'ಇದೇ ರೀತಿ ಒಂದು ಸಂದರ್ಭದಲ್ಲಿ ಅವಳಿಗೆ ಹೀಗೆ ಏಟೋ, ಬೆರಳಲ್ಲಿ ಗಾಯವೋ ಆಗಿದ್ದರೆ ತಾನು ಸುಮ್ಮನಿರಲು ಸಾಧ್ಯವಾಗುತ್ತಿರಲಿಲ್ಲವಲ್ಲ?' ಎಂಬ ವಿಚಾರದಲ್ಲಿ ಅವನು ಸಂತಾಪದಿಂದ ಮುಖವನ್ನು ತಿರುಗಿಸಿಕೊಂಡು ಚಪ್ಪಲಿಗಳನ್ನು ಧರಿಸಿ ಹೊರಹೊರಟ.

ತೆಗೆದ ಬಾಗಿಲನ್ನು ಮುಚ್ಚದೆ ನಿಧಾನವಾಗಿ ಅವನು ಮುಂದೆ ನಡೆದು ವರಾಂಡದಲ್ಲಿ ಕಂಭಕ್ಕೆ ಒರಗಿಸಿ ನಿಲ್ಲಿಸಿದ್ದ ಬೈಸಿಕಲ್ ಬೀಗ ತೆಗೆದು, ಕತ್ತಲಲ್ಲಿ ನಿಂತಿದ್ದ ತನ್ನನ್ನು ಅವಳು ನೋಡಲಾರಳು ಎಂಬುದರಿಂದ ಅವಳು ಹೊರಗೆ ತಲೆಹಾಕಿ ನೋಡುತ್ತಾಳೋ ಎಂದು ಅತ್ತ ನೋಡಿದ. ಅವನ ಮನ ನಿರಾಶೆಗೊಳ್ಳುವ ರೀತಿಯಲ್ಲಿ ಅವಳು ಧಡಾರನೆ ಬಾಗಿಲನ್ನು ಮುಚ್ಚಿ ಬೋಲ್ಟ್ ಹಾಕಿದಳು. ಅವಳು ಹೊರಗೆ ತಲೆಹಾಕಿ ನೋಡದೆ ಹಾಗೆ ಮಾಡಿದುದು ಇವನಿಗೆ ವ್ಯಥೆಯನ್ನುಂಟುಮಾಡಿತು. ಕೋಣೆಯಲ್ಲಿ 40 ವೋಲ್ಟ್ ಬೆಳಕು ಆ ನೈಟ್ ಲ್ಯಾಂಪಿನ ಮಂದ ಬೆಳಕು ವೆಂಟಿಲೇಟರ್ ಮೂಲಕ ಹೊರಗೆ ಕಾಣಿಸಿತು.

ನಂದಗೋಪಾಲ ಬೈಸಿಕಲ್ ತಳ್ಳಿಕೊಂಡು ಹೊರಟ. ಬಾಗಿಲಲ್ಲಿ ಕೆಲಸದ ಮುದುಕಿ ತನ್ನ ಹಾಸುಗೆಯಲ್ಲಿ ಕುಳಿತು ಕೆಮ್ಮುತ್ತಿದ್ದವಳು ಅವನು ಹೊರಗೆ ಹೋಗಲಾಗಿ "ಹಿಂತಿರುಗಿ ಎಷ್ಟು ಹೊತ್ತಿಗೆ ಬರುತ್ತೀಯಪ್ಪಾ?" ಎಂದು ಕೇಳಿ ಇವನು "ಇಲ್ಲ" ಎಂದು ಹೇಳಿದ ಮೇಲೆ ಹೊರಬಾಗಿಲನ್ನು ಹಾಕಿಕೊಂಡಳು. ಅವನು ಹೊರಗೆ ಬಂದು ನಿಂತು ಒಂದು ಸಿಗರೇಟು ಹಚ್ಚಿದಾಗ ಬೀದಿಯ ದೀಪಗಳು ಥಟ್ಟನೆ ಆರಿಹೋದುವು. ಡೈನಮೋ ಬೆಳಕಿನಲ್ಲಿ ದಾರಿ ಹಿಡಿದು ಅವನು ಸೈಕಲ್ ತುಳಿದ.

ಗಿರಿಜೆಯ ಮನೆ ಮಾಂಬಲದ ಪಶ್ಚಿಮ ಭಾಗದಲ್ಲಿ ಮಟ್ಟಸವಲ್ಲದ, ಸಗಣಿಕಸ ಹಸುಕರು ತುಂಬಿದ ಒಂದು ಬೀದಿಯಲ್ಲಿದೆ. ಬೀದಿಯ ಕಡೆ ಮಹಡಿಯ ಮೆಟ್ಟಿಲುಳ್ಳ ಒಂದು

ಮನೆ. ಮಹಡಿಯಲ್ಲಿ ಅವಳು ಸ್ವತಂತ್ರ ಜೀವನ ನಡೆಸುತ್ತಿದ್ದಳು. ಅವಳಿಗೊಬ್ಬ ತಾಯಿ. ಅವಳೆಲ್ಲೋ ಸಿರಿವಂತರೊಬ್ಬರ ಮನೆಯಲ್ಲಿ 'ಆಯಾ' ಕೆಲಸ ಮಾಡುತ್ತಿದ್ದಳು. ಯಾವಾಗಲಾದರೊಮ್ಮೆ ಮಗಳನ್ನು ನೋಡಿಕೊಂಡು ಮಾಂಸದೂಟ ಮಾಡಿ ಹೋಗುತ್ತಿದ್ದಳು. ಅವಳು ಕೆಲಸ ಮಾಡುವ ಮನೆಯಲ್ಲಿ ಮಾಂಸದ ಅಡುಗೆ ಮಾಡುವುದಿಲ್ಲವಂತೆ. ಗಿರಿಜೆಗೆ ಇಪ್ಪತ್ತೈದು ವರ್ಷದ ತಮ್ಮನೊಬ್ಬ. ಅವನಿಗೆ ಸಿನಿಮಾ ಕಂಪೆನಿಯೊಂದರಲ್ಲಿ ಕೆಲಸ. ಅವನೂ ಅಷ್ಟೇ. ಯಾವಾಗಲಾದರೊಮ್ಮೆ ಬರುತ್ತಿದ್ದ. ಗಿರಿಜೆ ಹತ್ತನೆಯ ಕ್ಲಾಸಿನವರೆಗೆ ಓದಿದ್ದಳು. ನಿರಂತರವಾಗಿ ಅಲ್ಲದಿದ್ದರೂ ಟೆಂಪೊರೆರಿಯಾಗಿ ಒಬ್ಬೊಬ್ಬರ ಬಳಿ ಅವಳ ವೃತ್ತಿ. ಮೂವತ್ತು ವರ್ಷ ವಯಸ್ಸು. ಇಂತಹ ನಿರಾಧಾರವಾದ, ನೆಲೆಯಿಲ್ಲದ ಬಾಳಿನಲ್ಲೂ ಅವಳು ತುಂಬಿದ ಬಾಳಿನ ಮುಖವರಳಿಸಿ ನಡೆದಿದ್ದಳು.

ನಂದಗೋಪಾಲ ಕೆಲಸ ಮಾಡುವ ಕಾಸ್ಮೆಟಿಕ್ಸ್ ಕಂಪೆನಿಯವರು ಏರ್ಪಡಿಸಿದ್ದ ಎಕ್ಸಿಬಿಷನ್ನಿನಲ್ಲಿ ಒಂದು ಸ್ಟಾಲ್ ಇಟ್ಟಿದ್ದರು. ಅಲ್ಲಿ ಇವಳು ಕೆಲಸ ಮಾಡುತ್ತಿದ್ದಾಗ ಹೋದ ವರ್ಷ ಡಿಸೆಂಬರ್ ತಿಂಗಳಲ್ಲಿ ಅವಳನ್ನು ಸಂಧಿಸಿದ. ನೋಡಿದೊಡನೆ ಇದಕ್ಕೆ ಮುಂಚೆ ಎಲ್ಲೋ ನೋಡಿದಂತೆ ಅವಳ ಮುಖದಲ್ಲಿ ಇವನಿಗೇನೋ ಕಂಡಿತು. ಈ ಸ್ಟಾಲ್‌ನಲ್ಲಿ ಸೇಲ್ಸ್ ಗರ್ಲ್ ಆಗಿ ಕೆಲಸ ಮಾಡುವುದಕ್ಕಾಗಿ ತಂದುಕೊಂಡ ಮುಖಭಾವವೋ ಎಂದುಕೊಂಡ ಮೊದಲು. ನಂತರ ತಿಳಿಯಿತು, ಡಿಸ್ಪ್ಯಾಚಿಂಗ್ ಕ್ಲರ್ಕ್ ಆಗಿ ಕೆಲಸ ಮಾಡುವ ಆ ಕಾಸ್ಮೆಟಿಕ್ಸ್ ಕಂಪೆನಿಯು ಪ್ರತಿದಿನ ಪಾರ್ಸೆಲ್ ಆಗಿ ಕಳುಹಿಸಲ್ಪಡುವ ಪೌಡರ್ ಟಿನ್‌ಗಳ ಮೇಲಿರುವುದು ಇವಳ ಚಿತ್ರವೇ ಎಂದು. ಎರಡು ತಿಂಗಳು ಕಾಲ ಸಾಯಂಕಾಲ ಮಾತ್ರ ಪಾರ್ಟ್‌ಟೈಮ್ ಆಗಿ ಎಕ್ಸಿಬಿಷನ್‌ನಲ್ಲಿ ಕೆಲಸ ಮಾಡಿದಾಗ ಅವಳೊಂದಿಗೆ ಉಂಟಾದ ಸ್ನೇಹದಲ್ಲಿ, ಅವಳ ಬಗ್ಗೆ ವಿಚಾರಗಳನ್ನು ತಿಳಿದುಕೊಂಡ. ಗೌರವವಾದ ನಿರಂತರ ಉದ್ಯೋಗಕ್ಕಾಗಿ ಅವಳು ಒಬ್ಬೊಬ್ಬರಿಂದಲೂ ಶಿಫಾರಸು ಬೇಡಿದಾಗ ಇವನು ಅವಳ ಬಗ್ಗೆ ಪರಿತಾಪಪಟ್ಟ. ಆದರೂ ಅವಳಿಗೆ ತಕ್ಕ ಕೆಲಸ ದೊರಕಿಸಿ ಕೊಡುವುದು ತನ್ನ ಶಕ್ತಿಗೆ ಮೀರಿದುದು ಎಂದು ಅವಳ ಬಗ್ಗೆ ಚಿಂತಿಸುತ್ತಲೇ ದೂರವಿದ್ದ.

ಅವಳು ಎಲ್ಲರೊಂದಿಗೂ ಕಲಕಲ ಮಾತನಾಡುತ್ತಿದ್ದಳು. ಇವನೇ ಅವಳನ್ನು ಮೊದಲು ಟೀ ಕುಡಿಯಲು ಕರೆದದ್ದು. ಇವನೊಂದಿಗೆ ಮಾತಿಗೆ ತೊಡಗಿದಳು. ರಾತ್ರಿ ಹನ್ನೊಂದು ಗಂಟೆಗೆ ಮನೆಗೆ ಹಿಂತಿರುಗುವಾಗ ಕೆಲವು ದಿನ ಆ ಸೇಲ್ಸ್ ಮ್ಯಾನೇಜರ್, ತಾನು ಕಾರಿನಲ್ಲಿ ಹೋಗುವಾಗ ಹಾಗೆ ದಾರಿಯಲ್ಲಿ ಬಿಡುವುದಾಗಿ ಹೇಳಿ ಕರೆದುಕೊಂಡು ಹೋಗುತ್ತಿದ್ದರು. ಅವರ ಬಗ್ಗೆ ಆಫೀಸಿನಲ್ಲಿ ಒಂದು ತರಹೆ ಮಾತನಾಡಿಕೊಳ್ಳುತ್ತಿದ್ದರು. ಅವರೊಂದಿಗೆ ಅವಳು ಹೋಗುವುದನ್ನು ಕಂಡು ಇವನಿಗೆ ಸರಿಹೋಗುತ್ತಿರಲಿಲ್ಲ. ಒಂದು ದಿನ ಮ್ಯಾನೇಜರ್ ಅವಳನ್ನು ತಮ್ಮೊಂದಿಗೆ ಕರೆದಾಗ ಅವಳು ನಂದಗೋಪಾಲನನ್ನು ತೋರಿಸಿ "ಮಿಸ್ಟರ್ ನಂದಗೋಪಾಲ್ ಅವರು ನಮ್ಮ ಮನೆಗೆ ಹೋಗುವ ದಾರಿಯಲ್ಲೇ

ಇದ್ದಾರೆ ಸಾರ್. ನಾವು ಮಾತನಾಡಿಕೊಂಡು ಹೋಗುತ್ತೇವೆ ಸಾರ್, ಏನು ಮಿಸ್ಟರ್?" ಎಂದು ಇವನನ್ನು ನೋಡಿ ಮುಗುಳ್ನಕ್ಕಾಗ ಸಮ್ಮತಿಯಿತ್ತ.

ಅವಳ ಮಾತು ಇವನಿಗೆ ವಿನೋದಕರವಾಗಿತ್ತು. 'ಏನ್ರೀ... ಸರೀರಿ... ಹೌದ್ರೀ" ಎಂದು ಅವಳು ಸ್ವಲ್ಪ ಎಳೆದೆಳೆದು ಮಾತನಾಡುತ್ತಿದ್ದಳು. ಮನೆಯಲ್ಲಿ ಮಾತನಾಡುವುದು ತೆಲುಗು ಎಂದು ಇವನಿಗೆ ಆಮೇಲೆ ತಿಳಿಯಿತು. ಓದಿದ್ದು ತಮಿಳೇ. ತೆಲುಗು ಎಂದರೆ 'ಮದರಾಸು ತಮಿಳಿನಂತೆ', 'ಮದರಾಸು ತೆಲುಗಂತೆ' – 'ನಗುನಗುತ್ತಾ ಅದೆಷ್ಟು ಚೆನ್ನಾಗಿ ಮಾತನಾಡುತ್ತಾಳೆ' ಎಂದು ನೆನಪಿಸಿಕೊಂಡು ನಂದಗೋಪಾಲ ವೇಗವಾಗಿ ಬೈಸಿಕಲ್ ತುಳಿದ.

ಅವಳು ನಿಜವಾಗಿಯೂ ಸಂತೋಷವಾಗಿದ್ದಾಳೆ ಎಂಬುದನ್ನು ಅವಳೊಂದಿಗೆ ಗಾಢ ಪರಿಚಯವಾದ ಮೇಲೆ ಇವನು ಅರಿತ. ಎಕ್ಸಿಬಿಷನ್ ಸ್ಟಾಲ್ ಕೆಲಸ ಮುಗಿದ ಮೇಲೆ, ಟೆಲಿಫೋನ್ ಕ್ಲೀನ್ ಮಾಡಿ ಅದಕ್ಕೆ ಸುವಾಸನೆ ಹಾಕುವ ಕಂಪೆನಿಯೊಂದರಲ್ಲಿ ಕೆಲಸಕ್ಕೆ ಸೇರಿ ಟೆಲಿಫೋನ್‌ಗಳಿದ್ದ ಮನೆಗಳಿಗೂ ಕಂಪೆನಿಗಳಿಗೂ ಹತ್ತಿಳಿದು ಬರುವಾಗ, ಒಂದು ದಿನ ಅವನು ರಸ್ತೆಯಲ್ಲಿ ಇವಳನ್ನು ನೋಡಿದ. ಹೀಗೆ ಯಾವುದಾದರೂ ಒಂದು ಗೌರವ ವಾದ ನೌಕರಿ ಮಾಡಿ ಅವಳು ಸಂಪಾದಿಸುತ್ತಿದ್ದಳು : ವಯಸ್ಸು ಮೂವತ್ತಾದ್ದರಿಂದಲೂ ಏತನ್ಮಧ್ಯೆ ನಂಬಿಕೆ ಅಥವಾ ಆವಶ್ಯಕತೆಯ ಕಾರಣದಿಂದಲೂ, ಕೆಲವು ಗಂಡಸರೊಂದಿಗೆ ಅವಳಿಗೆ ಸಂಬಂಧವಿತ್ತು. ಎಂದರೂ ಅದನ್ನೇ ಒಂದು ವೃತ್ತಿಯಾಗಿಟ್ಟುಕೊಳ್ಳುವ ತುಚ್ಛ ಮನಸ್ಸಿನವಳಲ್ಲ, ಎಂದು ಇವನಿಗೆ ತಿಳಿಯಿತು.

ಯಾವಾಗಲಾದರೂ ಇವನು ಅವಳನ್ನು ಹುಡುಕಿಕೊಂಡು ಹೋಗುತ್ತಿದ್ದ. ಇಬ್ಬರೂ ಮಾತನಾಡುತ್ತಾ ಕುಳಿತಿರುತ್ತಿದ್ದರು. ಇವನಿಗೆ ಅವಳು ಕೊಡುತ್ತಿದ್ದುದು ಕಾಫಿ ಮಾತ್ರ. ಸಿನಿಮಾ ಪತ್ರಿಕೆಗಳನ್ನೆಲ್ಲಾ ಕೊಂಡುಕೊಂಡಿರುತ್ತಿದ್ದಳು. ಕೈಯಲ್ಲಿ ಹಣವಿದ್ದಾಗ ಸಿನಿಮಾಕ್ಕೆ ಹೋಗುತ್ತಿದ್ದಳು. ಸಮಯಾವಕಾಶ ಸಿಕ್ಕಿದಾಗ ಸಿನಿಮಾ ಬಗ್ಗೆ ಅದಕ್ಕೆ ಸಂಬಂಧಪಟ್ಟವರ ಬಗ್ಗೆ ಬಹಳ ತಿಳಿದವಳಂತೆ ಸ್ವಾರಸ್ಯವಾಗಿ ಹರಟೆ ಹೊಡೆಯುತ್ತಿದ್ದಳು. ಸಿನಿಮಾ ಕಂಪೆನಿ ಯಲ್ಲಿ ಕೆಲಸ ಮಾಡುತ್ತಿದ್ದ ಅವಳ ತಮ್ಮ 'ನೀನು ಏನು ಬೇಕಾದರೂ ಮಾಡು... ಆದರೆ ಸಿನಿಮಾದಲ್ಲಿ ಛಾನ್ಸ್ ಕೊಡುತ್ತೇನೆಂದು ಯಾರಾದರೂ ಹೇಳಿದರೆ ಅದನ್ನು ನಂಬಿಕೊಂಡು ಹೋಗಿಬಿಡಬೇಡ... ನಾನು ಅಲ್ಲಿರುವುದರಿಂದ ನನ್ನ ಮಾನ ಕಾಪಾಡಿಕೊಳ್ಳಬೇಕು. ಆ ಕಡೆ ಸುಳಿಯಬೇಡ' ಎಂದು ಯಾವಾಗಲೋ ಹೇಳಿದ್ದುದನ್ನು ತಾನು ತಪ್ಪದೆ ಪಾಲಿಸು ತ್ತಿರುವುದಾಗಿ ಇವನೊಂದಿಗೆ ಅವಳು ಒಂದು ಬಾರಿ ತಿಳಿಸಿದ್ದಳು.

– ಅವಳೊಂದಿಗೆ ಇವನು ಎರಡು ತಿಂಗಳು ವಾಸವಾಗಿದ್ದ. ಅದನ್ನು ನೆನೆಸಿಕೊಂಡರೆ ಈಗಲೂ ಮನಸ್ಸಿಗೆ ಆನಂದವೆನಿಸುತ್ತಿತ್ತು.

'ಒಪ್ಪವಾಗಿ ಒದಗಿಬಂದ ಆ ಬಾಳನ್ನು ಬಿಟ್ಟು ಬೇರೆ ಬಾಳ್ವೆಗೆ ಆಸೆಪಟ್ಟ ತಪ್ಪಿಗೆ ದಂಡನೆಯೋ – ಈಗ ತಾನು ಅನುಭವಿಸುವ ವೇದನೆಗಳೂ ಅವಮಾನಗಳೂ' ಎಂದು

ಕೊಳ್ಳುತ್ತಾ ಬೈಸಿಕಲ್ ಮೇಲೆ ಮುಂದುವರಿದ. ಇನ್ನೊಂದು ಮೈಲಿ ದೂರ ಇರಬಹುದು.

ಒಮ್ಮೆ ಯಾವ ಕೆಲಸವೂ ಸಿಕ್ಕದ ಸಂದರ್ಭದಲ್ಲಿ, ನಂದಗೋಪಾಲ ಕೆಲಸ ಮಾಡುವ ಕಡೆಗೆ ಹುಡುಕಿ ಬಂದಳು ಗಿರಿಜಾ. ಆಫೀಸು ಮುಗಿಯುವ ವೇಳೆಯಾದ್ದರಿಂದ ಇವಳನ್ನು ಸ್ವಲ್ಪ ಕಾದಿರುವಂತೆ ಹೇಳಿ, ನಂತರ ಇವಳೊಂದಿಗೆ ಹೊರಗೆ ಬಂದ. ಇಬ್ಬರೂ ಹೋಟಲಿಗೆ ಹೋದರು. ಅವಳು ಬಹಳ ಆಯಾಸಗೊಂಡಿದ್ದಳು. ಇವನು ಎರಡು ಕಾಫಿಗೆ ಮಾತ್ರ ಆರ್ಡರ್ ಕೊಡುವುದರಲ್ಲಿದ್ದ. ಅದನ್ನು ಅರಿತು ಅವಳು ಹೇಳಿದಳು: "ನನಗೆ ಬರಿ ಕಾಫಿ ಮಾತ್ರ ಸಾಕಾಗುವುದಿಲ್ಲಾರಿ... ಏನಾದರೂ ತಿಂಡಿ ತಿನ್ನಬೇಕರಿ..."

ಅವಳ ಮನಸ್ಸಿನ ಶುಭ್ರತೆ ಇವನಲ್ಲಿ ಕರುಣೆಯುಂಟುಮಾಡಿತು. ಅಂದು ಅತ್ಯಂತ ಪ್ರೀತಿಯಿಂದ ಉಪಚರಿಸಿದ. ಹಗಲೆಲ್ಲಾ ಅವಳಿಗೆ ಊಟವಿರಲಿಲ್ಲವೆಂದೂ ಈಗ ಯಾವ ಕೆಲಸವೂ ಇಲ್ಲದೆ ಬಹಳ ಕಷ್ಟದಲ್ಲಿದ್ದಾಳೆಂದೂ ಅರಿತಾಗ ಅವಳಿಗಾಗಿ ವ್ಯಥೆಪಟ್ಟ. ಯಾವುದಾದರೂ ಕೆಲಸಕ್ಕೆ ಶಿಫಾರಸು ಮಾಡುವಂತೆ ಕೇಳಿದಳು. ಅದು ತನ್ನಿಂದ ಸಾಧ್ಯವೆಂಬ ನಂಬಿಕೆಯಿಲ್ಲದೆಯೇ ಅವನು ವಾಗ್ದಾನ ಮಾಡಿದ. ಸಂಜೆ ಅವಳೊಂದಿಗೆ ಅವನೂ ಅವಳ ಮನೆಯವರೆಗೆ ಹೋದ. ಹೋಗುವ ದಾರಿಯಲ್ಲಿ ಅವಳೊಂದಿಗೆ ತಾನೂ ಹೋಗಿ ಅಡುಗೆಗೆ ಬೇಕಾದ ಸಾಮಗ್ರಿಗಳನ್ನು ತೆಗೆದುಕೊಂಡು ಅದಕ್ಕೆ ತಾನೇ ಹಣಕೊಟ್ಟ. ಆ ರಾತ್ರಿ ತನ್ನೊಂದಿಗೆ ಊಟ ಮಾಡಬೇಕೆಂದು ಅವಳು ಆಹ್ವಾನವಿತ್ತಳು.

ಅವಳು ಅಡುಗೆ ಮಾಡುವ ಓರಣವನ್ನು ಪಕ್ಕದಲ್ಲೇ ಇದ್ದುಕೊಂಡು ಅವನು ನೋಡುತ್ತಿದ್ದ. ರಾತ್ರಿ ಅಲ್ಲಿ ಊಟ ಮಾಡಿದ. ಅವನಿಗೆ ತನ್ನ ತಾಯಿಯ ಪ್ರೀತಿ, ಕೈಯಾರೆ ಮಾಡಿದ ಅಡುಗೆಯ ರುಚಿಯೂ ನೆನಪಿಗೆ ಬಂತು. ತಾನು ಮಾಡಿದ ಅಡುಗೆ ಅವನಿಗೆ ರುಚಿಕರವಾಗಿದೆಯೋ ಇಲ್ಲವೋ ಎಂದುಕೊಳ್ಳುತ್ತಾ, ಭಕ್ತಿ, ಶ್ರದ್ಧೆಯಿಂದ ನಯವಿನಯವಾಗಿ ಕೇಳಿ ಕೇಳಿ ಬಡಿಸಿದಳು.

ಆ ರಾತ್ರಿ ಇವನು ಅಲ್ಲಿಯೇ ತಂಗಬೇಕಾಯಿತು. ಆ ರಾತ್ರಿ ಅವಳು ತನ್ನ ಬಗ್ಗೆ, ತಾಯಿ, ತಮ್ಮನ ಜೀವನ ಪರಿಸ್ಥಿತಿಗಳನ್ನೆಲ್ಲಾ ಇವನೊಂದಿಗೆ ವಿವರವಾಗಿ ಹೇಳಿದಳು. ಥಟ್ಟನೆ ಹೊಳೆದ ಒಂದು ಆಲೋಚನೆಯನ್ನು ಅವನ ಮುಂದಿಟ್ಟಳು. ಹೀಗೆಂದು ಹೇಳಿದಳು: "ನೀವು ಮೆಸ್ಸಿಗೆ ಕೊಡುವ ಹಣವನ್ನು ಇಲ್ಲಿ ಕೊಟ್ಟರೆ ನಿಮಗೂ ಅಡುಗೆ ಮಾಡಿ ಬಡಿಸಿ ನಾನೂ ಊಟ ಮಾಡುತ್ತೇನೆ... ಏನ್ರಿ–ನಿಮಗೆ ಇದು ಅನುಕೂಲವಾಗುತ್ತೇನ್ರೀ...?

ಅವನು ಬಹಳ ಹೊತ್ತು ಆಲೋಚಿಸಿದ ಮೇಲೆ ಒಪ್ಪಿಕೊಂಡ. ಇದುವರೆಗೆ ಅವರಲ್ಲಿ ಕೇವಲ ಮೈತ್ರಿಯಿದ್ದುದು ಅಂದು ಒಂದು ಹೊಸ ಅನುಭವವುಂಟಾಯಿತು. ಅದು ಜೀವನದಲ್ಲೇ ಅವನಿಗೆ ಹೊಸದು. ಅದೇ ರೀತಿ ಓರ್ವ ಹೊಸ ಮನುಷ್ಯನನ್ನು ಭೇಟಿ ಮಾಡಿದುದು ಅವಳಿಗೂ ಮೊದಲನೆಯ ಹೊಸ ಅನುಭವ.

'ತಾನು ಯಾವ ಕಾರಣದಿಂದಲೋ ದ್ವೇಷಿಸಿ ಭಯಪಟ್ಟು ತಳ್ಳಿಹಾಕಿದ್ದ ಗೃಹಸ್ಥ ಜೀವನ, ಒಂದು ಹೆಣ್ಣಿನೊಂದಿಗೆ ಸೇರಿ ಬಾಳುವುದು ಎಷ್ಟು ಆನಂದದಾಯಕ, ಸುರುಚಿ, ಅರ್ಥಪೂರ್ಣ ಅನುಭವ ಎಂಬುದನ್ನು ಅವನು ಅನುಭವಿಸಿ ಆನಂದಗೊಂಡ.

ಆ ಮನೆ, ಆ ಜೀವನ ಬಹಳ ಸರಳವಾದುದು. ಮಹಡಿಯ ಮೇಲೆ ಮಾಡು ಹಾಕಿದ ಒಂದೇ ಕೋಣೆಯಲ್ಲಿ ಅಡುಗೆ ಹಾಸುಗೆ ಎಲ್ಲಾ. ಸ್ನಾನ ಮಾಡುವುದಕ್ಕೆ ಕೆಳಗಡೆ ಬರಬೇಕು. ಮಟ್ಟಸವಿಲ್ಲದ ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗಬೇಕು. ಅವಳ ತಾಯಿಯೋ ತಮ್ಮನೋ – ಅವರು ಹಗಲು ವೇಳೆಯಲ್ಲಿ ಮಾತ್ರ ಬರುತ್ತಿದ್ದರು. – ಆಗ ಅಲ್ಲಿ ಬರುವ ಸಂದರ್ಭವೊದಗಿದರೆ ಆಗ ತಾನೆ ಬಂದಂತೆ ನಟಿಸಬೇಕು. ಇದೆಲ್ಲಾ ಅವನಿಗೆ ಬಹಳ ಇಷ್ಟವಾಗಿತ್ತು.

ಮದುವೆಯೇ ಬೇಡವೆಂದು ಭಯಗೊಂಡಿದ್ದಕ್ಕೆ ಕಾರಣಗಳೇನೆಂದು ಅವಳೊಂದಿಗೆ ಹೇಳಿದಾಗ ಅವಳು ನಕ್ಕಳು : "ನಿಮ್ಮ ತಂದೆ, ತಾಯಿಯನ್ನು ಹಿಂಸಿಸಿದರೆ ಭಯಪಟ್ಟು ಕೊಂಡಿರಾ? ಹೆಣ್ಣಿಗೆ ಈ ಭಯವುಂಟಾದರೆ ನ್ಯಾಯ ಎನ್ನಬಹುದು... ಗಂಡಸಿಗೆ ಇದರಲ್ಲಿ ಭಯವೆಂತಹದ್ರಿ? ಅವರಂತೆ ನೀವು ನಿಮ್ಮ ಹೆಂಡತಿಯನ್ನು ಹೊಡೆಯದಿದ್ದರಾಯಿತು ಬಿಡ್ರಿ..."

ಅವನು ಆಕೆಯ ಬಳಿ ಮದುವೆಯ ಬಗ್ಗೆಯೂ, ಊರಿನಿಂದ ತಾಯಿ ಬರೆಯುತ್ತಿದ್ದ ಕಾಗದಗಳ ಬಗ್ಗೆಯೂ ಹೇಳಿದ. ಇಬ್ಬರೂ ಒಂದಾಗಿ ಬಾಳುತ್ತಾ – ತಾನು ಇನ್ನೊಬ್ಬಳನ್ನು ಮದುವೆಯಾಗುವ ವಿಚಾರವಾಗಿ ಅವನು ಅವಳ ಬಳಿ ಮಾತನಾಡುವುದು, ಅದಕ್ಕೆ ತಕ್ಕಂತೆ ಅವಳೂ ಒತ್ತಾಯಪಡಿಸುವುದೂ ಆಭಾಸವಾಗಿಯೋ ಅರ್ಥಹೀನವಾದುದೋ ಆಗಿ ಇಬ್ಬರಿಗೂ ತೋರಲಿಲ್ಲ. ಅವಳು ಬೇರೆ ಬೇರೆಯಾಗಿರುತ್ತಿದ್ದ ವೇಳೆ ಅಂತರಾಳದಲ್ಲಿ ರಹಸ್ಯವಾಗಿ ಆ ಆಲೋಚನೆ ಬಂದರೂ ಅದು ಆಭಾಸ ವಿಚಾರವಲ್ಲವೆಂಬ ಕಾರಣದಿಂದ ಅವರು ಅದನ್ನು ಕುರಿತು ಸಾಧಾರಣವಾಗಿಯೂ ಬಹಳವಾಗಿಯೂ ಮಾತನಾಡುತ್ತಿದ್ದರು.

ಕಡೆಯಲ್ಲಿ ಒಂದು ದಿನ ನಂದಗೋಪಾಲ ತನ್ನ ತಾಯಿ ಒತ್ತಾಯ ಮಾಡುತ್ತಿದ್ದ, ತನ್ನ ಬಂಧುಗಳ ಪೈಕಿ ಬಂದ ಹೆಣ್ಣನ್ನು, ಹತ್ತನೆಯ ಕ್ಲಾಸಿನವರೆಗೆ ಓದಿದವಳು, ಸುಖವಾಗಿ ಬೆಳೆದವಳು, ಇದಕ್ಕೆ ಮುಂಚೆ ಇವನೇ ನೋಡಿ ಸುಂದರಿಯೇ ಎಂದು ಒಪ್ಪಿಕೊಂಡಿದ್ದ ವತ್ಸಲೆಯನ್ನು ಮದುವೆ ಮಾಡಿಕೊಳ್ಳಲು ಸಮ್ಮತಿ ಸೂಚಿಸಿ ಕಾಗದ ಬರೆದ. ಆ ವಿಚಾರವನ್ನು ಗಿರಿಜೆಯೊಂದಿಗೂ ಹೇಳಿದ.

ಮನಸ್ಸಿನೊಳಗೆ ಅವಳಿಗರಿಯದಂತೆಯೇ ನಿಗೂಢವಾದ ನಿರಾಶೆ ಮತ್ತು ಚಿಂತೆಗೆ ಒಳಗಾದರೂ ಮನತುಂಬಿದ ಸಂತೋಷದಿಂದ ನಗೆಯಿಂದ ಅವನನ್ನು ಹೊಗಳಿದಳು. 'ಹೊಸ ಮದುಮಗ, ಹೊಸ ಮದುಮಗ' ಎಂದು ಪರಿಹಾಸ ಮಾಡಿದಳು. ಏನೇನೋ ಬುದ್ಧಿವಾದ ಹೇಳಿದಳು. ಅವನಿಗಿಂತ ಅನುಭವ ಮತ್ತು ಬುದ್ಧಿವಂತಿಕೆ ಪಡೆದವಳಾಗಿ

ಅವನಿಗೆ ತುಂಬಾ ಕಲಿಸಿದಳು. ಆದಕ್ಕಾಗಿ ಅವನು ಅವಳಿಗೆ ಕೃತಜ್ಞತೆಯನ್ನು ಬಹುವಾಗಿ ಹೇಳಿಕೊಂಡ. ಹೆಣ್ಣು ಎಂದರೇನೇ ಭಯಪಟ್ಟು ಜಿಗುಪ್ಸೆಯಿಂದ ಓಡುತ್ತಿದ್ದ ತನ್ನನ್ನು ಮದುವೆಗೂ ಗೃಹಸ್ಥ ಜೀವನಕ್ಕೂ ಸಿದ್ಧಗೊಳಿಸಿದ ಜವಾಬ್ದಾರಿ ಅವಳದು ಎಂದು ಅವನು ನಂಬಿದ್ದು ಮಾತ್ರವಲ್ಲದೆ ಅವಳ ಬಳಿ ವಿಚಾರವನ್ನು ಹೇಳಿಯೂ ಹೇಳಿದ. ಆಗೆಲ್ಲಾ ಏನೆಂದು ಅರ್ಥವಾಗದ ಒಂದು ಭಾವದಿಂದ ತನಗೆ ತಾನೇ ಅವಳು ನಗುತ್ತಿದ್ದಳು.

ಅವಳೊಂದಿಗೆ ಸೇರಿ ಇವನಿದ್ದ ಆ ಎರಡು ತಿಂಗಳ ಕಾಲ, ಪಕ್ಕದಲ್ಲಿದ್ದ ಒಂದು ನರ್ಸರಿ ಶಾಲೆಯಲ್ಲಿ ಶಿಕ್ಷಣ ಪಡೆಯದ ಉಪಾಧ್ಯಾಯಿನಿಯಾಗಿ, ಒಂದು ಟೆಂಪೊರೆರಿ ಕೆಲಸವನ್ನು ಅವಳು ಸಂಪಾದಿಸಿಕೊಂಡಿದ್ದಳು. ಸಂಜೆಯ ವೇಳೆ ಹೊಲಿಗೆ ತರಗತಿಗೆ ಹೋಗುತ್ತಿದ್ದಳು. ಈಗಾಗಲೇ ಅವಳಿಗೆ ಹೊಲಿಗೆ ಕೆಲಸ ಸ್ವಲ್ಪ ಸ್ವಲ್ಪ ತಿಳಿದಿತ್ತಂತೆ.

ಅವನ ಮದುವೆಯ ತಾರೀಖು ಗೊತ್ತಾಗುವವರೆಗೆ ಅವನು ಅವಳೊಂದಿಗೇ ಇದ್ದ. ನಂತರ ಅವಳೇ ಹೇಳಿದಳು : "ನಾನು ಹೀಗೆ ಹೇಳುತ್ತೇನೆಂದು ತಪ್ಪಾಗಿ ಭಾವಿಸಬೇಡ್ರಿ. ಮದುವೆಗೆ ಇನ್ನೊಂದು ತಿಂಗಳು ಮಾತ್ರ ಉಳಿದಿದೆ... ನೀವು ನಿಮ್ಮ ಮೆಸ್ಸಿಗೇ ಹಿಂತಿರುಗಿ ಹೋಗ್ರಿ... ಆರೋಗ್ಯ ಚೆನ್ನಾಗಿ ನೋಡಿಕೊಳ್ರಿ... ಚೆನ್ನಾಗಿ ಊಟ ಮಾಡ್ರಿ... ಮದುವೆಯ ನಂತರ ಸ್ನೇಹಿತರಂತೆ ಬನ್ರಿ... ನನಗೆ ಸಂತೋಷವಾಗುತ್ತೇರಿ."

– ಆಗ ಅವಳ ಕಣ್ಣುಗಳಲ್ಲಿ ನೀರು ಬಂದುದನ್ನು ನೆನೆಸಿಕೊಂಡು ಈಗಲೂ ನೊಂದು ಕೊಂಡ ನಂದಗೋಪಾಲ ಅವಳ ಮನೆಯ ಬಾಗಿಲಲ್ಲಿ ಬೈಸಿಕಲ್ ನಿಲ್ಲಿಸಿ ಬೀಗ ಹಾಕಿ ಮಹಡಿಯ ಕಡೆ ನೋಡಿ. ಮಹಡಿಯ ಮೇಲೆ ಇದ್ದ ಗರಿಕಟ್ಟಿದ ಮನೆಯ ಸಣ್ಣ ರಂಧ್ರ ಗಳಿಂದ ಒಳಗೆ ದೀಪದ ಬೆಳಕು ಕಂಡಿತು. ಬೆಂಕಿ ಕಡ್ಡಿಯನ್ನು ಗೀಚಿ ಗಡಿಯಾರದಲ್ಲಿ ಗಂಟೆ ನೋಡಿದ – ಹನ್ನೆರಡು.

ಥಟ್ಟನೆ ತನ್ನನ್ನು ನೋಡಿದಾಗ ಅವಳಿಗೆ ಉಂಟಾಗಬಹುದಾದ ಆಶ್ಚರ್ಯವನ್ನು ಕಲ್ಪಿಸಿಕೊಂಡು, ಅವಳನ್ನು ನೋಡುವ ಕಾತರದಿಂದ ಹೃದಯದ ಬಡಿತ ವೇಗಗೊಳ್ಳು ತ್ತಿದ್ದಂತೆ ಅವನು ಮಹಡಿಯ ಮೆಟ್ಟಲು ಹತ್ತಿದ.

ಮೇಲುಗಡೆಯ ಮೆಟ್ಟಲಿನಿಂದ ಅವನ ತಲೆ ಕಂಡಾಗ ಹೆಜ್ಜೆಯ ಸಪ್ಪಳ ಕೇಳಿ ಹೊಲಿಗೆ ಯಂತ್ರದ ಮುಂದೆ ಸ್ಟೂಲ್ ಮೇಲೆ ಕುಳಿತು, ಯಾವುದನ್ನೋ ಸೂಜಿಯಿಂದ ಬಿಚ್ಚು ತ್ತಿದ್ದ ಗಿರಿಜ "ಯಾರದು?" ಎಂದು ಎಚ್ಚರಿಕೆಯ ಧ್ವನಿಯಿಂದ ಎದ್ದಳು.

"ನಾನು" – ಎಂದು ಇವನು ಹೆಸರು ಹೇಳುವ ಮೊದಲೇ ಅವಳು ತನಗುಂಟಾದ ಆನಂದವನ್ನು ತಡೆಯಲಾಗದೆ "ಹೋ ನೀವೇನು? ಬನ್ರಿ" ಎಂದು ಬರಮಾಡಿಕೊಂಡಳು. ಅವನನ್ನು ಅಪ್ಪಿಕೊಳ್ಳಲು ಕಾತರಗೊಂಡ ಕೈಗಳ ಬೆರಳುಗಳನ್ನು ತಿರುಗಿಸಿ ತಿರುಗಿಸಿ ನೆಟಿಗೆ ತೆಗೆದು "ಏನು ಇಷ್ಟು ಹೊತ್ತಿನಲ್ಲಿ...? ಕುಳಿತುಕೊಳ್ರಿ... ಊಟವಾಯಿತೇನ್ರಿ?" ಎಂದು ಪ್ರಶ್ನೆಗಳನ್ನು ಕೇಳುತ್ತಲೇ ಕುಳಿತುಕೊಳ್ಳಲು ಹೇಳಿದಳು.

"ಥಟ್ಟನೆ ನಿನ್ನನ್ನು ನೋಡಬೇಕೆನಿಸಿತು... ಬಂದುಬಿಟ್ಟೆ" – ಎಂದ. ಅವಳು ಕಳವಳ ಗೊಂಡಳು. ಅದು ಅವನಿಗೆ ತಿಳಿಯದ ರೀತಿ ಸಂಭಾಳಿಸಿಕೊಂಡು ನಕ್ಕಳು. "ಏನಾದರೂ ಕುಡಿಯಿರಿ" ಎಂದು ಟಂಬ್ಲರಿನಲ್ಲಿ ಕುಡಿಯಲು ನೀರು ತಂದು ಕೊಟ್ಟಳು.

ಇಬ್ಬರಿಗೂ ದಿಗ್ಭ್ರಮೆ; ಹೃದಯದ ಬಡಿದಾಟ ಸಾಧಾರಣ ಸ್ಥಿತಿಗೆ ಬರಲು ಸ್ವಲ್ಪ ಹೊತ್ತು ಹಿಡಿಸಿತು. ಅವನು ಆ ಹೊಸ ಹೊಲಿಗೆ ಯಂತ್ರವನ್ನು ನೋಡಿ ಅದರ ಬಗ್ಗೆ ವಿಚಾರಿಸಿದ. ಅವಳು ತಾನು ಟೈಲರಿಂಗ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದುದನ್ನೂ, ಇದನ್ನು ಇನ್‌ಸ್ಟಾಲ್‌ಮೆಂಟ್‌ನಲ್ಲಿ ತೆಗೆದು ಚೆನ್ನಾಗಿಯೇ ಸಂಪಾದಿಸುತ್ತಿರುವ ವಿಚಾರವನ್ನೂ, ಈ ತಿಂಗಳು ಮೂರು ಸವರನ್ನಿಗೆ ಒಂದು ಚೈನು ಮಾಡಿಸಿ ಹಾಕಿಕೊಂಡಿದ್ದುದನ್ನೂ ವಿವರಿಸಿ "ಸ್ಕೂಲ್ ಕೆಲಸವನ್ನು ಬಿಟ್ಟಿಲ್ಲಾರಿ" ಎಂದು ಹೇಳಿ ತನ್ನ ಅನುಕೂಲ ಪರಿಸ್ಥಿತಿ ತಿಳಿಸಿ ಅವನನ್ನು ಸಂತೋಷಗೊಳಿಸಿದಳು. ಅವನ ಮನಸ್ಸಿಗೆ ಅವಳು ಹೇಳಿದ ವಿಚಾರಗಳು ಬಹಳ ಹಿತವಾಗಿದ್ದುವು. ಅವನಿಗೆ ಬಹಳ ಸಂತೋಷವಾಯಿತು.

"ನೀವು ಹೇಗಿದ್ದೀರ್ರಿ...? ನಿಮ್ಮ ವೈಫ್ ಚೆನ್ನಾಗಿದಾರೇನ್ರಿ?" ಎಂದು ಕುತೂಹಲದಿಂದ ಅವಳು ವಿಚಾರಿಸಿದಾಗ ಅವನು ನಿಟ್ಟುಸಿರುಬಿಟ್ಟು ಅವಳನ್ನು ನೋಡಿ ವಿಷಾದದಿಂದ ನಕ್ಕ.

ಅವಳ ಹೊಲಿಗೆ ಯಂತ್ರದ ಮೇಲೆ ರಾಶಿಯಾಗಿ ಬಿದ್ದಿದ್ದ ಹೊಲಿದ, ಹೊಲಿಯಬೇಕಾದ, ಕಟ್ ಮಾಡಿದ, ಕಟ್ ಮಾಡಬೇಕಾದ ಹೊಸ ಬಟ್ಟೆಗಳನ್ನೆಲ್ಲಾ ಎತ್ತಿ ಒಂದೊಂದಾಗಿ ಪೆಟ್ಟಿಗೆಯೊಂದರಲ್ಲಿ ಮಡಿಸಿಟ್ಟು, ಇವನೊಂದಿಗೆ ಮಾತನಾಡಲೋಸುಗ ಮಾಡುತ್ತಿದ್ದ ಕೆಲಸ ನಿಲ್ಲಿಸಿದಳು. ಅವನೇನೋ ವ್ಯಥಿತನಾಗಿದ್ದಾನೆಂದು ಅವಳಿಗೆ ತಿಳಿಯಿತು. ಅದಕ್ಕಾಗಿಯೇ ಅವನಿಗೆ ಸಂತೋಷವಾಗುವ ವಿಚಾರಗಳನ್ನು ಮುಂಚಿತವಾಗಿ ಅವನೊಂದಿಗೆ ಹೇಳಿದಳು. ಇದನ್ನು ಅವಳು ತನ್ನ ಬುದ್ಧಿವಂತಿಕೆಯಿಂದ ಮಾಡಲಿಲ್ಲ, ಸದ್ಭಾವನೆಯಿಂದ ಮಾಡಿದುದು. ಏನಾದರಾಗಲಿ, ಈಗ ಅವನ ವ್ಯಥೆಯೇನೆಂಬುದನ್ನು ಅರಿತು ತಾನೂ ಚಿಂತೆಗೆ ಒಳಗಾದಳು.

ಅವನೊಂದು ಸಿಗರೇಟು ಹಚ್ಚಿ ದೀರ್ಘವಾಗಿ ಹೊಗೆಯೆಳೆದುಕೊಂಡು ಮಾಡನ್ನು ನೋಡುತ್ತಾ ಊದಿ ಹೊಗೆಬಿಟ್ಟ. ಸಿಗರೇಟಿನ ಬೂದಿಯನ್ನು ಬಹಳ ಗಮನವಾಗಿ ಬೆರಳುಗಳಿಂದ ಉದುರಿಸುತ್ತಾ ಅವಳ ಮುಖವನ್ನು ನೋಡದೆ ವ್ಯಥೆ ತುಂಬಿದ ಕಂಠದಿಂದ ಹೇಳಿದ : "ನಾನು ನಿನಗೆ ಮಾಡಿದ ಅನ್ಯಾಯಕ್ಕೆ ಈಗ ಫಲ ಅನುಭವಿಸುತ್ತಿದ್ದೇನೆ. ನಾನು ನಿನ್ನನ್ನೇ ಮದುವೆಯಾಗಬೇಕಿತ್ತು. ಓಹ್ ಈಗ ಮಾಡುವುದೇನು?" ಎಂದು ಪ್ರಲಾಪಿಸಿದ. ಗಿರಿಜಾ ಅವನ ಬಳಿಯೇ ಬಂದು ಕುಳಿತಳು.

ಮದುವೆ ಮುಗಿದು ತನ್ನೊಂದಿಗೆ ಹೊರಟು ಬಂದಾಗ ತನ್ನ ಹೆಂಡತಿ ಆರಂಭಿಸಿದ ಅಳುವನ್ನು ಇನ್ನೂ ನಿಲ್ಲಿಸಲಿಲ್ಲ ಎಂದೂ, ಅವಳಿಗೆ ತನ್ನೊಂದಿಗೆ ಬಾಳುವುದರಲ್ಲಿ

ಸಂತೋಷವಿಲ್ಲವೆಂದೂ, ತನ್ನನ್ನು ಅವಳು ಅಪಮಾನಗೊಳಿಸುತ್ತಾಳೆಂದೂ, ಈ ದಿನ ಕೂಡ ಅವಳು ಹಣೆ ಚಚ್ಚಿಕೊಂಡಳೆಂದೂ – ಅವನು ಬಾಯಿಗೆ ಬಿಡುವಿಲ್ಲದೆ ವತ್ಸಲೆಯ ಬಗ್ಗೆ ಮಾತನಾಡಿ ತನ್ನ ವ್ಯಥೆಯನ್ನು ಹೆಚ್ಚಿಸಿಕೊಂಡೇ ಮುಂದುವರಿದ.

ಹೊಲಿಗೆ ಯಂತ್ರದ ಪಕ್ಕದಿಂದ ಎಣ್ಣೆ ಹಾಕುವ ಆಯಿಲ್ ಕ್ಯಾನ್ ಎತ್ತಿ ಕಾಲಿನ ಹೆಬ್ಬೆರಳಿಗೂ ಎರಡನೆಯ ಬೆರಳಿಗೂ ಮಧ್ಯೆ ಇದ್ದ ಗಾಯಕ್ಕೆ ಎಣ್ಣೆ ಹಾಕಿಕೊಂಡೇ ಅವನ ಪ್ರಲಾಪವನ್ನೆಲ್ಲಾ ಮೌನವಾಗಿ ಕೇಳಿಸಿಕೊಳ್ಳುತ್ತಿದ್ದಳು ಗಿರಿಜಾ.

"ಪಾಪಾರೀ – ಅವಳು ಅರಿಯದ ಹುಡುಗಿ ತಾನೇರಿ?" ಎಂದು ಅವಳು ಹೇಳಿದು ದನ್ನು ಕೇಳಿ ಏನೂ ತಿಳಿಯದವನಾಗಿ ತಲೆಯೆತ್ತಿ ಅವಳನ್ನು ನೋಡಿದ.

"ನಿಮ್ಮನ್ನು ಮದುವೆ ಮಾಡಿಕೊಂಡ ಮಾತ್ರಕ್ಕೆ ಅವರು ನಿಮ್ಮ ಎತ್ತರಕ್ಕೆ ಬಂದು ಬಿಡುತ್ತಾರೇನ್ರಿ...? ತಂದೆ ತಾಯಿಗೆ ಬಹಳ ಮುದ್ದಿನ ಮಗಳೆಂದು ನೀವೇ ಹೇಳಿದ ರಲ್ರೀ? ಎಲ್ಲರನ್ನೂ ಬಿಟ್ಟು ಬೇರೆ ಒಂದೂರಿನಲ್ಲಿ ಒಬ್ಬಳೇ ಬಂದು ನಿಮ್ಮೊಂದಿಗೆ ಬಾಳು ವಾಗ ಆ ಹುಡುಗಿ ಮನಸ್ಸು ಹೇಗಿರುತ್ರೀ? ಅದನ್ನು ಅರ್ಥಮಾಡಿಕೊಂಡು ನೀವೇ ಹೊಂದಿಕೊಂಡು ನಡೆಯಬೇಕು. ನೀವು ಫ್ರೆಂಡ್ಸ್ ಅಲ್ಲವೇನ್ರಿ? ಗಂಡಸು ಎಂಬ ವ್ಯಕ್ತಿ ಅವರಿಗೆ ಹೊಸದು. ಭಯವಾಗಿರುತ್ತೇರಿ, ಜಿಗುಪ್ಸೆಯೂ ಇರುತ್ತೇರಿ... ನಾನು ನಿಮ್ಮ ಬಳಿ ಚೆನ್ನಾಗಿ ಇದ್ದೆ ಎಂದರೆ ಅದಕ್ಕೆ ಕಾರಣ ಏನ್ರೀ? ನಾನು ಎಕ್ಸ್‌ಪೀರಿಯನ್ಸ್‌ಡ್ ಅಲ್ಲವೇನ್ರೀ...? ವೈಫ್ ಆಗಿರುವುದಕ್ಕೆ ಫ್ರೆಂಡ್ಸ್ ಹ್ಯಾಂಡ್ ಯಾರ್ರೀ ಕೇಳುತ್ತಾರೆ? ಈಗ ಹೇಳುತ್ತೀರಲ್ಲ – ನನ್ನನ್ನೇ ಮದುವೆ ಮಾಡಿಕೊಳ್ಳಬಹುದಾಗಿತ್ತು ಅಂತ – ಆಗ ಯಾಕೆ ಅದು ಹೊಳೆಯಲಿಲ್ಲಾರಿ? ನಾನು ಈಗಾಗಲೇ ಫ್ರೆಂಡ್ಸ್ ಎಂಬ ಡಿಸ್‌ಕ್ವಾಲಿಫಿ ಕೇಷನ್ ತಾನೇರಿ ಅದಕ್ಕೆ ಕಾರಣ! ಆದ್ದರಿಂದ ನಿಮ್ಮ! ವೈಫ್‌ಗಿಂತ ನೀವು ಅನುಭವಸ್ಥ ರೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ನಾನು ನಿಮ್ಮ ಹತ್ತಿರ ಇದ್ದಂತೆ ನೀವು ಅವಳ ಬಳಿ ನಡೆದುಕೊಳ್ಳಬೇಕು. ಹಾಗೆಯೇ ಕ್ರಮೇಣ ಎಲ್ಲಾ ಸರಿಹೋಗುತ್ತೇರಿ..." ಎಂದು ಅವಳು ಎಲ್ಲವನ್ನೂ ಹಗುರವಾಗಿ ಎಣಿಸಿ ಮಾತಾಡಿದುದನ್ನು ಕೇಳಿ ಅವನು ಆಶ್ಚರ್ಯ ಪಟ್ಟ. 'ಇವಳ ಬಳಿ ಬರಬೇಕೆಂದು ನಾನು ಅಂದುಕೊಂಡುದು ಎಷ್ಟು ಒಳ್ಳೆಯದಾಯಿತು' ಎಂದು ನೆನಪಿಸಿಕೊಂಡ.

ಅವಳು ಇಷ್ಟು ಹೊತ್ತು ಮಾತನಾಡುತ್ತಿದ್ದುದರಿಂದ ನಿಲ್ಲಿಸಿದ್ದ ಕಾಲು ಬೆರಳುಗಳ ಮಧ್ಯೆ ಎಣ್ಣೆ ಹಾಕಿಕೊಳ್ಳುವ ಕೆಲಸದಲ್ಲಿ ಮತ್ತೆ ತೊಡಗಿದಳು.

"ಏನು ಕಾಲಿನಲ್ಲಿ?" ಎಂದು ಅವಳ ಬಳಿಗೆ ಸರಿದು ಬಾಗಿ ನೋಡಿದ ನಂದಗೋಪಾಲ.

"ಹೋದ ವಾರ ಹೊಸ ಚಪ್ಪಲಿ ಕೊಡುಕೊಂಡೆ. ಕಚ್ಚಿದೇರಿ... ಹೊಲಿಯುವಾಗ ಬೆರಳುಗಳು ಆಡುವುದರಿಂದ ಬೇಗನೆ ವಾಸಿಯಾಗುತ್ತಿಲ್ಲ" ಎಂದು ಹೇಳುತ್ತಿದ್ದವಳು, ಅವನ ಮುಖವನ್ನು ತಲೆಯೆತ್ತಿ ನೋಡಿ ನಕ್ಕಳು : "ನೋಡಿದಿರೇನ್ರಿ, ಚಪ್ಪಲಿ ಕೂಡ,

ಹೊಸದಾಗಿದ್ದರೆ ಕಚ್ಚುತ್ತೇರಿ. ಅದಕ್ಕಾಗಿ ಹಳೆಯ ಚಪ್ಪಲಿಗಳನ್ನು ಯಾರಾದರೂ ಕೊಂಡುಕೊಳ್ಳುತ್ತಾರೇನ್ರಿ...?"

ಅವಳು ನಗುತ್ತಾ ಹೇಳಿದಳು. ಅವನು ಅವಳ ಕರಗಳನ್ನು ಹಿಡಿದು ಅತ್ತುಬಿಟ್ಟ.

# 15. ನಿಕ್ಕಿ

ಮೀನು ಹಿಡಿಯುವವರು ವಾಸಿಸುವ ಪ್ರದೇಶ. ಎರಡು ದಿನಗಳಿಂದ ಮಳೆ ಬೇರೆ. ಎಲ್ಲೆಲ್ಲೂ ಕೊಚ್ಚೆ, ತೇವ.

ಚಿಕ್ಕದಾದ ಗುಡಿಸಲೊಂದರ ಹಿಂಭಾಗ. ಎರಡು ಗುಡಿಸಲುಗಳ ಮಧ್ಯೆ ಇದ್ದ ಜಾಗದಲ್ಲಿ ಅವುಗಳ ಬೊಂಬು ಗರಿಗಳು ಅಲ್ಲಿ ಸೇರಿ ಸಣ್ಣ ಮಾಡವಾಗಿತ್ತು. ಒಂದು ಸಣ್ಣ ದಿಬ್ಬ ತೇವವಾಗಿರಲಿಲ್ಲ. ಅದರ ಮಧ್ಯೆ ಮಾಡಿದ ಗುಳಿಯಲ್ಲಿ ಎರಡು ದಿನಗಳ ಕಾಲ ಐದು ನಾಯಿಮರಿಗಳನ್ನು ಹೆತ್ತ ಬೀದಿನಾಯಿ ಹೊಟ್ಟೆಯನ್ನು ನೆಲದ ಮೇಲೆ ಉಜ್ಜಿಕೊಂಡು ತಾಯ್ತನದ ಹೆಮ್ಮೆಯಿಂದ ತನ್ನ ಮರಿಗಳಿಗೆ ಕಾವಲಾಗಿ ಮಲಗಿ ಎದ್ದು ನಡೆದು ಅಲೆದಾಡುತ್ತಿತ್ತು. ಬೆಳಿಗ್ಗೆಯಿಂದ ಕಾಣಿಸಲಿಲ್ಲ!

ಇನ್ನುಮೇಲೆ ಆ ನಾಯಿ ಬರುವುದಿಲ್ಲ ಎಂಬ ವರ್ತಮಾನವನ್ನು ಆ ಪ್ರದೇಶದ ಬಾಲಕನೊಬ್ಬ ಎಲ್ಲರಿಗೂ ತಿಳಿಸಿದ:

"ಐಸ್ ಹೌಸ್ ಹತ್ತಿರ ಬಸ್ಸಿಗೆ ಸಿಕ್ಕಿ ಆ ನಾಯಿ ಗತಿ ಮುಗೀತು"

ಈ ಪ್ರಕಟನೆಯ ನಂತರ ಆ ಪ್ರದೇಶದ ಬಾಲಕರು ಮರಿಗಳನ್ನು ಹುಡುಕಿಕೊಂಡು ಧೈರ್ಯವಾಗಿ ಬಂದರು. ಒಬ್ಬೊಬ್ಬರು ಒಂದೊಂದು ಮರಿಯನ್ನು ಎತ್ತಿಕೊಂಡ ಮೇಲೆ ಒಂದನ್ನು ಮಾತ್ರ ಎಲ್ಲರೂ ನಿರಾಧಾರವಾಗಿ ಬಿಟ್ಟು ಹೊರಟು ಹೋದರು. ಅದರ ಬಣ್ಣ ಕಪ್ಪು. ಎರಡು ಕಿವಿಗಳ ಮೇಲೂ, ಬಾಲದಲ್ಲೂ, ಬಿಳಿಯ ಮಚ್ಚೆಗಳು.

"ಛೀ ಅದು ಹೆಣ್ಣು ನಾಯೀನೋ" ಎಂದು ಅವರು ಅದನ್ನು ಜಾತಿ ಭ್ರಷ್ಟಮಾಡಿದಂತೆ ಬಿಟ್ಟುಹೋದರು.

ಆ ಹೆಣ್ಣು ನಾಯಿಮರಿ ಹೊಸ ತರಹ – ದಿನವೆಲ್ಲಾ ಸಿಡುಕಾಗಿದ್ದು ಮಣ್ಣಿನಲ್ಲೂ ಕೆಸರಿನಲ್ಲೂ ತೂರಾಡುತ್ತಿತ್ತು. ಕಣ್ಣನ್ನು ತೆರೆದು ಮೊದಲನೆಯ ಬಾರಿಗೆ ಜಗತ್ತನ್ನು ನೋಡಿತು. ಹಸಿವಿನಿಂದ ಮುಖ ಕಿವಿಚಿಕೊಂಡು ರೋದಿಸಿತು. 'ನಾನು, ಗಮನಿಸುವವರು ಯಾರೂ ಇಲ್ಲದ ಅನಾಥ ನಾಯಿ' ಎಂದು ಅರ್ಥಮಾಡಿಕೊಂಡು ಬಿಟ್ಟಂತೆ, ನಡೆಯಲು ಕೂಡ ಪಳಗದ ಆ ನಾಯಿಮರಿ ಕಾಲುಗಳನ್ನು ನೆಲದ ಮೇಲೆ ಎಳೆದು ಎಳೆದು ಓಡಾಡಿ ತನ್ನ ಜೀವನಯಾತ್ರೆಯನ್ನು ಪ್ರಾರಂಭಿಸಿತು.

ಆ ಎರಡು ಚಿಕ್ಕ ಗುಡಿಸಲುಗಳ ಮಧ್ಯೆಯಿಂದ ಹೊರಗೆ ಬಂದು ತೇವ, ಕೆಸರಿನಿಂದ ಕೂಡಿದ ಪ್ರದೇಶದ ಬೀದಿಯಲ್ಲಿ ಅದು ಹೊರಳಿ ನಡೆದ ದೃಶ್ಯವನ್ನು ಮಕ್ಕಳು ನೋಡಿ ನಕ್ಕರು.

ಅದು ತನಗೆ ಒಬ್ಬ ಯಜಮಾನನನ್ನು ಅವರ ಹತ್ತಿರ ಯಾಚಿಸುವಂತೆ ಪ್ರಬಲವಾಗಿ ರೋದಿಸಿತು. ಅವರೂ ಅದಕ್ಕಾಗಿ ಪರಿತಾಪಪಟ್ಟರು. ಒಂದು ಗುಡಿಸಲಿನ ಜಗುಲಿಯಲ್ಲಿ ಅದಕ್ಕೆ ಆಶ್ರಯವಿತ್ತು ಗಂಜಿ ನೀರು, ಅನ್ನ, ಟೀ ಎಂದು ಕ್ರಮೇಣವಾಗಿ ತಮ್ಮ ದಾರಿದ್ರ್ಯ ಪರಿಸ್ಥಿತಿಯನ್ನು ಅದಕ್ಕೆ ಪರಿಚಯ ಮಾಡಿಕೊಟ್ಟರು.

ಎರಡು ದಿನಗಳ ನಂತರ ಮಕ್ಕಳಿಗೆ ಈ ನಾಯಿಯೊಡನಾಟ ಬೇಸರ ತಂದಿತು. ಆ ಗುಡಿಸಲಿನ ಒಡತಿ ಈ ನಾಯಿಯನ್ನು ಕಂಡು ಅದರ ಮೈಮೇಲೆ ಮುಚ್ಚಿದ್ದ ಕೆಸರು ಕೊಳೆ ಅದಕ್ಕೇ ಸೇರಿದುದೆಂದೂ, ಅದು ಆ ಜಗುಲಿಯ ಮೇಲಿನ ಮೂಲೆಯನ್ನು ಅಶುದ್ಧ ಮಾಡುತ್ತಿದೆಯೆಂದೂ, ಕೋಪಿಸಿಕೊಂಡು ಪೊರಕೆಯನ್ನೆತ್ತಿಕೊಂಡು ಕಸ ಗುಡಿಸಲು ಬಂದವಳು ಆ ನಾಯಿಯನ್ನೂ ಸೇರಿಸಿ ಬೀದಿಗೆ ತಳ್ಳಿದಳು. ಅದು ಕೂಗಿ ಅರಚಿಕೊಂಡೇ ತಲೆಕೆಳಗಾಗಿ ಜಗುಲಿಯಿಂದ ಬೀದಿಗೆ ಬಿತ್ತು.

ಬಿದ್ದ ವೇಗಕ್ಕೆ ಅದು ಚೆನ್ನಾಗಿ ಏಟು ತಿಂದಿತು. ನಾಯಿ ಮರಿ ದೊಡ್ಡ ಧ್ವನಿಯಿಂದ ಅರಚುತ್ತಾ, ಹೊರಳಾಡಿ ಕುಂಟುಕಾಲು ಎಳೆಯುತ್ತಾ ತನ್ನ ಪ್ರಯಾಣ ಪ್ರಾರಂಭಿಸಿತು.

ಸ್ವಲ್ಪ ದೂರ ನಡೆದಮೇಲೆ, ಅರಚುವುದನ್ನು ನಿಲ್ಲಿಸಿ ವಿಧಿಯನ್ನು ಹಳಿಯುವಂತೆ ಮೌನವಾಗಿ – ಸ್ವಲ್ಪ ಸರಿಯಾಗಿಯೇ ನಡೆಯಲಾರಂಭಿಸಿತು. ಭಯಪಟ್ಟುಕೊಂಡೇ ಗುಡಿಸಲುಗಳ ಮಣ್ಣು ಗೋಡೆಯ ಆಧಾರದಿಂದ ನಡೆದು ಆ ಪ್ರದೇಶದ ಎಲ್ಲೆಗೂ ಮೆಯಿನ್ ರಸ್ತೆಗೂ ಮಧ್ಯೆ ಇದ್ದ ದುರ್ವಾಸನೆ ಬೀರುತ್ತಿದ್ದ ಚರಂಡಿಯ ಮೇಲ್ಕಟ್ಟಿನ ಬಳಿಗೆ ಬಂದಿತು. ಆ ನಂತರ ದಿಕ್ಕು ತೋಚದೆ ಅರ್ಧ ದಿನ ಯೋಚಿಸುತ್ತಾ ಅಲ್ಲಿಯೇ ಬಿದ್ದುಕೊಂಡಿದ್ದು ನಿದ್ರೆ ಮಾಡಿ ಎಚ್ಚರಗೊಂಡು, ಕೂಗಿ ಕೂಗಿ ಕಂಠವೇ ಇಳಿದು ಹೋದಮೇಲೆ ಧೈರ್ಯವಾಗಿ ಮೇಲ್ಕಟ್ಟವನ್ನು ದಾಟಿ ಮೆಯಿನ್ ರಸ್ತೆಗೆ ಬಂದಿತು.

ದೊಡ್ಡ ಕಟ್ಟಡಗಳು ತುಂಬಿದ ರಸ್ತೆಗಳು. ರಾಕ್ಷಸತನದಿಂದ ಬಸ್‌ಗಳೂ ಲಾರಿಗಳೂ ಸಂಚರಿಸುತ್ತಿದ್ದುವು. ಜನಸಂದಣಿ ದಟ್ಟವಾಗಿಯೇ ಇತ್ತು. ಆ ಚಿಕ್ಕ ಹೆಣ್ಣುನಾಯಿ ಮರಿ ಧೈರ್ಯವಾಗಿ ರಸ್ತೆಯ ಬದಿಯಲ್ಲೇ ನಡೆಯಿತು. ಇಷ್ಟು ವಿಶಾಲ ಜಗತ್ತಿನಲ್ಲಿ ಮಾನವ ಎಂತೆಂತಹ ಸಾಹಸಗಳನ್ನು ಎಷ್ಟು ಉತ್ಸಾಹದಿಂದ ಮಾಡಿ ತೋರಿಸುತ್ತಾನೆ! ಈ ನಾಯಿಮರಿ ಈ ರಸ್ತೆಯಲ್ಲಿ ನಡೆಯಬಾರದೇನು? ನಡೆಯಿತು.

ಮಹಡಿ ಬಸ್ ಒಂದು ಬಂದಿತು. ಅದರ ಡ್ರೈವರ್ ಒಳ್ಳೆಯವನು. ಈ ಚಿಕ್ಕ ನಾಯಿ ಮರಿಗಾಗಿ ಅಷ್ಟು ದೊಡ್ಡ ಬಸ್ಸನ್ನು ಕೆಲವು ಕ್ಷಣ ನಿಲ್ಲಿಸಿದ. ಅದು ಪಕ್ಕಕ್ಕೆ ಸರಿದು ನಡೆದು ಹೋದನಂತರ, 'ಎಷ್ಟು ಚಿಕ್ಕ ಮರಿ ಏಟು ತಿಂದು ಸತ್ತು ಹೋದೀತು. ನಮಗೇಕೆ ಆ ಪಾಪ' ಎಂದು ಅದರ ಬಗ್ಗೆ ವ್ಯಸನಪಟ್ಟವನಂತೆ ಅದನ್ನು ನೋಡಿಕೊಂಡೇ ಆ ದೊಡ್ಡ ಬಸ್ಸನ್ನು ತಿರುಗಿಸಿದ.

ನಾಯಿಮರಿ ರಸ್ತೆ ದಾಟಿತು. ನಂತರ ಎಲ್ಲಿಗೆ ಹೋಗುವುದು? ಎಲ್ಲಿಗಾದರೂ ಹೋಗ ಬೇಕಾದುದೇ ತಾನೆ? ಹೋಯಿತು.

ಮೆಯಿನ್ ರಸ್ತೆ ದಾಟಿ – ಕೊಳಚಿ ಪ್ರದೇಶದಂತಲ್ಲದ, ಆದರೆ ಅದರ ಬೀದಿಯಂತೆಯೇ ಇದ್ದ ಒಂದು ಸಣ್ಣ ಬೀದಿಯಲ್ಲಿ ನಡೆಯಿತು. ಅದರ ಎದುರು ಒಂದು ಎಲೆ ಬಂದು ಬಿತ್ತು. ಅದು ಬಿದ್ದೊಡನೆ ಅದರೆಡೆಗೆ ಧಾವಿಸಲು ಬೇಕಾದ ಅನುಭವವೋ ತಿಳಿವಳಿಕೆಯೋ ಅದಕ್ಕೆ ಇನ್ನೂ ಬಂದಿರಲಿಲ್ಲ. ಅದು ಬಿದ್ದ ಶಬ್ದಕ್ಕೆ ಭಯಗೊಂಡು ಹಿಂಜರಿದು, ಬದುಕಿತು.

ಒಂದು ದೊಡ್ಡ ನಾಯಿ ಆ ಎಲೆಯನ್ನು ಕುರಿತು ನಾಲ್ಕು ಕಾಲುಗಳನ್ನೂ ಹಾರಿಸಿ ಓಡಿ ಬರುತ್ತಿತ್ತು. ಈ ನಾಯಿಮರಿಗೆ ಅದು ತನ್ನ ಜಾತಿಗೇ ಸೇರಿದುದು ಎಂದು ತಿಳಿಯದ ರೀತಿಯಲ್ಲಿ ದೊಡ್ಡದಾಗಿಯೂ ಒರಟಾಗಿಯೂ ಇತ್ತು. ಇದು ಹಿಂತೆಗೆದು ಅದನ್ನು ಭಯದಿಂದ ನೋಡಿತು. ಆ ಎಲೆಯಲ್ಲಿ ಇದ್ದುದು ತಿನ್ನಲರ್ಹವಾದುದು ಎಂಬುದನ್ನು ಗೋಡೆಗೆ ಒರಗಿ ನೋಡಿದುದರಿಂದ ಅರ್ಥವಾಯಿತು. ಆದರೂ ಈ ನಾಯಿ ಮರಿಗೆ ಹಸಿವಾದಾಗ ಎದಿರಾಗಿ ಎಲೆ ಬಿದ್ದುದೂ ಎಲೆ ಬಿದ್ದಾಗಲೆಲ್ಲಾ ಪೈಪೋಟಿಗೆ ಒರಟಾಗಿ ನುಗ್ಗಿ ಒಂದರ ಮೇಲೊಂದಾಗಿ ದೊಡ್ಡ ನಾಯಿಗಳು ಬಂದುದರಿಂದ ಎಲೆಯಲ್ಲಿದ್ದು ದನ್ನು ತಿನ್ನೋಣ ಎಂಬ ತಿಳುವಳಿಕೆ ಉಂಟಾದರೂ ಅದನ್ನು ಅನುಭವವನ್ನಾಗಿಸಿ ಕೊಳ್ಳಲು ಅವಕಾಶವಾಗಲಿಲ್ಲ.

ಮಳೆ ಚಳಿಯಿಂದ ಕುಯ್ ಕುಯ್‌ಗುಟ್ಟುತ್ತಾ ಬೀದಿಯ ಬದಿಗಳಲ್ಲಿ ಹರಿಯುತ್ತಿದ್ದ ಚರಂಡಿಗಳ ಪಕ್ಕ ಪೈಪೋಟಿಗೆ ಯಾರೂ ಇಲ್ಲದುದರಿಂದ ಅದೂ ಇದೂ ಆಯ್ದು ತಿನ್ನುತ್ತಾ ಅಲೆದಾಡಿಕೊಂಡು ಆ ಸಣ್ಣ ಬೀದಿಯಲ್ಲಿ ಈ ನಾಯಿಮರಿ ಕೆಲವು ದಿನಗಳನ್ನು ಕಳೆಯಿತು.

ಒಂದು ದಿನ ಬಿಸಿಲು ಬಂದಾಗ ಮೈ ತೇವ ಆರಿ ಕೊಳೆತ ಹಣ್ಣು ಮಲ ಮುಂತಾದು ವನ್ನು ತಿಂದು ಉಂಟಾದ ಬಲದಿಂದ ಸ್ವಲ್ಪ ಸಾಮರ್ಥ್ಯ, ಬೆಳವಣಿಗೆ ಪಡೆದಿದ್ದ ಈ ನಾಯಿ ಆ ಚಿಕ್ಕ ಬೀದಿಯಿಂದ ಬೇರೊಂದು ದೊಡ್ಡ ರಸ್ತೆಯಲ್ಲಿ ತನ್ನ ಯಾತ್ರೆಯನ್ನು ಪ್ರಾರಂಭಿಸಿತು.

ಆದಿನ ಈ ನಾಯಿಗೆ ಒಂದು ಮಂಗಳವಾದ ದಿನವಾಗಿತ್ತು.

ಹಠ ಹಿಡಿದು ಅಳುತ್ತಿದ್ದ ಒಂದು ಮಗುವನ್ನು ಅದರ ತಾಯಿ ಬಲಾತ್ಕಾರದಿಂದ ಎಲ್ಲಿಗೋ ಕರೆದುಕೊಂಡು ಹೋಗುತ್ತಿದ್ದಳು. ಮಗು ಹಠದಿಂದ ಅವಳ ಹಿಡಿತಕ್ಕೆ ಸಿಕ್ಕದೆ ನೆಗೆದು ನೆಗೆದು ತಾಯಿಯ ಸೊಂಟದಿಂದ ಜಾರಿಕೊಳ್ಳುತ್ತಿತ್ತು.

ಒಂದು ಕೈಯಲ್ಲಿ ಸ್ಲೇಟು ಬ್ಯಾಗು ಹಿಡಿದುಕೊಂಡು ಆ ತಾಯಿ ಆ ಮಗುವನ್ನು ಒಂದು ಕೈಯಲ್ಲಿ ಹಿಡಿಯಲಾಗದೆ ಬೈದು ಹೊಡೆದಳು. ಹಠ ಹಿಡಿದ ಮಗು ಇನ್ನೂ ಅರಚಿ ಅಳಲಾರಂಭಿಸಿತು. ಅಳುವ ಮಗುವನ್ನು ಸಮಾಧಾನಪಡಿಸಿ ಮುದ್ದು ಮಾಡುವ ವೇಳೆಯಲ್ಲಿ ಈ ನಾಯಿ ಅಲ್ಲಿಗೆ ಹೋಗಿ ಸೇರಿತು. ಈ ನಾಯಿಯನ್ನು ತೋರಿಸಿ ಆ ಮಗುವನ್ನು ತಾಯಿ ಸಮಾಧಾನಪಡಿಸಿದಳು.

ಈಗ ಆ ಮಗು ಈ ನಾಯಿ ಬೇಕೆಂದು ಹಠ ಹಿಡಿಯಿತು.

ಆ ಮಾನವಸ್ನೇಹವನ್ನು ಅರಿತ ಈ ಅನಾಥ ನಾಯಿ ಭವ್ಯವಾಗಿ ಬಾಲವನ್ನಾಡಿಸಿತು.

ಒಳ್ಳೆಯದಾಯಿತು. ಮಳೆಯಲ್ಲಿ ನೆನೆದು ಬಿಸಿಲಲ್ಲಿ ಒಣಗಿ ಇದು ಶುದ್ಧವಾಗಿತ್ತು. ನೆನ್ನೆಯವರೆಗೆ ಇದು ತಿಂದ ಕೊಳೆತ ಹಣ್ಣು ಮಲ ಮನುಷ್ಯರದೇ ತಾನೆ!

ನಾಯಿಯನ್ನು ಎತ್ತಿಕೊಂಡು ಮುತ್ತುಕೊಟ್ಟು ಮಗುವನ್ನು ಮುದ್ದಾಡಿ ಅದರ ಕೈಗಿತ್ತಳು ತಾಯಿ.

ಈ ನಾಯಿ ಜನ್ಮ ಸಾಫಲ್ಯ ಪಡೆಯಿತು.

ಸ್ವಲ್ಪ ಕಾಲ ಆ ಮನೆಯ ಜಗುಲಿಯ ಮೂಲೆಯಲ್ಲಿ ಟ್ವೈನ್‌ದಾರದಿಂದ ಕಟ್ಟಲ್ಪಟ್ಟು ಮಗುವಿನ ನೋಟದ ಪ್ರಾಣಿಯಾಗಿಯೂ ಆಟದ ವಸ್ತುವಾಗಿಯೂ ಅದು ಬೆಳೆಯಿತು. ಅದಕ್ಕೆ ಆ ಮಗು ತನ್ನ ಮುದ್ದು ಮಾತಿನಲ್ಲಿ ಪಪ್ಪಿ ಎಂದೋ ನಿಕ್ಕಿ ಎಂದೋ ಹೆಸರಿಟ್ಟಿತು

ಈಗ ನೋಡುವುದಕ್ಕೆ ದೊಡ್ಡ ನಾಯಿಯಂತೆ ರೂಪುಗೊಂಡಿದ್ದ ಆ ಹೆಣ್ಣುನಾಯಿ ನಿಕ್ಕಿ, ಒಂದು ದಿನ ಆ ಮನೆಯ ಒಡತಿ ಹೊರಗೆ ಹೋದಾಗ ಕೃತಜ್ಞತೆಯಿಂದ ಹಿಂಬಾಲಿಸಿತು. ಅವಳು, 'ಮನೆಗೆ ಹೋಗು' ಎಂದು ಎಷ್ಟೋ ಬಾರಿ ಗದರಿಸಿದರೂ ಮಗುವಿನಂತೆ ಆಟ ತೋರಿಸಿದರೂ ಮುಚ್ಚುಮರೆಯಾಗಿ ಅವಳನ್ನು ಹಿಂಬಾಲಿಸಿ ಬಾಲವಾಡಿಸಿಕೊಂಡು ಹಾರಿ ಹಾರಿ ಓಡಿತು. ಹಾಗೆ ಆಕೆ ತನ್ನನ್ನು ಓಡಿಸುವುದು, ಆಕೆ ಓಡಿಸಿದೊಡನೆ ಸ್ವಲ್ಪ ದೂರ ಹೋಗಿ ಮತ್ತೆ ತಿರುಗಿ ನೋಡಿ, ಅವಳನ್ನು ಹಿಂಬಾಲಿಸಿ ಸಮೀಪಿಸುವುದೂ ನಿಕ್ಕಿಗೆ ಆನಂದದಾಯಕವಾದ ಆಟವಾಗಿತ್ತು. ಆಕೆಗೆ ಬೇರೆ ಕೆಲಸವಿಲ್ಲವೆ? ಕಡೆಗೆ ಮನೆಗೆ ಹೊರಟು ಹೋಗುತ್ತೆ ಎಂಬ ನಂಬಿಕೆಯಿಂದ ಅವಳು ಬಸ್ ಹತ್ತಿ ಹೊರಟು ಹೋದಳು.

ಸ್ವಲ್ಪ ದೂರ ಬಸ್ಸನ್ನು ಹಿಂಬಾಲಿಸಿ ನಾಲ್ಕು ಕಾಲುಗಳಿಂದ ಹಾರಿ ಓಡಿತು ನಿಕ್ಕಿ. ಆ ನಿಡಿದಾದ ರಸ್ತೆಯಲ್ಲಿ, ಹಿಡಿಯಲಾಗದ ಎಟುಕಲಾಗದ ವೇಗದಿಂದ ದೂರ ದೂರಕ್ಕೆ ಒಡತಿಯೊಂದಿಗೆ ಬಹುದೂರ ಹೋಗಿ ಕಡೆಗೆ ಆ ತಿರುವಿನಲ್ಲಿ ಕಣ್ಮರೆಯಾಯಿತು ಆ ಬಸ್ಸು. ಏನೋ ಒಂದು ಕುರುಡು ನಂಬಿಕೆಯಿಂದ, ಆ ಬಸ್ಸು ಮರೆಯಾದ ಮೇಲೂ ಆ ತಿರುವಿನವರೆಗೆ ನಿಕ್ಕಿ ಓಡಿತು.

ಬಸ್ಸು ಕಾಣಿಸಲಿಲ್ಲ. ಬೇರೆ ಬೇರೆ ಬಸ್ಸುಗಳೂ ಕಾರುಗಳೂ ಮನುಷ್ಯರೂ ಆ ರಸ್ತೆಯಲ್ಲಿ ಸಂಚರಿಸುತ್ತಿದ್ದರು. ಮನೆಗೆ ಹಿಂತಿರುಗಲು ಮನಸ್ಸಾಗಿ ನಿಕ್ಕಿ ತಾನು ಬಂದ ದಾರಿಯಲ್ಲಿ ಓಡಿ ಬರಬೇಕಾಯಿತು. ಬರುವ ದಾರಿಯಲ್ಲಿ ಒಂದು ಸಣ್ಣ ಗೊಂದಿ.

ಅಲ್ಲಿಂದ ಮಸಾಲೆ ವಡೆ ಎಣ್ಣೆಯ ಕಮಟು ವಾಸನೆಯೊಂದಿಗೆ ಬಂತು. ನಿಕ್ಕಿ ಸ್ವಲ್ಪ ನಿಂತು ಕಿವಿಗಳನ್ನೆತ್ತಿತು. ಬೆವರಿನ ಹನಿಗಳಿಂದ ಕೂಡಿದ ಮೂಗನ್ನು ಬಿರಿದು ವಾಸನೆ ಹಿಡಿಯಿತು. ಸಂತೋಷದಿಂದ ಹಾರಿ ಗೊಂದಿ ಸೇರಿತು.

ಓರ್ವ ಮುದುಕಿ ಮರದಡಿ ಒಲೆಯ ಸುತ್ತ ತಗಡಿನ ತುಂಡು ಮುಚ್ಚಿ ವಡೆ ತಯಾರಿ ಸುತ್ತಿದ್ದಳು. ಪಕ್ಕದಲ್ಲಿದ್ದ ಕಸದ ಕುಪ್ಪೆಯ ಮೇಲೆ ಏರಿ ಕುಳಿತು ಸ್ವಾರಸ್ಯಕರವಾಗಿ ಬಾಯಲ್ಲಿ ನೀರೂರುತ್ತಿರಲು ವಡೆ ವಾಸನೆಯನ್ನು ಅನುಭವಿಸುತ್ತಿತ್ತು ನಿಕ್ಕಿ. ಯಾವಾಗ ಲಾದರೂ ಒಂದು ವಡೆಯಲ್ಲಿ ಸ್ವಲ್ಪ ಮುರಿದು ತನ್ನೆಡೆಗೆ ಬಿಸಾಡಬಹುದು ಎಂಬ ಕಲ್ಪನೆಯಿಂದ ಅವಳನ್ನೇ ತನ್ನ ಒಡತಿಯನ್ನಾಗಿ ಭಾವಿಸಿ ಬಾಲವನ್ನಾಡಿಸಿತು.

ಯಾವುದೋ ಒಂದು ಸಂದರ್ಭ, ಅವಳೂ ಒಂದು ವಡೆಯ ಚಿಕ್ಕ ತುಂಡನ್ನು ನಿಕ್ಕಿಯ ಕಡೆಗೆ ಬಿಸಾಡಿದಳು. ನಿಕ್ಕಿಯ ಸಂತೋಷಕ್ಕೆ ಪಾರವಿಲ್ಲ. ಒಂದು ಸುತ್ತು ಹಾಕಿ ಪರವಶ ನೃತ್ಯವಾಡಿತು. ಆ ವಡೆಯ ತುಂಡನ್ನು ತಿನ್ನದೆ ನೆಲದ ಮೇಲೆ ಹಾಕಿ ಎರಡಡಿ ಹಿಂದೆ ಸರಿದು ಅದರ ಸೌಂದರ್ಯವನ್ನು ಉಪಾಸಿಸುವಂತೆ ನೋಡುತ್ತಿತ್ತು. ಅಷ್ಟರೊಳಗೆ ಯಾರೋ ಆ ವಡೆ ತುಂಡನ್ನು ಅಪಹರಿಸಲು ಬಂದ ಅವಸರದಲ್ಲಿ, ಆ ಕಲ್ಪನೆಯ ಶತ್ರುವಿ ನೊಂದಿಗೆ ಪೈಪೋಟಿಯಿಂದ ಓಡಿ ಬಂದು ತನ್ನ ವಸ್ತುವನ್ನು ಸ್ವೀಕರಿಸುವ ಅವಸರದಿಂದ ಅದನ್ನು ಕಚ್ಚಿಕೊಂಡಿತು. ಮತ್ತೆ ಆ ಪೈಪೋಟಿಯಲ್ಲಿ ಜಯಿಸಿದ ಆನಂದದಿಂದ ಬಾಯಲ್ಲಿ ಕಚ್ಚಿಕೊಂಡಿದ್ದ ಆ ವಡೆಯ ತುಂಡನ್ನು ಕೆಳಗೆ ಹಾಕಿ ಸುತ್ತಿ ಸುತ್ತಿ ಪರವಶ ನೃತ್ಯಮಾಡಿ ಆನಂದಿಸಿತು.

ಥಟ್ಟನೆ ಮಳೆ ಬಂದಿತು. ಆ ಮುದುಕಿ ಒಲೆಯನ್ನೂ ಹಲವು ವಸ್ತುಗಳನ್ನೂ ಅವಸರ ಅವಸರವಾಗಿ ಎತ್ತಿಕೊಂಡು ಪಕ್ಕದಲ್ಲಿದ್ದ ಮನೆಯ ಜಗುಲಿಗೆ ಓಡಿದಳು. ಆ ಮಳೆ ಯಿಂದಾಗಿ ನಿಕ್ಕಿಯೂ ಜಗುಲಿಯ ಪಕ್ಕ ಒರಗಿ ನಿಂತಿತು. ಜೋರಾಗಿ ಮಳೆ ಬಂದು ಸ್ವಲ್ಪ ಹೊತ್ತಾದ ನಂತರ ನಿಂತಿತು. ಮಳೆನಿಂತ ಮೇಲೆ ಬೀದಿಯಲ್ಲಿ ಜನಸಂಚಾರವುಂಟಾಯಿತು. ಶಾಲೆಯಿಂದ ಮಕ್ಕಳು ಬಂದರು.

ನಿಕ್ಕಿಗೆ ತನ್ನ ಒಡತಿ ಮತ್ತು ತನಗೆ ಹೆಸರಿಟ್ಟ ಆ ಮಗುವೂ ಜ್ಞಾಪಕಕ್ಕೆ ಬಂದರು. ಮಗುವಿನ ನೆನಪಾದೊಡನೆ ಒಂದು ಕ್ಷಣ ಕೂಡ ಅಲ್ಲಿ ಕಾಲುಗಳು ನಿಲ್ಲಲಿಲ್ಲ. ಹಾರಿ ಹಾರಿ ಓಡಿತು. ರಸ್ತೆ ಕೆಲವಾರು ದಿಕ್ಕುಗಳಲ್ಲಿ ಕವಲೊಡೆಯಿತು ಬಂದ ದಾರಿ ಯಾವುದೆಂದು ಅದಕ್ಕೆ ತಿಳಿಯಲಿಲ್ಲ. ಯಾವ ದಿಕ್ಕಿನಲ್ಲಿ ಆ ಮಗುವಿನ ಮನೆಯಿದೆಯೆಂದು ತಿಳಿಯಲಿಲ್ಲ. ನಾಲ್ಕು ದಿಕ್ಕಿನಲ್ಲೂ ಓಡಿತು. ಒಡತಿಯ ಹಿಂದೆ ಓಡಿ ಬಂದಾಗ ಆ ಅವಸರದಲ್ಲೂ ಕೆಲವು ಕಡೆ ಕುಳಿತು ಹಿಂತಿರುಗಿ ಬರುವುದಕ್ಕೆ ದಾರಿ ತಿಳಿಯಕೊಳ್ಳಲು ಅದು ಮೂತ್ರ ವಿಸರ್ಜನೆ ಮಾಡಿತ್ತು. ಈ ಹಿಂದೆ ಬಂದ ಜೋರಾದ ಮಳೆಯಲ್ಲಿ ರಸ್ತೆಯೆಲ್ಲಾ ಶುದ್ಧವಾಗಿತ್ತು.

ನಿಕ್ಕಿ ನಂಬಿಕೆಯನ್ನು ತೊರೆಯದೆ ಓಡಿಕೊಂಡಿತ್ತು. ಕತ್ತಲಾಯಿತು. ಬೀದಿಯ ಲೈಟು ಗಳು ಹತ್ತಿಕೊಂಡುವು. ಅದಕ್ಕೆ ಭಯವಾಯಿತು. ತನ್ನ ಒಡತಿಯನ್ನೋ ಮಗುವನ್ನೋ ಇನ್ನು ನೋಡಲಾಗದೇನೋ ಎಂಬ ಕಳವಳದಿಂದ ಅದು ಆಕಾಶವನ್ನು ನೋಡಿ ರೋದಿ ಸಿತು. ರಾತ್ರಿಯೆಲ್ಲಾ ಅತ್ತು ಅತ್ತು ಯಾವುದೋ ಒಂದು ರಸ್ತೆಯ ಯಾವುದೋ ಒಂದು

ಮೂಲೆಯಲ್ಲಿ ಮಲಗಿ ನಿದ್ರೆಮಾಡಿ ಎಚ್ಚೆತ್ತು ಮಾರನೆಯ ದಿನ ಬೆಳಿಗ್ಗೆ ನಿಕ್ಕಿ ಮತ್ತೆ ಅನಾಥವಾಯಿತು.

ರಸ್ತೆಯಲ್ಲಿ ಹೋಗಿ ಬರುವವರ ಹಿಂದೆ ತನ್ನ ಒಡತಿಯೇ ಎಂದು ಕಾತರದಿಂದ ಓಡಿ ಅವರಿಂದ ಹೊಡೆದೋಡಿಸಲ್ಪಟ್ಟು ಪರಿತಾಪಕರವಾಗಿ ನಿಂತಿತು ನಿಕ್ಕಿ.

ಈಗ ರಸ್ತೆಯಲ್ಲಿ ಎಂಜಲು ಎಲೆ ಬಿದ್ದಾಗ ದೊಡ್ಡ ನಾಯಿಗಳಿಗೆ ಹೆದರದೆ ಹಾರಿ ಅವುಗಳೊಂದಿಗೆ ಕಚ್ಚಾಡಿ ತನ್ನ ಭಾಗವನ್ನು ತಿನ್ನುವ ಮಟ್ಟಿಗೆ ನಿಕ್ಕಿ ಬೆಳೆದಿತ್ತು. ಆದ್ದರಿಂದ ಅದರ ಹೊಟ್ಟೆಯ ಪ್ರಶ್ನೆ ಒಂದು ರೀತಿ ಪರಿಹಾರವಾಗಿತ್ತು.

ಆದರೂ ಬಾಳಿನ ಸಮಸ್ಯೆ ಹೊಟ್ಟೆಪಾಡು ಮಾತ್ರವೇನು? ಅದಕ್ಕೆ ಮಾನವ ಸ್ನೇಹ ಹಸಿವಿಗೆ ಆಹಾರದಂತೆ ಅವಶ್ಯಕವಾಗಿತ್ತು. ಆ ಮಗುವನ್ನೂ ಒಡತಿಯನ್ನೂ ಬಹಳ ನೆನಪುಮಾಡಿಕೊಂಡು ಪ್ರತಿ ರಾತ್ರಿ ಒಂಟಿಯಾಗಿ ನಿಕ್ಕಿ ರೋದಿಸಿತು.

ರಸ್ತೆಯಲ್ಲಿ ಸರಪಳಿ ಹಾಕಿ ಕೈಯಲ್ಲಿ ಒಯ್ಯಾರವಾಗಿ ಹಿಡಿದುಕೊಂಡು ನಡೆಯುವವರ ಹಿಂದೆ ಓಡುವ ಸೊಗಸಾದ ನಾಯಿಗಳನ್ನು ಸರಪಳಿಯಿಂದ ಕಟ್ಟಿದ್ದರೂ ಮದದಿಂದ, ಹಿಡಿದವಳನ್ನೇ ಎಳೆದುಕೊಂಡು ಮುಂದೆ ಓಡುವ ಗಂಭೀರ ಸ್ವಭಾವದ ನಾಯಿಗಳನ್ನೂ ಕಾರುಗಳಲ್ಲಿ ಒಡೆಯರೊಂದಿಗೆ ಸರಿಸಮಾನವಾಗಿ ಗದ್ದುಗೆಯ ಮೇಲೆ ಕುಳಿತಂತೆ ಹೊರಗೆ ತಲೆ ನೀಡಿ ನೋಡುವ ಮುದ್ದು ನಾಯಿಗಳನ್ನೂ ಹೊಟ್ಟೆಕಿಚ್ಚಿನಿಂದ ಸಂಕಟದಿಂದ ನೋಡಿ ಅತ್ತಿತು ನಿಕ್ಕಿ.

ಕೆಲವು ವೇಳೆ ಆ ನಾಯಿಗಳು ನಿಕ್ಕಿ ತಮ್ಮನ್ನು ನೋಡುವುದನ್ನು ಕಂಡು ಹಲ್ಲುಗಳು ಹೊರಗೆ ಕಾಣುವಂತೆ ಬೊಗಳಿ ಅದರ ಮೇಲೆ ಹಾರಲು ಪ್ರಯತ್ನಿಸಿದ್ದುವು. ಆಗೆಲ್ಲಾ ಒಡೆಯರು ನಿಕ್ಕಿಯನ್ನು ಕಲ್ಲಿನಿಂದ ಹೊಡೆಯುವಂತೆ ಬೆದರಿಸುತ್ತಿದ್ದರು.

ಆಗೆಲ್ಲಾ ದೂರಕ್ಕೆ ಹೋಗಿ ಹಿಂತಿರುಗಿ ನೋಡಿ ಒಂದು ಬಾರಿ ಬೊಗಳಿ ನಿಕ್ಕಿ ಓಡಿ ಹೋಗುತ್ತಿತ್ತು.

ಒಂದು ದಿನ ಮಧ್ಯಾಹ್ನ. ಬಂಗಲೆಗಳು ತುಂಬಿದ ಒಂದು ರಸ್ತೆ. ಜನಸಂದಣಿಯೇನೂ ಇಲ್ಲ. ಒಳ್ಳೆಯ ಬಿಸಿಲು. ಹಗಲೆಲ್ಲಾ ಓಡಿ ಓಡಿ ಊರೆಲ್ಲಾ ಹುಡುಕಿಕೊಂಡು ತಿಂದು ನಿಕ್ಕಿಗೆ ಹೊಟ್ಟೆ ಉಬ್ಬಿತ್ತು. ಎಲ್ಲಾದರೂ ಸುಖಕರವಾದ ಸ್ಥಳ ನೋಡಿ ನೆರಳಿನಲ್ಲಿ ಮಲಗುವ ಉದ್ದೇಶದಿಂದ ಓಡುತ್ತಿತ್ತು.

ಯಾರೋ ತನ್ನನ್ನು ಕರೆಯುವ ಧ್ವನಿಯೋ ಸಿಡುಕೋ ಕೇಳಿಸಿತು. ಓಡುತ್ತಿದ್ದ ನಿಕ್ಕಿ ನಿಂತು ಹಿಂತಿರುಗಿ ಕಿವಿಗಳನ್ನೆತ್ತಿ ನೋಡಿತು.

ಒಂದು ಬಂಗಲೆಯ ಬೀಗ ಹಾಕಿದ ಗೇಟಿನ ಹಿಂದೆ ನಾಯಿಯೊಂದು ಮುಂದಿನ ಕಾಲು ಗಳನ್ನೆತ್ತಿ ಕಬ್ಬಿಣದ ಕಂಬಿಗಳ ಮೇಲಿಟ್ಟು ನಿಂತು ನಿಕ್ಕಿಯನ್ನು ಕರೆಯಿತು.

ಅದರ ಮೈ ಅದೇನು ಬಿಳುಪು! ಜಡೆ ಜಡೆಯಂತೆ ಒತ್ತಾಗಿ, ಬಳ್ಳಿಯಂತೆ ಸುರುಳು ಕೂದಲು ತೂಗಾಡುತ್ತಿತ್ತು. ಅದು ನಿಂತ ರೀತಿಯಿಂದ ಅದು ಗಂಡು ನಾಯಿಯೆಂದು

ತಿಳಿಯಿತು. ನಿಕ್ಕಿ ಸ್ವಲ್ಪ ನಿಂತಿತು. ಕಂಬಿಗಳನ್ನು ಕೆರೆಯುತ್ತಾ ಹಲ್ಲುಗಳನ್ನು ಬಿಟ್ಟು ಕೊಂಡು ಅದು ತನ್ನನ್ನು ಕರೆಯುವ ಕಾತರತೆಯನ್ನು ಆನಂದದಿಂದ ನೋಡಿತು. ನಿಕ್ಕಿಯನ್ನು ನೋಡಿ ಬೊಗಳದೆ ಕರೆದ ಮೊದಲನೆಯ ನಾಯಿ ಇದೇ.

ನಿಕ್ಕಿ ಮೆಲ್ಲನೆ ಬಾಲವನ್ನಾಡಿಸಿತು. ಅದರ ಸಮ್ಮತಿಯನ್ನು ಅರಿತುಕೊಂಡ ಆ ಜಾತಿ ನಾಯಿ ಇನ್ನೂ ಹೆಚ್ಚಾಗಿ ಬಾಗಿಲನ್ನು ಕೆರೆಯುತ್ತಾ ಮೇಲೇರಿತು. ಭೂಮಿಗೂ ಗೇಟಿಗೂ ಮಧ್ಯೆ ಇದ್ದ ಸಂದಿಯಿಂದ ನುಸುಳಿ ಹೊರಗೆ ಬರಲು ಪ್ರಯತ್ನಿಸಿತು! ಉಂ! ಆಗಲಿಲ್ಲ! ಆ ಸಂದಿಯಲ್ಲಿ ತೂರಲಾಗದಷ್ಟು ದೊಡ್ಡದಾಗಿತ್ತು. ಜಾತಿ ನಾಯಿ ದೀನವಾಗಿ ಕೂಗಿ ಕೊಂಡಿತು.

ನಿಕ್ಕಿಗೂ ಅದರ ಬಳಿಗೆ ಹೋಗಬೇಕೆನ್ನಿಸಿತು. ಆ ಜಾತಿ ನಾಯಿ, ತಾನು ಮಾನವನ ಸ್ನೇಹಕ್ಕಾಗಿ ಕಾತರದಿಂದ ಒದ್ದಾಡುವಂತೆ ಮತ್ತೊಂದು ನಾಯಿಗಾಗಿ ಒದ್ದಾಡುತ್ತಿದ್ದುದನ್ನು ನಿಕ್ಕಿ ಅರ್ಥಮಾಡಿಕೊಂಡಿತು. ಅದು ತನಗಾಗಿ ಕಾತರಗೊಂಡಿದೆಯೆಂದು ತಿಳಿದು ಆನಂದಪಟ್ಟಿತು. ಅದೂ ಇಷ್ಟು ದೊಡ್ಡ ಸ್ಥಳದ ಉನ್ನತ ಜಾತಿಗೇ ಸೇರಿದ ನಾಯಿಯ ಸ್ನೇಹ ಸಿಕ್ಕುವಾಗ ನಿರಾಧಾರವಾಗಿ ಬೀದಿ ನಾಯಿಯಾಗಿ ಅಲೆಯುತ್ತಿದ್ದ ನಿಕ್ಕಿ ಹೇಗೆ ಈ ಪ್ರಣಯಪೂರ್ಣ ಕರೆಯನ್ನು ಮೀರಿ ಹೋದೀತು?

ಹೊರಟು ಹೋಯಿತು. ಗೇಟಿನ ತಳದಲ್ಲಿದ್ದ ಸಂದಿಯಲ್ಲಿ ಆ ಜಾತಿ ನಾಯಿ ತೂರಲಾಗಲಿಲ್ಲ. ಆದರೆ ಈ ಬೀದಿ ನಾಯಿ ನುಸುಳಿ ಒಳಗೆ ಬರಬಹುದು ಎಂದು ಲೆಕ್ಕಾಚಾರ ಹಾಕಿದಂತೆ ಅದು ನಿಕ್ಕಿಯನ್ನು 'ಈ ದಾರಿಯಲ್ಲಿ ಬಾ' ಎಂದು ಕರೆಯುವ ರೀತಿ ನಿಕ್ಕಿಯ ಮುಂಗಾಲುಗಳಲ್ಲಿ ಒಂದನ್ನು ಹಿಡಿದೆಳೆಯಿತು.

ನಿಕ್ಕಿ ಬಂಗಲೆಯ ಕಾಂಪೌಂಡ್ ಒಳಗೆ ಓಡಿ ಹೋಯಿತು. ಎರಡೂ ಅತ್ಯಾನಂದದಿಂದ ಒಂದರ ಮೇಲೊಂದು ಹಾರಿ ಹೊರಳಿ ಬಾಯಿಯಲ್ಲಿ ಮೃದುವಾಗಿ ಕಚ್ಚಿ ಆಟವಾಡಿದುವು. ನಿಕ್ಕಿ ಅದರ ಹಿಡಿತದಿಂದ ತಪ್ಪಿಸಿಕೊಂಡು ಗರ್ವದಿಂದ ಓಡಿ ಹೋಗಿ ಆನಂದ ನೃತ್ಯ ಮಾಡಿತು. ಇದರ ಆಟವನ್ನು ಸ್ವಲ್ಪ ಹಿಂದೆ ಸರಿದು ನೋಡಿ ಅನುಭವಿಸಿದ ಆ ಜಾತಿ ನಾಯಿ ಸಮಯ ನೋಡಿ ಥಟ್ಟನೆ ನಿಕ್ಕಿಯ ಮೇಲೆ ಹಾರಿತು. ಅಷ್ಟೇ! ಆ ಹಿಡಿತದಿಂದ ಅಲುಗಾಡಲಾಗದೆ ಸಿಕ್ಕಿಕೊಂಡು ಮೇಲ್ಗಣ್ಣು ಬಿಟ್ಟಿತು ನಿಕ್ಕಿ.

ಬಂಗಲೆಯಿಂದ, ನಾಯಿ ಕಾಣಿಸಲಿಲ್ಲವಲ್ಲ ಎಂದು ಬಾಗಿಲನ್ನು ತೆರೆದುಕೊಂಡು ಹೊರಗೆ ಬಂದ ಮನೆಯ ಒಡತಿ "ಏಯ್... ಛೀ ಸರ್ದಾರ್... ಸರ್ದಾರ್" ಎಂದು ಎರಡು ಬಾರಿ ಕರೆದಳು. ಅಷ್ಟರಲ್ಲಿ ಈ ಅಪ್ಪುಗೆಯನ್ನು ಬೇರ್ಪಡಿಸಲಾಗದೆ ಹೋಗಲಾಗಿ ತನ್ನನ್ನು ಯಾರಾದರೂ ಗಮನಿಸಿದರೋ ಎಂದು ಸುತ್ತುಮುತ್ತ ನೋಡಿ ಒಳಗೆ ಹೋಗಿ ಬಾಗಿಲು ಹಾಕಿಕೊಂಡಳು ಒಡತಿ.

ಈಗೆಲ್ಲಾ ನಿಕ್ಕಿ ಎಲ್ಲಿ ಹೋದರೂ ಎಲ್ಲರೂ ಓಡಿಸುತ್ತಾರೆ. ಯಾವ ಮನೆಯ ಬಳಿಯೂ ಅದನು ಸೇರಿಸುವುದಿಲ್ಲವಲ್ಲಾ?

ಬೀದಿ ನಾಯಿ ಎಲ್ಲಿಯಾದರೂ ಮರಿ ಹಾಕಿಬಿಟ್ಟೀತೋ ಎಂಬ ಭಯದಿಂದ ಅವರು ಓಡಿಸುವರೆಂದು ನಿಕ್ಕಿಗೆ ಅರ್ಥವಾಗಲಿಲ್ಲ. ಓಡಿಸುವುದು! ಓಡಿಸುವುದು ಅದಕ್ಕೆ ಹೊಸ ದೇನು? ಆದರೂ ಈಗ ಓಡುವುದು ಶ್ರಮವಾಗಿತ್ತು; ಈ ಅನುಭವವೇ ಅದಕ್ಕೆ ಹೊಸದಾಗಿದ್ದುದು.

ಶುದ್ಧವಾದ ಜಗುಲಿಗಳ ಮೇಲೆ ಕಾಂಪೌಂಡ್ ಒಳಗೆ ಈ ಅಶುದ್ಧ ನಾಯಿಗೆ ಜಾಗ ಕೊಡಲು ನಿರಾಕರಿಸಿ ಓಡಿಸಿದ ನಂತರ ಒಂದು ದಿನ ರಾತ್ರಿ ಬಹಳ ವೇದನೆಯಿಂದ, ವಿರಕ್ತಿ ಯಿಂದ ಅಶುದ್ಧವಾದ ಪ್ರದೇಶವೊಂದಕ್ಕೆ ನಿಕ್ಕಿ ಪ್ರವೇಶಿಸಿತು.

ಅದು ಹುಟ್ಟಿತಲ್ಲಾ, ಆ ರೀತಿ ಒಂದು ದಿಣ್ಣೆ. ಶೇವ, ಕೆಸರು. ಒಂದು ಗುಡಿಸಿಲಿನ ಹಿಂದೆ ಮೂಲೆಯಲ್ಲಿ ಸೌಕರ್ಯವಾದ ಧೂಳು ಮಣ್ಣಿನಲ್ಲಿ ಐದು ಮರಿಗಳನ್ನು ಪ್ರಸವಿ ಸಿತು ನಿಕ್ಕಿ.

ಎಲ್ಲರೂ ಬಂದು ಆ ಮರಿಗಳ ಅಂದಚೆಂದವನ್ನು ಹೊಗಳಿದರು. ಯಾವುದೋ ಒಳ್ಳೆಯ ಜಾತಿ ನಾಯಿಯ ಕೂಡುವಿಕೆ ಎಂದು ಮೆಚ್ಚಿ ಮಾತನಾಡಿಕೊಂಡರು. ಕೆಲವು ದಿನಗಳಲ್ಲೇ ನಿಕ್ಕಿ ಅವನ್ನು ಕಳೆದುಕೊಂಡಿತು.

ಬಾಳು, ಹೀನಾಯತನ, ಹೆಮ್ಮೆ, ಸೋಲು, ಆನಂದ, ದುಃಖ ನಾಯಿಯ ಜೀವನದಲ್ಲಿ ಹಂತಹಂತವಾಗಿ ಬರುತ್ತದೇನೋ.

ಕಾರಿನಲ್ಲಿ ಹೋಗುವ, ಸರಪಣಿಯಿಂದ ಕಟ್ಟಿ ಕೈಯಲ್ಲಿ ಎಳೆದುಕೊಂಡು ಹೋಗುವ ಒಳ್ಳೆಯ ಜಾತಿ ನಾಯಿಗಳನ್ನು ನೋಡಿ ಈಗ ನಿಕ್ಕಿ ಓಡುತ್ತಿತ್ತು. ಬಹುಶಃ ಅದು ತನ್ನ ಮರಿಯನ್ನು ಹುಡುಕುತ್ತಿತ್ತೋ. ನಿಕ್ಕಿ ಹೆತ್ತಿದ್ದರೂ ಅವು ನಿಕ್ಕಿಯ ಜಾತಿಗೆ ಸೇರಿಬಿಡು ತ್ತದೆಯೇನು?

ಅದೋ ಬಂಗಲೆಯ ನಾಯಿಯನ್ನೋ ಅಥವಾ ಇನ್ನೊಂದು ಕೊಳಚೆ ಪ್ರದೇಶದ ನಾಯಿಯನ್ನೋ ಹುಡುಕಿ ನಿಕ್ಕಿ ಅಲೆದುಕೊಂಡಿತ್ತು. ಅದಕ್ಕೆ ಈಗ ಒಂದು ನಾಯಿಯ ಅವಶ್ಯಕತೆಯಿದ್ದ ಸೀಜನ್ ಅವಶ್ಯಕತೆ ಎಂಬುದು ಬಂದುಬಿಟ್ಟರೆ ಜಾತಿಯನ್ನು ಪರಿಗಣಿಸುತ್ತದೆಯೇನು?